# ವಿಜಯನಗರ ಸಾಮ್ರಾಜ್ಯ

(೧೩೩೬—೧೬೪೧)



●

ಬರೆದವರು

**ಶ್ರೀ. ದೇಸಾಯಿ ಪಾಂಡುರಂಗರಾಯರು ಬಿ. ಎ. (ಆನರ್ಸ)**

ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ ಧಾರವಾಡ

**ಡಾ. ಎಮ್. ಎಚ್. ಕೃಷ್ಣ ಎಮ್. ಎ., ಡಿ. ಲಿಟ್.** (ಲಂಡನ್)

ಇವರ ಮುನ್ನುಡಿಯೊಂದಿಗೆ

●

ವಿಜಯನಗರ ಸ್ಮಾರಕೋತ್ಸವ ಮಂಡಲ

ಧಾರವಾಡ

ಚಾಲುಕ್ಯವಿಕ್ರಮ ವರ್ಷ ೮೬೧]  ೧೯೩೬  [ಧಾತೃ ಸಂವತ್ಸರ

ಮುದ್ರಕರು
ವೆಂಕಟೇಶ ಮಾಧವರಾವ ಜೋಶಿ
ಶೋಧನ ಮುದ್ರಣಾಲಯ
ಧಾರವಾಡ

ಬೆಲೆ
ಸಾದಾ ೧-೧೨-೦
ಕ್ಯಾಲಿಕೋ ೨- ೪-೦

ಪ್ರಕಾಶಕರು
ಶ್ರೀ. ಜಿ. ಎಸ್. ಕುಲಕರ್ಣಿ ಎಮ್. ಎಜಿ.
ಕಾರ್ಯದರ್ಶಿ
ವಿಜಯನಗರ ಸ್ಮಾರಕೋತ್ಸವ ಮಂಡಲ
ಧಾರವಾಡ

ಅಂದು

ಆರು ನೂರು ವರ್ಷಗಳ

ಹಿಂದೆ ವಿಜಯನಗರ ಸಾಮ್ರಾಜ್ಯ

ರೂಪದಿಂದ ಹೊರಹೊಮ್ಮಿ ಅದ್ಭುತವಾದ

ಸ್ವಾಭಿಮಾನದ ಸತ್ವವನ್ನು ಅಪೂರ್ವವಾದ ಧಾರ್ಮಿಕ

ಪ್ರಭಾವವನ್ನು ಅಸಾಮಾನ್ಯವಾದ

ಸಾಂಸ್ಕೃತಿಕ ವೈಭವವನ್ನು

ಮಾನವಲೋಕದಲ್ಲಿ ಬೆಳಗಿದ

**ಕನ್ನಡ ನಾಡಿನ**

**ಅಂತರ್ಜ್ಯೋತಿಗೆ**

# ಪರಿವಿಡಿ

## ಅರವೀಡು ಮನೆತನದ ಆಳಿಕೆ

## ಪರಿಶಿಷ್ಟಗಳು

---

## ಚಿತ್ರಗಳ ಪರಿವಿಡಿ



---

ಒಟ್ಟು ಪುಟಗಳು: ೪೦೪

# ನಿವೇದನೆ

ಪುರಾತನಕಾಲದಿಂದಲೂ ಈ ಭರತಭೂಮಿಯಲ್ಲಿ ಹಿಂದೂ ಸಂಸ್ಕೃತಿಯನ್ನು ಕಾಪಾಡುವ ಸಾಧನಗಳು ಒಂದೊಂದು ರೂಪದಿಂದ ನೆಲೆಗೊಂಡಿರುವುವು. ಈ ಸಾಧನಗಳಲ್ಲಿ ಉತ್ಸವಗಳು ಮುಖ್ಯವಾದವುಗಳು. ಪೌರಾಣಿಕ ಕಾಲದಲ್ಲಿ ಈ ಸಂಸ್ಕೃತಿಯನ್ನು ಸಮ್ರಾಟರಾದ ಶ್ರೀರಾಮ, ಕೌರವರು ಪಾಂಡವರು ಮುಂತಾದವರು ಮುಖ್ಯವಾಗಿ ಕಾಯ್ದುಕೊಂಡು ಬಂದರು. ಆ ಪರಂಪರೆಯೇ ಮುಂದೆ ಎಷ್ಟೋ ಶತಮಾನಗಳ ವರೆಗೆ ಸಾಗಿತು. ಇದರ ಸ್ಮರಣಾರ್ಥವಾಗಿ ನಾವು ಇಂದಿನವರೆಗೆ ರಾಮನವಮಿ, ವಿಜಯದಶಮಿ ಮುಂತಾದ ಉತ್ಸವಗಳನ್ನು ಮಾಡುತ್ತ ಬಂದಿರುವೆವು. ಕಾಲಾಂತರದಿಂದ ಪರಸಂಸ್ಕೃತಿಯ ದಾಳಿಯು ಉತ್ತರ ಹಿಂದುಸ್ಥಾನದಲ್ಲಿ ನುಗ್ಗಿ ಇಡೀ ಭರತಖಂಡವನ್ನೇ ಆಕ್ರಮಿಸುವ ಗಂಡಾಂತರವು ಬಂದೊದಗಿದಾಗ ವಿಜಯನಗರದ ಕನ್ನಡ ಸಾಮ್ರಾಜ್ಯವು ಹಿಂದೂ ಸಂಸ್ಕೃತಿಯ ರಕ್ಷಣೆಯನ್ನು ಮಾಡಿತು. ಇಂತಹ ಸಾಮ್ರಾಜ್ಯದ ನೆನಪನ್ನು ಮನಕ್ಕೆ ತಂದುಕೊಡುವುದೇ ಬರುವ ಡಿಸೆಂಬರ ತಿಂಗಳಿನಲ್ಲಿ ಹಂಪೆಯಲ್ಲಿ ನೆರವೇರತಕ್ಕ ವಿಜಯನಗರ ಷಟ್‌ಶತ ಸಾಂವತ್ಸರಿಕೋತ್ಸವದ ಉದ್ದೇಶವು.

ಈ ಉದ್ದೇಶವನ್ನು ಕೊನೆಗಾಣಿಸುವುದಕ್ಕೋಸ್ಕರ ಏರ್ಪಡಿಸಿರುವ ಕಾರ್ಯಕ್ರಮಗಳಲ್ಲಿ ಸಾಮ್ರಾಜ್ಯೋತ್ಸವ ಮತ್ತು ಇತರ ಸಾಂಸ್ಕೃತಿಕ ಸಭೆಗಳನ್ನು ಕೂಡಿಸುವುದು, ವಿಜಯನಗರದ ಇತಿಹಾಸ, ವಿಜಯನಗರ ಸಾಮ್ರಾಜ್ಯ ಸಂಚಿಕೆ, ಆ ಸಾಮ್ರಾಜ್ಯಕ್ಕೆ ಸಂಬಂಧಿಸಿರುವ ಚಿತ್ರಸಂಗ್ರಹ ಇವುಗಳನ್ನು ಪ್ರಕಟಿಸುವುದು, ಅನುಕೂಲವಾದ ಸ್ಥಳದಲ್ಲಿ ಸಾಮ್ರಾಜ್ಯ-ಸ್ಮಾರಕ ಚಿಹ್ನವನ್ನು ಸ್ಥಾಪಿಸುವುದು ಇವು ಮುಖ್ಯವಾದವುಗಳು.

ಪುರಾತನ ಕಾಲದ ಇತಿಹಾಸವು ಪುರಾಣಗಳಲ್ಲಿಯೂ ರಾಮಾಯಣ ಮಹಾಭಾರತ ಕಾವ್ಯಗ್ರಂಥಗಳಲ್ಲಿಯೂ ಅಡಕವಾಗಿದೆ; ಅವುಗಳನ್ನು ಬರೆದಿರುವ ರೀತಿಯು ಆಗಿನ ಕಾಲಕ್ಕನುಸಾರವಾಗಿಯೇ ಇದ್ದಿತು.

ಆ ಗ್ರಂಥಗಳು ಇಂದಿನವರೆಗೂ ಪಠನ ಕೀರ್ತನ ರೂಪದಿಂದ ಜನರಲ್ಲಿ ಪ್ರಚುರಗೊಂಡಿರುವುವು. ಅವುಗಳ ಜತೆಗೆ ಅರ್ವಾಚೀನ ಸಾಮ್ರಾಜ್ಯಗಳ ಇತಿಹಾಸಜ್ಞಾನವು ಹಿಂದೂ ಸಂಸ್ಕೃತಿಯು ಸ್ಥಿರವಾಗಿ ಉಳಿಯುವುದಕ್ಕೆ ಅವಶ್ಯವು. ಅಂದಮೇಲೆ ದೊಡ್ಡ ಗಂಡಾಂತರ ಕಾಲದಲ್ಲಿ ಈ ಸಂಸ್ಕೃತಿ ಯನ್ನು ರಕ್ಷಿಸಿದ ವಿಜಯನಗರ ಸಾಮ್ರಾಜ್ಯದ ಜ್ಞಾನವು ಕರ್ನಾಟಕ ರಿಗಷ್ಟೇ ಅಲ್ಲದೆ ಇಡೀ ಭರತಖಂಡವಾಸಿಗಳಿಗೆ ಮನದಟ್ಟಾಗುವುದು ಅತ್ಯ ವಶ್ಯವೆಂದು ಬೇರೆ ಹೇಳಲಿಕ್ಕೆ ಬೇಡ. ಈ ಕಾರಣದಿಂದ ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು ಮತ್ತು ವಿಜಯನಗರ ಸಾಮ್ರಾಜ್ಯ ಸಂಚಿಕೆಯನ್ನು ಕನ್ನಡದಲ್ಲಿಯೂ ಬೇರೆ ಭಾಷೆಗಳಲ್ಲಿಯೂ ಪ್ರಕಟಿಸಲು ಸ್ಮಾರಕಸಂಸ್ಥೆಯ ಕಾರ್ಯಕಾರೀ ಮಂಡಲದವರು ಪ್ರಯತ್ನಪಡು ತ್ತಿರುವರು.

ವಿಜಯನಗರ ಸಾಮ್ರಾಜ್ಯದ ಇತಿಹಾಸಸಾಮಗ್ರಿಗಳು ಕಾವ್ಯ, ಪುರಾಣ, ಶಿಲಾಶಾಸನ, ತಾಮ್ರಪಟ, ವೀರಗಲ್ಲು, ಪರದೇಶದವರು ಬರೆ ದಿಟ್ಟ ವೃತ್ತಾಂತಗಳು, ವಿಜಯನಗರ ಸಾಮ್ರಾಜ್ಯದ ಅಧಿಕಾರಿಗಳು ಅನ್ಯರಾಷ್ಟ್ರಗಳ ಕೂಡ ನಡೆಸಿದ ಪತ್ರವ್ಯವಹಾರ ಮುಂತಾದ ರೂಪದಲ್ಲಿ ಹೇರಳವಾಗಿದ್ದರೂ ಸರ್ವ ಜನರು ಓದಲನುಕೂಲವಾದ ಇತಿಹಾಸವು ಇತ್ತೀಚಿನವರೆಗೆ ಇದ್ದಿಲ್ಲ. ಇಂತಹ ಇತಿಹಾಸವನ್ನು ಸುಮಾರು ಮೂವ ತ್ತೈದು ವರ್ಷಗಳ ಹಿಂದೆ “ ಮರೆತುಹೋದ ಸಾಮ್ರಾಜ್ಯ ” ಎಂಬ ಹೆಸರಿನಿಂದ ಮಿ. ಸಿವೆಲ್ ಸಾಹೇಬರು ಇಂಗ್ಲಿಷ ಭಾಷೆಯಲ್ಲಿ ಪ್ರಸಿದ್ಧಿಸಿ ದರು. ನಾನು ಮಾಡಿದ ಇದರ ಕನ್ನಡ ಅನುವಾದವನ್ನು ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದವರು ತಮ್ಮ “ ವಾಗ್ಭೂಷಣ ” ಮಾಸಪತ್ರಿಕೆಯಲ್ಲಿ ೧೯೦೮ನೆಯ ಇಸ್ವಿಯಲ್ಲಿ ಪ್ರಕಟಿಸಿದರು.

ಇತ್ತೀಚೆಗೆ ಇತಿಹಾಸ ಸಂಶೋಧಕರ ಲಕ್ಷ್ಯವು ಈ ವಿಷಯದ ಕಡೆಗೆ ಹೆಚ್ಚೆಚ್ಚು ಹೋಗಹತ್ತಿ ಇದರ ಸಾಹಿತ್ಯಭಾಂಡಾರವು ಹೊರಗೆಡವಲ್ಪ ಡುತ್ತಿರುವುದು. ಈ ಭಾಂಡಾರದ ಸಹಾಯದಿಂದ ಇಂಗ್ಲಿಷ ಭಾಷೆ ಯಲ್ಲಿ ಕೆಲವು ಗ್ರಂಥಗಳು ಈ ಮೊದಲೇ ಪ್ರಕಟಿಸಲ್ಪಟ್ಟಿರುವುವು.

ಸಾಮಾನ್ಯ ಜನರಿಗೆ ಇತಿಹಾಸ ಜ್ಞಾನವು ಉಂಟಾಗಬೇಕಾದರೆ ದೇಶ ಭಾಷೆಗಳಲ್ಲಿ ಇತರ ಗ್ರಂಥಗಳು ಹೊರಬೀಳುವುದು ಅವಶ್ಯವು. ಆದುದ ರಿಂದ ಕನ್ನಡಿಗರಿಗೆ ಉಪಯೋಗವಾಗುವಂತೆ ಈಗಿನ ಕಾಲಕ್ಕನುಸರಿಸಿ ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು ಬರೆದುಕೊಡಬೇಕೆಂದು ಸ್ಮಾರಕೋತ್ಸವದ ಕಾರ್ಯಕಾರೀ ಮಂಡಲದವರು ಶ್ರೀಯುತ ದೇಸಾಯಿ ಪಾಂಡುರಂಗರಾಯರಿಗೆ ಬಿನ್ನವಿಸಿದ ಮೇರೆಗೆ ಈಗ ಪ್ರಕಟಿಸಿ ರುವ ಈ ಇತಿಹಾಸವನ್ನು ಅವರು ಬರೆದುಕೊಟ್ಟರು.

ಮೇಲೆ ಹೇಳಿದಂತೆ ಇತಿಹಾಸ ಸಾಮುಗ್ರಿಗಳು ವಿವಿಧವಾಗಿರುವುವು. ಕಾವ್ಯಪುರಾಣಗಳಲ್ಲಿ ಐತಿಹಾಸಿಕ ಸಂಗತಿಗಳು ಅಡಕವಾಗಿದ್ದರೂ ಕೆಲವು ಕಡೆ ಅತಿಶಯೋಕ್ತಿಗಳಿರುವುದು ಸ್ವಾಭಾವಿಕವಿದೆ. ಶಿಲಾಶಾಸನ ತಾಮ್ರ ಪಟಗಳಲ್ಲಿ ಐತಿಹಾಸಿಕ ಸಂಗತಿಗಳು ಸಾದ್ಯಂತವಾಗಿ ದೊರೆಯುವುದು ಶಕ್ಯವಿಲ್ಲ. ಹಿಂದೂ ಜನರಲ್ಲಿ ನಿಜವಾದ ಇತಿಹಾಸವನ್ನು ಬರೆಯುವ ರೂಢಿಯು ಆ ಕಾಲದಲ್ಲಿದ್ದಿಲ್ಲವೆಂಬುದು ದುರ್ದೈವದ ಮಾತು. ಮುಸ ಲ್ಮಾನರು ನಿಷ್ಪಕ್ಷಪಾತದಿಂದ ಹಿಂದೂ ಸಾಮ್ರಾಜ್ಯದ ಸಂಗತಿಗಳ ವಿಷಯ ವಾಗಿ ಬರೆದಿರುವರೆಂದು ಹೇಳಲಾಗುವುದಿಲ್ಲ. ಇಂಥ ಪ್ರಸಂಗದಲ್ಲಿ ಕೆಲವು ಶತಮಾನಗಳ ವರೆಗೆ ಹಬ್ಬಿರುವ ಸಾಮ್ರಾಜ್ಯದ ಇತಿಹಾಸವನ್ನು ಸುಸಂಬದ್ಧವಾಗಿ ಬರೆಯುವುದು ಸುಲಭಸಾಧ್ಯವಲ್ಲ. ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾದ ಹುಕ್ಕ ಬುಕ್ಕರು ಮೊದಲು ಎಲ್ಲಿಯವರು ಎಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿರುವುವು. ಇದರ ಸ್ಥಾಪನೆಯ ಕಾರ್ಯದಲ್ಲಿ ವಿದ್ಯಾರಣ್ಯರ ಅಂಗವು ಇತ್ತೋ ಇಲ್ಲೋ, ಇದ್ದರೆ ಎಷ್ಟರ ಮಟ್ಟಿಗೆ ಇತ್ತು, ಇವು ಇನ್ನೂ ನಿಶ್ಚಿತವಾಗಿಲ್ಲ. ಸಾಮ್ರಾಜ್ಯ ಸ್ಥಾಪನೆಯ ಕಾಲವು ಸಹ ವಾದಗ್ರಸ್ತ ವಿಷಯವಾಗಿದೆ. ಇನ್ನೂ ಎಷ್ಟೋ ಸಂಗತಿಗಳ ಬಗ್ಗೆ ಸಹ ಮತಭೇದವಿರುವುದು. ಹೀಗಿರುವಾಗ ಶ್ರೀಯುತ ದೇಸಾಯಿಯವರು ಬಹಳ ಪರಿಶ್ರಮಪಟ್ಟು ಈಗಿನ ಪರಿಸ್ಥಿತಿಗೆ ಯೋಗ್ಯ ವಾದ ಈ ಇತಿಹಾಸವನ್ನು ಸಕಾಲಕ್ಕೆ ಪೂರ್ತಿಗೊಳಿಸಿಕೊಟ್ಟದ್ದಕ್ಕಾಗಿ ಕಾರ್ಯಕಾರೀ ಮಂಡಲದವರು ಅವರಿಗೆ ವಿಶೇಷ ಕೃತಜ್ಞರಾಗಿರುವರು.

ಮಂಡಲದವರ ವಿನಂತಿಯನ್ನು ಮಾನ್ಯಮಾಡಿ ಶ್ರೀಮಾನ್ ಡಾ. ಎಮ್. ಎಚ್. ಕೃಷ್ಣ ಇವರು ಈ ಗ್ರಂಥಕ್ಕೆ ಸರಿಯಾದ ಮುನ್ನುಡಿಯನ್ನು ಬರೆದುಕೊಟ್ಟದ್ದಕ್ಕಾಗಿ ಅವರಿಗೂ ಈ ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಇಲ್ಲಿಯ ಮೋಹನ ಅಚ್ಚುಕೂಟದವರಿಗೂ ಮಂಡಲದವರು ಆಭಾರಿಯಾಗಿರುವರು.

ವಿಜಯನಗರ ಸಾಮ್ರಾಜ್ಯ
ಸ್ಮಾರಕೋತ್ಸವ ಮಂಡಲ, ಧಾರವಾಡ.
೨೫—೧೦—೩೬

ವೀರಭದ್ರಪ್ಪ ಹಾಲಭಾವಿ
ಬಿ. ಎ., ಎಲ್‌ಎಲ್. ಬಿ.
ರಿಟಾಯರ್ಡ ಫರ್ಸ್ಟ್‌ಕ್ಲಾಸ
ಸಬ್‌ಜಜ್ಜ
ಅಧ್ಯಕ್ಷ, ಕಾರ್ಯನಿರ್ವಾಹಕ
ಮಂಡಲಿ

# ನನ್ನ ಅರಿಕೆ

ಈಗಣ ಜೀವನದಷ್ಟೆ ವೈಚಿತ್ರ್ಯಮಯವಾಗಿಯೂ ಮಹತ್ವ ಪೂರ್ಣವಾಗಿಯೂ ಒಂದು ಕಾಲದಲ್ಲಿ ಬಾಳಿದ ಜೀವನವನ್ನು ಉಚಿತ ವಾದ ಪ್ರಮಾಣಬಲದಿಂದ ಮತ್ತೆ ನಿರ್ಮಿಸಿ ತೋರಿಸುವುದೆ ಚರಿತ್ರೆಯ ಹಿರಿದಾದ ಗುರಿಯಾಗಿದೆ. ಈ ವಿಧಾನದಲ್ಲಿ, ಚರಿತ್ರೆಯು ಸಾಹಿತ್ಯದ ಒಂದು ಅಂಗವಾಗಿ, ಸಾಹಿತ್ಯವು ಚರಿತ್ರೆಯ ಒಂದು ಅಂಶವಾಗುವುದಲ್ಲದೆ ಚರಿತ್ರೆಯು ಸಾಹಿತ್ಯಕ್ಕೂ ಮಿಗಿಲಾಗಿ ಜೀವನಪ್ರಚೋದಕವಾಗಿ ನಿಲ್ಲುವುದು. ಇಂತು ಕಲಾಮಯವಾದ ಶಾಸ್ತ್ರವು ಈ ಚರಿತ್ರೆಯು. ಈ ಸಂದರ್ಭದಲ್ಲಿ ವಿಖ್ಯಾತ ಆಂಗ್ಲ ಚರಿತ್ರಕೋವಿದನಾದ ಪ್ರೊ. ಟ್ರಿವೆ-ಲಿಯನನು (Trevelyan) ಹೀಗೆ ಹೇಳುವನು :

"Consider all that lies in that one word Past ! What a pathetic, sacred, in every sense *poetic* meaning is implied in it ! ......... History after all is the true poetry. And Reality, if rightly interpreted, is greater than Fiction."

— Clio, A Muse & Other Essays, p. 102.

*    *    *    *

ಕರ್ನಾಟಕದ ಸಾಮ್ರಾಜ್ಯಜೀವನವು ಒಂದು ಸಾವಿರ ವರ್ಷ ಗಳಿಗೆ ಮಿಕ್ಕಿ ಬಾಳಿತು. ಈ ಜೀವನದ ಧಾರ್ಮಿಕ, ಸಾಮಾಜಿಕ ಮೊದಲಾದ ಪರಿಗಳನ್ನು ಬೇರೆ ಬೇರೆಯಾಗಿ ವಿವರಿಸುವ ವಿಷಯವಂತಿ ರಲಿ, ಮೊದಲು ಸಮಗ್ರವಾದ ಬರಿಯ ರಾಜಕೀಯ ಚರಿತ್ರೆಯನ್ನು ಸ್ಥೂಲವಾಗಿ ನಿವೇದಿಸುವ ಸಮರ್ಪಕವಾದ ಒಂದು ಗ್ರಂಥವಾದರೂ ಇದುವರೆಗೆ ಕನ್ನಡದಲ್ಲಿ ಹುಟ್ಟಿಲ್ಲ. ಹೀಗಿರುವಲ್ಲಿ ಕರ್ನಾಟಕದ ಈ ಚರಿತ್ರೆಯ ಒಂದೊಂದು ಕಾಲಖಂಡವನ್ನು ಕುರಿತು ಪ್ರತಿಪಾದಿಸುವ ಚರಿತ್ರಗ್ರಂಥಗಳನ್ನು ಬಯಸುವುದಂತೂ ಇನ್ನಿಷ್ಟು ದೂರದ ದಾರಿ.

ಕರ್ನಾಟಕದ ರಾಜಕೀಯ ಜೀವನಪ್ರಪಂಚದಲ್ಲಿ ವಿಜಯ ನಗರಸಾಮ್ರಾಜ್ಯದ ಜೀವಮಾನವು ಅತ್ಯಂತ ಸಂಸ್ಮರಣೀಯವಾಗಿದೆ. ವಿಜಯನಗರದ ಉಜ್ವಲವಾದ ಈ ಜೀವನದ ಸ್ಮೃತಿಯನ್ನು ಆಧುನಿಕ ಯುಗದ ವಿದ್ಯಾವಂತರಿಗೆ ಮೊದಲು ಬೆಳಗಿಸಿ ತೋರಿಸಿದವರು ಸಿವೆಲ ಸಾಹೇಬರು. ಇವರ 'ಮರೆತು ಹೋದ ಸಾಮ್ರಾಜ್ಯ'ವು ಭಾರತೀಯರ ಭಾವಲೋಕದಲ್ಲಿ 'ಮರೆಯಲಾಗದಂತಹ ಸಾಮ್ರಾಜ್ಯ' ಪರಂಪರೆಯನ್ನು ನಿರ್ಮಿಸಿ ದಿನದಿನಕ್ಕೆ ಹೆಚ್ಚು ಹೆಚ್ಚಾಗಿ ಬೆಳೆಸಿತು. ಅಂದಿನಿಂದ (೧೯೦೦) ಅನೇಕ ಸಂಶೋಧನೆಗಳೂ ಪರಿಶ್ರಮಗಳೂ ವ್ಯಾಸಂಗಗಳೂ ಅಖಂಡವಾಗಿ ನಡೆದು, ವಿಜಯನಗರದ ಚರಿತ್ರೆಯ ಸಾಧನ ಸಾಮಗ್ರಿಯೂ ಅಪಾರವಾಗಿ ಬೆಳೆದಿದೆ. ಈ ಸಾಮಗ್ರಿಯನ್ನು ಸಮರ್ಪಕವಾಗಿ ಬಳಸಿಕೊಂಡು ಸಾಧಾರಣವಾದ ವಿಜಯನಗರದ ಒಂದು ಚರಿತ್ರಗ್ರಂಥವನ್ನು ರಚಿಸುವುದಾದರೂ ಅದು ಸುಲಭವಾಗಿ ಸಾವಿರಾರು ಪುಟಗಳನ್ನು ಮೀರಬಹುದು.

ಆಧುನಿಕ ಪರಿಶೋಧನೆಯ ಫಲಗಳನ್ನೆಲ್ಲ ಜೀರ್ಣಿಸಿಕೊಂಡು ಸಾಮಾನ್ಯರಾದ ಕನ್ನಡ ವಾಚಕರಿಗೆ ಸುಗಮವಾಗುವಂತೆ ವಿಜಯನಗರದ ಸಂಪೂರ್ಣವಾದ ಚರಿತ್ರೆಯನ್ನು ಹೇಳುವಂತಹ ಗ್ರಂಥವು ಕನ್ನಡದಲ್ಲಿ ಇಲ್ಲ. ಈ ಕೊರತೆಯನ್ನು ಕೆಲಮಟ್ಟಿಗಾದರೂ ನೀಗುವ ಉದ್ದೇಶದಿಂದ ನಾನೀ ಪರಿಶ್ರಮವನ್ನು ಮಾಡಿದುದು. ಪ್ರಾಮುಖ್ಯವಾಗಿ ರಾಜಕೀಯ ಜೀವನವನ್ನು, ಆನುಷಂಗಿಕವಾಗಿ ಧಾರ್ಮಿಕ, ಸಾಹಿತ್ಯಕ ಮೊದಲಾದ ಜೀವನಾಂಗಗಳನ್ನು ಸಂಕ್ಷೇಪವಾಗಿ ಚಿತ್ರಿಸಲು ನಾನಿದರಲ್ಲಿ ಪ್ರಯತ್ನಿಸಿದ್ದೇನೆ.

ಈ ಕಾರ್ಯದಲ್ಲಿ ಹಲವು ಎಡರುಗಳು ನನ್ನನ್ನು ಇದಿರಿಸಿವೆ. ಮೊದಲನೆಯದು ಸ್ಥಲಸಂಕೋಚ. ಭವ್ಯವಾದ ದಿವ್ಯವಾದ ಆ ವಿಜಯನಗರದ ಒಂದೊಂದು ಜೀವನಾಂಗದ ಒಂದೊಂದು ಪರಿಯನ್ನು ವಿವರಿಸಲು ಇಂತಹ ಒಂದೊಂದು ಗ್ರಂಥವೂ ಸಾಲದು ಎಂಬಂತಿರುವಾಗ, ಸಮಗ್ರವಾದ ಆ ಜೀವನಚರಿತ್ರೆಯನ್ನು ಕಿರಿದಾದ ಇಂತಹ ಒಂದು

ಹೊತ್ತಿಗೆಯಲ್ಲಿ ಹುದುಗಿಸುವುದೆಂದರೆ ಮುಗಿಲುದ್ದ ಬೆಟ್ಟವನ್ನು ಗೇಣುದ್ದ
ಪಟದಲ್ಲಿ ಎಳೆದು ತೋರಿಸಿದಂತೆಯೆ. ಸಾಕಷ್ಟು ಗ್ರಂಥಭಾಂಡಾರದ
ಅಭಾವವು, ಕಾಲಪರಿಮಿತಿಯು ನನ್ನನ್ನು ಬಾಧಿಸಿದ ಬೇರೆ ಕೊರತೆಗಳಾ
ಗಿವೆ. ಆದರೂ ಸಾಧ್ಯವಿದ್ದಮಟ್ಟಿಗೆ ನನಗೆ ಉಪಲಬ್ಧವಾದ ಸಾಧನಗಳ
ನ್ನೆಲ್ಲ ಉಪಯೋಗಿಸಿಕೊಂಡು ನಾನು ಕಂಡ ವಿಜಯನಗರದ ದರ್ಶನವನ್ನು
ಯಥಾರ್ಥವಾಗಿ, ಅಲ್ಪವಾದ ನನ್ನ ಶಕ್ತಿ ಬುದ್ಧಿಗಳಿಗನುಗುಣವಾಗಿ
ರೂಪುಗೊಳಿಸಿ ನಿಲ್ಲಿಸಿದ್ದೇನೆ. ಇದರಲ್ಲಿ ನಿರಾಧಾರವಾದುದಿಲ್ಲ. ನೋಡುವ
ದೃಷ್ಟಿಯು, ಇಡುವ ರೀತಿಯು ಮಾತ್ರ ನನ್ನದು.

ಇದರಲ್ಲಿ ನಾನು ಹೆಚ್ಚಾಗಿ ಅನುಸರಿಸದುದು ಸಮನ್ವಯ
ಮಾರ್ಗವು. ವಿಜಯನಗರದ ಚರಿತ್ರೆಯ ಸಾಧನಸಾಮಗ್ರಿಯು ಸಮೃ
ದ್ಧವಾಗಿದ್ದರೂ ಆದರಲ್ಲಿಯ ಕೆಲವು ಸಂವಿಧಾನಗಳು ಅತಿಜಟಿಲವಾದ
ಸಮಸ್ಯೆಗಳಾಗಿ ನಿಂತಿವೆ. ಇಂತಹವುಗಳಲ್ಲಿ ವಿಜಯನಗರದ ಆರಂಭವು
ಪ್ರಧಾನವಾದುದು. ಸಮಂಜಸವಾದ ಸಂಶೋಧನೆಗೆ ಒಪ್ಪಿಗೆಯಾಗು
ವಂತೆಯೂ ಸಾಮಾನ್ಯ ವಾಚಕರಿಗೆ ಸರಲವಾಗುವಂತೆಯೂ ಸಮ
ನ್ವಯ ರೀತಿಯಿಂದ ಕಥಾಸೂತ್ರವನ್ನು ಮುಂದುವರಿಸಿ ಇಂತಹ ಕಣಿವೆ
ಗಳನ್ನು ದಾಟಿ ಹೋಗಲು ಸಾಹಸಪಟ್ಟಿದ್ದೇನೆ.

ಹರಿಹರನು ಸ್ವರಾಜ್ಯದ ಉಪಕ್ರಮವನ್ನು ಹೇಗೆ ಮಾಡಿದ
ನೆಂಬುದು ಇನ್ನೂ ಗೂಢವೂ ಅನಿರ್ಣೀತವೂ ಆಗಿದೆ. ವಿಜಯನಗರದ
ಸ್ಥಾಪನೆಯು ೧೩೩೬ ರಲ್ಲಿ ಆರಂಭವಾಗಿ ೧೩೪೬ ರಲ್ಲಿ ಮುಗಿಯಿತು
ಎಂದು ಸಾಧಾರವಾಗಿ ನಾನು ಮಂಡಿಸಿದುದು '೩೬' ಮತ್ತು
'೪೬' ಈ ಉಭಯವಾದಿಗಳಿಗೂ ಮಾನ್ಯವಾಗಬೇಕೆಂದು ನಾನು ಎಣಿ
ಸಿದ್ದೇನೆ. ಇದೇ ಮಾತನ್ನು ವಿಜಯನಗರದ ರಾಜಧಾನಿಯ ಸ್ಥಾಪನೆ
ಯನ್ನು ಕುರಿತು ಹೇಳಬಹುದು. ವಿದ್ಯಾರಣ್ಯರನ್ನು ಕುರಿತು ನಾನು
ಸ್ವೀಕರಿಸಿದ ಪಕ್ಷವು ಪುರಾಣ ಮತ್ತು ನವಮತವಾದಿಗಳಿಗೆ ಹೇಗೆ
ರುಚಿಸುವುದೋ ಹೇಳಲಾರೆನು. ಆದರೂ ಇದರಲ್ಲಿಯ ಸಯುಕ್ತಿ
ಕತೆಯು ಸುಜ್ಞರಿಗೆ ಸಮ್ಮತವಾಗಬಹುದಾಗಿ ಹಾರಯಿಸುವೆ. ಪರಂ
ಪರಾಗತವಾದ ವಿದ್ಯಾರಣ್ಯರ ಗೌರವವನ್ನು ಅಲ್ಲಗಳೆವ ವಾದಿಗಳು

ಶೃಂಗೇರೀ ಪೀಠದ ಸ್ವಾರ್ಥವನ್ನು ಅದಕ್ಕೆ ಪ್ರಬಲ ನಿಮಿತ್ತವಾಗಿ ಮುಂದುವರಿಸಬಹುದು. ಆದರೆ ವಿಜಯನಗರ ಸ್ಥಾಪನೆಯ ಪರಂಪರಾಗತ ವರ್ಷವಾದ ೧೩೩೬ ನ್ನು ವಿರೋಧಿಸಲು ಇಂತಹ ಯಾವ ಸೆನವೂ ದೊರೆಯಲಾರದುದರಿಂದ ವಿಜಯನಗರ ಸಾಮ್ರಾಜ್ಯವು ೧೩೩೬ ರಲ್ಲಿ ಆರಂಭವಾಯಿತು ಎಂಬ ಮತವು ಇನ್ನಷ್ಟು ಸ್ಥಿರವಾಗಿ ನಿಲ್ಲುತ್ತದೆ. ವಿಶ್ವಸನೀಯನಲ್ಲದ ಫಿರಿಸ್ತನನ್ನು ಪೂರ್ತಿಯಾಗಿ ತೊರೆವ ಸಾಹಸವನ್ನು ತೋರಿಸಿದುದಕ್ಕಾಗಿ ಸತ್ಯಶೋಧಕರು ನನ್ನನ್ನು ದೂರಲಾರರು ಎಂದು ನಂಬಿದ್ದೇನೆ.

ರಾಜಕೀಯ ಜೀವನಕ್ಕಿಂತ ಜನಾಂಗದ ಸಾಮಾಜಿಕ ಮುಂತಾದ ಜೀವನಾಂಗಗಳಿಗೆ ಚರಿತ್ರೆಯಲ್ಲಿ ಹೆಚ್ಚು ಪ್ರಾಶಸ್ತ್ಯವಿರಬೇಕೆಂಬ ಅಭಿಪ್ರಾಯದಿಂದ ವಿಜಯನಗರದ ರಾಜಕೀಯ ಚರಿತ್ರೆಯನ್ನು ಸಂಕ್ಷೇಪವಾಗಿ ಮುಗಿಸಿ,ಮಿಕ್ಕ ಚರಿತ್ರಾಂಶಗಳನ್ನು ವಿಶದವಾಗಿ ನಿವೇದಿಸುವುದು ನನ್ನ ಮೂಲ ಉದ್ದೇಶವಾಗಿದ್ದಿತು. ಆದರಂತೆ ಸಾಮಗ್ರಿಯಾದರೂ ಸಿದ್ಧಪಡಿಸಿದುದಾಯಿತು. ಆದರೆ ಈಗ ಮೊದಲು ಅತ್ಯಾವಶ್ಯಕವಾಗಿದ್ದ ಈ ರಾಜಕೀಯ ಚರಿತ್ರೆಯ ಬರಿಯ ಕೆಲವು ಸೀಮಾರೇಷೆಗಳೇ ಎಣಿಕೆ ಮೀರಿ ಗ್ರಂಥವನ್ನು ವಿಸ್ತರಿಸಿದುದರಿಂದ ಆ ಮೊದಲಿನ ಯೋಜನೆಯನ್ನು ಬಿಟ್ಟು ಬಿಡಬೇಕಾಯಿತ.. ಸಿದ್ಧವಾದ ಆ ಸಾಮಗ್ರಿಯ ಅತಿ ಸಂಕ್ಷೇಪವಾದ ಸ್ವರೂಪವನ್ನು ೨೯–೩೦ ಈ 'ವಿಲಾಸ'ಗಳಲ್ಲಿ ಕಾಣಬಹುದಾಗಿದೆ.

ಚರಿತ್ರೆಯು ಮೆಲ್ಲಮೆಲ್ಲನೆ ರೂಪುಗೊಳ್ಳುತ್ತಿರುವ ವಿಶಾಲವಾದ ಒಂದು ಪ್ರಪಂಚವು. ಇದರಲ್ಲಿಯ ಕೆಲವು ಸಂನಿವೇಶಗಳು ಇದೀಗ ಅಂತಿಮು ಸತ್ಯವೆಂದು ರಾದ್ಧಾಂತಮಾಡಲು ಯಾರಿಗೂ ಸಾಧ್ಯವಲ್ಲದಂತಹವು ಆಗಿರುತ್ತವೆ. ನಾನು ಈ ಚರಿತ್ರೆಯಲ್ಲಿ ಹೇಳಿದ ಕೆಲವು ಘಟನೆಗಳ ರೀತಿ, ಕಾಲ ಮುಂತಾದುವುಗಳ ಬಗೆಗೆ ಭಿನ್ನಾಭಿಪ್ರಾಯಗಳಿವೆ ಎಂಬುದನ್ನು ಅರಿತಿರುವೆನು. ಸತ್ಯದ ಗುರಿಯತ್ತ ಹೊರಟಿರುವ ಪ್ರವಾಸಿಗಳಲ್ಲಿ ನಾನೊಬ್ಬನು. ಇಂತಹ ಪ್ರವಾಸಿಗಳ ವಿಚಾರಮಥನದಲ್ಲಿಯೇ ಒಮ್ಮೆ ಕೊನೆಯ ಸತ್ಯವು ಉದಯವಾಗುವುದು.

ನಾನು ಎಷ್ಟು ಎಚ್ಚರ ಪಟ್ಟಿದ್ದರೂ ಹಲವರಿಗೆ ಹಲವು ರೀತಿಯಿಂದ ಹಿರಿದಾಗಿ ತೋರುವ ಸಂಗತಿಗಳು ಇದರಲ್ಲಿ ಬಾರದೆ ಉಳಿದುಕೊಂಡಿರಬಹುದು. ಮೇಲೆ ಸೂಚಿಸಿದಂತೆ ವಿಜಯನಗರದ ಚರಿತ್ರೆಯು ಮಹಾಸಾಗರದಂತಹ ವಿಷಯವು. ವಿಜಯನಗರದ ವಿಶಾಲದೃಷ್ಟಿಯನ್ನೂ ಉದಾರ ಹೃದಯವನ್ನೂ ಪರಿಶೀಲಿಸಿದ ನಾನು ಅದರ ಚರಿತ್ರಲೇಖನದಲ್ಲಿ ಸಾಧ್ಯವಿದ್ದಷ್ಟು ಈ ಧ್ಯೇಯವನ್ನೇ ಅನುಸರಿಸಲು ಪ್ರಯತ್ನಿಸಿದ್ದೆನೆ. ಯಾವ ಜಾತಿ, ಧರ್ಮ, ಮತಗಳಿಗೆ ಯಾವುದೇ ರೀತಿಯಿಂದ ಅನ್ಯಾಯವಾಗದಂತೆ ಗಮನವನ್ನು ಕೊಟ್ಟಿದ್ದೇನೆ. ಹೀಗಿದ್ದೂ ಏನಾದರೂ ಲೋಪಗಳು ಉಂಟಾಗಿದ್ದರೆ, ಅದರ ದೋಷವು ಪರಿಮಿತವಾದ ನನ್ನ ಶಕ್ತಿಯದಲ್ಲದೆ ಬುದ್ಧಿಪೂರ್ವಕವಾದ ಹೇತುವಿನದಲ್ಲವೆಂಬುದನ್ನು ವಿಬುಧರು ಆಲಿಸಬೇಕು. ನಡೆವವನು ಎಡಹುವನು. ದೊಡ್ಡವರಾದವರು ಎಡಹಿದವನನ್ನು ಎತ್ತಿಕೊಳ್ಳುವರು.

ಭಾಷೆಯ ವಿಷಯದಲ್ಲಿ ಒಂದು ಮಾತು. ಇದು ವಿಷಯಕ್ಕೆ ತಕ್ಕಂತೆ ಪ್ರೌಢವೂ ಗಂಭೀರವೂ ಆಗಿರುವಂತೆ ನೋಡಿಕೊಂಡಿದ್ದೇನೆ. ಪ್ರಾದೇಶಿಕವಾದ ಪದಗಳನ್ನು ಆದಷ್ಟು ಮಟ್ಟಿಗೆ ಕಡಿಮೆಯಾಗಿ ಬಳಸಲಾಗಿದೆ. ಈ ಕಾರಣಗಳ ಮೂಲಕವೂ ಅನೇಕ ವಿಷಯಗಳನ್ನು ಬಹು ಸಂಗ್ರಹವಾಗಿ ಹೇಳಬೇಕಾದುದರಿಂದಲೂ ಕೆಲವೆಡೆ ಹೆಚ್ಚಿನ ಬಿಗುವೂ ಸಂಸ್ಕೃತಪ್ರಾಚುರ್ಯವೂ ಬಂದಿರುವುದು ಅಪರಿಹಾರ್ಯವಾಗಿದೆ. ವೈವಿಧ್ಯವನ್ನು ಕಾಯುವುದಕ್ಕಾಗಿ ಕೊಸರು, ಕಸಿ (ಕಿತ್ತುಕೊಳ್ಳು) ಮುಂತಾದ ಕೆಲವು ಶಬ್ದಗಳನ್ನು ( ಪ್ರಾದೇಶಿಕವಾಗಿ ತೋರಿದರೂ ) ಅಲ್ಲಲ್ಲಿ ರೂಢಿಸಿದ್ದೇನೆ. ಕನ್ನಡ ಉಚ್ಚಾರಸೌಕರ್ಯಕ್ಕಾಗಿ ಕೆಲವು ಅಂಕಿತನಾಮಗಳ ರೂಪಗಳನ್ನು ಪಳಗಿಸಿಕೊಂಡುದಾಗಿದೆ. ಉದಾ : ತಿರುವಣ್ಣ (ಣ್ಣಾ) ಮಲೆ ಇ.

ನಾನು ಉಪಯೋಗಿಸಿದ ಆಧಾರಗ್ರಂಥಗಳ ಪಟ್ಟಿಯನ್ನು ಇದರ ಜೊತೆಯಲ್ಲಿ ಜೋಡಿಸಿದ್ದೇನೆ. ಇವುಗಳಲ್ಲಿ ನನಗೆ ಹೆಚ್ಚಾಗಿ ಸಹಾಯವಾದುದು ಶ್ರೀ. ಹಯವದನರಾಯರ ಮೈಸೂರ ಗ್ಯಾಝೆಟಿಯರ್

(ವಿಜಯನಗರ ಭಾಗ). ಈ ಎಲ್ಲ ಗ್ರಂಥಕಾರರಿಗೆ ಮತ್ತು ಲೇಖಕರಿಗೆ ನಾನು ಬಹಳ ಋಣಿಯಾಗಿದ್ದೇನೆ. ವಿವಾದಾಸ್ಪದವಾದ ವಿಷಯಗಳಿಗಷ್ಟೆ ಟಿಪ್ಪಣಿಗಳನ್ನು ಕೊಟ್ಟಿದ್ದೇನೆ. ಅವುಗಳಲ್ಲಿ ಸ್ಪಷ್ಟೀಕರಣರೂಪವಾದುವೂ ಚಿಕ್ಕವಾದುವೂ ಅಡಿಟಿಪ್ಪಣಿಗಳಾಗಿವೆ. ದೊಡ್ಡವೂ ಚರ್ಚಾತ್ಮಕವೂ ಆದುವುಗಳನ್ನು 'ದೀರ್ಘಟಿಪ್ಪಣಿಗಳು' ಎಂದು ಕರೆದು ಗ್ರಂಥದ ಕೊನೆಯಲ್ಲಿ ಸೇರಿಸಿದ್ದೇನೆ. ಹೆಚ್ಚಿನ ಕೆಲವು ವಿಷಯಗಳನ್ನು ತಿಳಿಸುವುದಕ್ಕೆ ಪರಿಶಿಷ್ಟಗಳನ್ನು ಬರೆದಿರುವೆನು.

* * * *

ವಿಜಯನಗರ ಸಾಮ್ರಾಜ್ಯವು ಸ್ಥಾಪಿತವಾಗಿ ಇಂದಿಗೆ ಆರುನೂರು ವರ್ಷಗಳಾದುವು. ವಿಜಯನಗರಸಾಮ್ರಾಜ್ಯವು ಬಾಳಿ ಸುಮಾರು ಮೂರು ನೂರು ವರ್ಷಗಳು ಗತಿಸಲು, ಕನ್ನಡ ಜನಾಂಗವು ಘೋರವಾದ ಪ್ರಳಯಕ್ಕೆ ಈಡಾಯಿತು. ಮುಂದೆ ಮೂರುನೂರು ವರ್ಷಗಳವರೆಗೆ ಅದು ಅನೇಕ ವಿಧದ ಕಷ್ಟಪರಂಪರೆಗಳಲ್ಲಿ ತೊಳಲಾಡಿತು. ಈ ವಿಷಣ್ಣ ಕಾಲವು ಸರಿದು ಮತ್ತೆ ಅದರ ಭಾಗ್ಯೋದಯವಾಗುವ ಸ್ಪಷ್ಟವಾದ ಸೂಚಿಹ್ನಗಳು ತೋರುತ್ತಲಿವೆ. ಕನ್ನಡ ಜನಾಂಗವು ಎಚ್ಚತ್ತು ಇದೀಗ ನವಕರ್ನಾಟಕವು ನಿರ್ಮಾಣವಾಗುತ್ತಲಿದೆ. ಈ ಶುಭಸಮಯದಲ್ಲಿ ಕನ್ನಡ ಜನಾಂಗವು ವೈಭವಶಾಲಿಯಾದ ವಿಜಯನಗರವನ್ನು ನೆನೆದು, ಆರು ನೂರು ವರ್ಷಗಳ ಹಿಂದಿನ ವಿಜಯನಗರದ ಆ ವಿಜಯಶಾಲಿಯಾದ ಜೀವನದ ತಿರುಳನ್ನು ಪಡೆದುಕೊಂಡು ಮುಂದೆ ಸಾಗಲು ಸಿದ್ಧಯಿಸಿದೆ. ವಿಜಯನಗರ ಸಾಮ್ರಾಜ್ಯ ಸ್ಮಾರಕದ ರಹಸ್ಯವಿದು, ಪ್ರಯೋಜನವಿದು.

ವಿಜಯನಗರಸಾಮ್ರಾಜ್ಯದ ಆರು ನೂರನೆಯ ವರ್ಷದ ಜಯಂತಿ ಉತ್ಸವವನ್ನು ಅಖಿಲ ಕರ್ನಾಟಕದವರು ಮಾಡಬೇಕೆಂಬ ಕಲ್ಪನೆಯು ಐದು ವರ್ಷಗಳ ಹಿಂದೆ ಉದಯವಾಯಿತು. ಇದರ ಉತ್ಪಾದಕರು ಹುಬ್ಬಳ್ಳಿಯ ಶ್ರೀಮಾನ್ ಬೆಂಗೇರಿ ಪ್ರಹ್ಲಾದರಾಯರು. ಕೂಡಲೆ ಈ ಕಲ್ಪನೆಯು ಅನೇಕರಿಗೆ ಮಾನ್ಯವಾಗಿ ಅದರ ಪ್ರತಿಧ್ವನಿಗಳು ಕರ್ನಾಟಕದ

ಎಂಟೂ ಮೂಲೆಗಳಲ್ಲಿ ಎದ್ದುವು. ಈ ಸಮಾರಂಭವು ಅಖಿಲ ಭಾರತೀಯ ಸ್ವರೂಪವನ್ನು ಹೊಂದಿ ಬಹು ವಿಜೃಂಭಣೆಯಿಂದ ನೆರವೇರಬೇಕೆಂಬ ಮನೋರಥಗಳು ಮುಂದುವರಿದುವು. ೧೯೩೩ರ ಕೊನೆಯಲ್ಲಿ ವಿಜಯ ನಗರಸಾಮ್ರಾಜ್ಯಸ್ಮಾರಕ ಮಂಡಲಿಯು ಸ್ಥಾಪನವಾಗಿ ಕಾರ್ಯಕ್ಕೆ ಆರಂಭವಾಯಿತು. ಈ ಕಾರ್ಯವು ಈಗ ಅನೇಕ ವಿಧದಿಂದ ರೂಪು ಗೊಂಡಿದೆ. ಈ ವರ್ಷದ ಅಂತ್ಯದಲ್ಲಿ ಅಖಿಲ ಕರ್ನಾಟಕದಲ್ಲಿಯೂ ಭಾರತದ ಇತರ ಭಾಗಗಳಲ್ಲಿಯೂ ಈ ಸ್ಮಾರಕೋತ್ಸವವು ನೆರವೇರುವಂತೆ ನಿಶ್ಚಿತವಾದ ಯೋಜನೆಗಳು ಸಿದ್ಧವಾಗಿವೆ.

ವಿಜಯನಗರದ ವಾಙ್ಮಯಪ್ರಕಾಶನವು ಈ ಸ್ಮಾರಕಯೋಜನೆಯ ಒಂದು ಅಂಗವಾಗಿದೆ. ಆದಕ್ಕೋಸುಗ ಸ್ಮಾರಕಮಂಡಲಿಯವರು ನನ್ನಿಂದ ಈ ಗ್ರಂಥವನ್ನು ಬರೆಸಿ, ಪ್ರಕಾಶಪಡಿಸಿದುದಕ್ಕಾಗಿ ನಾನು ಅವರಿಗೆ ಬಹು ಉಪಕೃತನಾಗಿದ್ದೇನೆ. ಅದರಲ್ಲಿಯೂ ನನಗೆ ಅನೇಕ ರೀತಿಯಿಂದ ಸಲಹೆ ಸಹಾಯಗಳನ್ನು ನೀಡಿದ ಕಾರ್ಯನಿರ್ವಾಹಕ ಮಂಡಲಿಯ ಅಧ್ಯಕ್ಷ್ಯರಾದ ಶ್ರೀಮಾನ್ ವೀರಭದ್ರಪ್ಪ ಹಾಲಭಾವಿಯವರ ಉಪಕಾರವನ್ನು ನಾನು ಹೆಚ್ಚಾಗಿ ಸ್ಮರಿಸುವೆನು. ಇದರಂತೆ ಕೆಲವು ಸೂಚನೆಗಳನ್ನು ಕೊಟ್ಟ ಪೂಜ್ಯ ಶ್ರೀ. ಆಲೂರ ವೆಂಕಟರಾಯರಿಗೆ ನನ್ನ ಕೃತಜ್ಞತೆಯನ್ನು ಸಲ್ಲಿಸುವೆ. ಈ ಗ್ರಂಥ-ಪ್ರಕಾಶನಕಾರ್ಯಕ್ಕೆ ತ್ವರಿತವಾದ ಚಾಲನೆಯನ್ನು ಕೊಟ್ಟ ಬಂಧು ಶ್ರೀ. ಕರಮರಕರ ದತ್ತರಾಯರ ಉಪಕಾರಗಳನ್ನು ನಾನು ನೆನೆವೆನು. ಮುನ್ನುಡಿಯನ್ನು ಬರೆದುಕೊಟ್ಟ ಡಾ. ಎಮ್. ಎಚ್. ಕೃಷ್ಣ ಇವರಿಗೆ ನನ್ನ ಹಾರ್ದಿಕವಾದ ಧನ್ಯವಾದಗಳನ್ನು ಅರ್ಪಿಸುವೆನು.

ಸುರಪುರಸಂಸ್ಥಾನ ಮತ್ತು ರಾಯಚೂರ ಬಗೆಗೆ ಕೆಲವು ವಿಷಯಗಳನ್ನು ತಿಳುಹಿದುದಕ್ಕಾಗಿ ನನ್ನ ಮಾನ್ಯಮಿತ್ರರಾದ ಶ್ರೀ. ಕಪಟರಾಳ ಕೃಷ್ಣರಾಯರು ವಕೀಲ, ಕಲಬುರ್ಗಿ ಮತ್ತು ಶ್ರೀ. ತೋರಣಗಲ್ ವೇದವ್ಯಾಸರಾಯರು ಬಿ. ಎ. ಬಿ. ಟಿ. ರಾಯಚೂರು, ಇವರಿಗೆ ನಾನು ಋಣಿಯಾಗಿದ್ದೇನೆ. ಭಾಷೆಯ ವಿಷಯದಲ್ಲಿ ಕೆಲವು ಸೂಚನೆಗಳನ್ನು

ಪಡೆದುದಕ್ಕಾಗಿ ಶ್ರೀ. ಮ. ಪ್ರ. ಪೂಜಾರರು, ತೀರ್ಥಸ್ವರೂಪರಾದ ಶ್ರೀ. ಸಾಲಿ ರಾಮಚಂದ್ರರಾಯರು ಮತ್ತು ಪ್ರೊ. ಮುಗಳಿ ರಂಗರಾಯರು ಇವರುಗಳ ಉಪಕಾರಗಳನ್ನು ಸ್ಮರಿಸುವೆನು. ತಮ್ಮಲ್ಲಿಯ ಚಿನ್ನದ ನಾಣ್ಯಗಳನ್ನು ಪರೀಕ್ಷಿಸಿ, ಪ್ರತಿಮಾಡಿಕೊಳ್ಳಲು ಸಮ್ಮತಿಸಿದುದಕ್ಕಾಗಿ ಶ್ರೀ. ಜೋಗ ಶ್ರೀನಿವಾಸರಾಯರಿಗೆ ನಾನು ಕೃತಜ್ಞನಾಗಿದ್ದೇನೆ. ಪೆನುಗೊಂಡದ ಛಾಯಾಚಿತ್ರಗಳನ್ನು ನೀಡಿದುದಕ್ಕಾಗಿ ಶ್ರೀ. ಬೆಂಗೇರಿ ಪ್ರಹ್ಲಾದರಾಯರ ಉಪಕೃತಿಯನ್ನು ನೆನೆವೆನು.

ವಿಜಯನಗರದ ಅಭಿಮಾನದಿಂದಲೂ ನನ್ನ ಮೇಲಿನ ಪ್ರೇಮದಿಂದಲೂ ಮುದ್ರಣಯೋಗ್ಯವಾದ ಗ್ರಂಥದ ಪ್ರತಿಯನ್ನು ಸಿದ್ಧಪಡಿಸಲು ನೆರವಾದ ಶ್ರೀಯುತರುಗಳಾದ ಪೋತದಾರ ಭೀಮರಾಯರು, ನೆಗಳೂರು ರಂಗರಾಯರು ಬಿ. ಎ., ಜಡಿ ದೇವೇಂದ್ರ, ಮೇವುಂಡಿ ಮಲ್ಹಾರಿ ಇವರುಗಳಿಗೆ ಕೃತಜ್ಞತೆಯನ್ನು ಸಲ್ಲಿಸುವೆನು. ಈ ಸಂದರ್ಭದಲ್ಲಿ ನನ್ನ ಗೆಳೆಯರಾದ ಶ್ರೀ. ನೆಗಳೂರು ರಂಗರಾಯರ ಸಹಾಯವನ್ನು ನಾನು ಹೆಚ್ಚಾಗಿ ಸ್ಮರಿಸುವೆನು. ಅವರು ಮುದ್ರಣಪ್ರತಿಗಳನ್ನು ಪರಿಶೋಧಿಸುವಲ್ಲಿ ನೆರವಾಗುವುದಲ್ಲದೆ ಸೂಚಿಯನ್ನೂ (index) ಸಿದ್ಧಪಡಿಸಿ ಕೊಟ್ಟಿದ್ದಾರೆ. ಅವರ ನೆರವಿಲ್ಲದಿದ್ದರೆ ಈ ಗ್ರಂಥಕ್ಕೆ ಸೂಚಿಯು ಒದಗುವ ಸಂಭವವಿರಲಿಲ್ಲ.

ಕೊನೆಗೆ ಗ್ರಂಥವನ್ನು ಹೆಚ್ಚಿನ ಆಸ್ಥೆಯಿಂದಲೂ ತ್ವರೆಯಿಂದಲೂ ಮುದ್ರಿಸಿ ಕೊಟ್ಟುದಕ್ಕಾಗಿ ಮೋಹನಮುದ್ರಾಲಯದ ಒಡೆಯರಾದ ಶ್ರೀ. ಕೆ. ಜಿ. ರಾಯದುರ್ಗ ಇವರಿಗೂ ಸಕಾಲಕ್ಕೆ ಪಡಿಯಚ್ಚುಗಳನ್ನು [ಬ್ಲಾಕು] ಒದಗಿಸಿ ಕೊಟ್ಟುದಕ್ಕಾಗಿ ಶ್ರೀ. ಪೋತದಾರ ಶ್ರೀನಿವಾಸರಾಯರಿಗೂ ಅಭಿನಂದನೆಗಳನ್ನು ಅರ್ಪಿಸುವೆನು.

ವಿಜಯಾದಶಮಿ
೨೫-೧೦-೩೬ } **ದೇಸಾಯಿ ಪಾಂಡುರಂಗ**

# ಆಧಾರ ಗ್ರಂಥಗಳು

ಆ ಆ ಗ್ರಂಥಗಳ ಮುಂದೆ ಇಲ್ಲಿ ಬಳಸಿದ ಅವುಗಳ ಸಂಕ್ಷೇಪವನ್ನು ಕಾಣಿಸಿದೆ.

## English


| No. | Work | Abbreviation |
|---|---|---|
| 1. | Altekar : Rashtrakutas and Their Times | A. R. |
| 2. | Andhra Historical Journal | A. H. J. |
| 3. | Brown C. J. : Coins of India | Brown |
| 4. | Epigraphia Carnatica | E. C. |
| 5. | Epigraphia Indica | E. I. |
| 6. | Ferishta-Briggs | F. B. |
| 7. | Heras : Aravindu Dynasty Part 1 | A. D. |
| 8. | Heras : Beginnings of Vijayanagara History | Heras |
| 9. | Indian Antiquary | I. A. |
| 10. | Krishnaswami Ayyangar : Little Known Chapter | L. K. |
| 11. | Krishnaswami Ayyangar : Sources of Vij. History | Sources |
| 12. | Longhurst : Ruins of Hampi | |
| 13. | Mysore Archaeological Reports | |
| 14. | Mysore Gazetteer Vol. II Part I | |
| 15. | Mysore Gazetteer Vol. II Part III | M. G. |
| 16. | Mysore Gazetteer Vol. II Part IV | |
| 17. | Mysore Gazetteer Vol. II Part V | |
| 18. | Saletore : Social & Political life in Vijayanagar Empire Part I | Sal. |
| 19. | Saletore : Social & Political Life in Vijayanagar Empire Part II | Sal. |
| 20. | Satyanatha Aiyer : Nayaks of Madura | |
| 21. | Sewell : Forgotten Empire | Sewell |

22. South Indian Epigraphy Annual Reports — S. R.
23. South Kanara Manual — S. K. M.
24. Suryanarayanrao : Never-To-Be Forgotten Empire
25. Venkata Ramanayya : Kampila & Vijayanagar
26. Venkata Ramanayya : Vijayanagara
    Origin of City & Empire — V. R.
27. Vincent Smith : Early History of India — V. S.

## संस्कृत

28. मधुराविजयम् — M. V.
29. प्राचीन लेखमाला Parts II & III
30. व्यासयोगिचरितम् — ವ್ಯಾ. ಸ.

## ಕನ್ನಡ

31. ಅರುಣೋದಯ : ವಿಜಯನಗರ ಸಂಚಿಕೆ
32. ಕರ್ನಾಟಕ ಕವಿಚರಿತೆ ೩ ಭಾಗಗಳು — ಕ. ಚ.
33. ಪ್ರಾಚೀನ ಕರ್ನಾಟಕ — ಪ್ರಾ. ಕ.
34. ಬೇಲೂರ ಕೇಶವದಾಸ : ಕರ್ನಾಟಕ ಭಕ್ತವಿಜಯ
35. ಹಾಳು ಹಂಪೆ.

## ಮರಾಠಿ

36. ಮರಾಠೀ ರಿಯಾಸತ — ಮ. ರಿ.
37. ಮುಸಲ್ಮಾನೀ ರಿಯಾಸತ — ಮು. ರಿ.
38. ವಿವಿಧಜ್ಞಾನವಿಸ್ತಾರ — ವಿ. ವಿ.

## ಉರ್ದು

39. ಬಶೀರ ಅಹಮದ : ತಾರೀಖೆ ದಖನ್

# ಮುನ್ನುಡಿ

ಆಧುನಿಕ ಭರತಖಂಡವು ಕಷ್ಟಪರಂಪರೆಗಳಲ್ಲಿ ಸಿಕ್ಕಿ ನರಳಾಡುತ್ತಿದೆ. ಸ್ವಾತಂತ್ರ್ಯವನ್ನು ಕಳೆದುಕೊಂಡು ಬಡತನದಲ್ಲಿ ಮುಳುಗಿರುವುದು ಮಾತ್ರವೇ ಅಲ್ಲ. ಆತ್ಮಗೌರವವೂ ಸ್ವಾವಲಂಬನದಲ್ಲಿ ನಂಬಿಕೆಯೂ ಸಹ ಅದೃಶ್ಯವಾಗಿವೆ. ಭಾರತೀಯರು ದೇಶದ ಹಿತಕ್ಕಾಗಿ ಎಂದಾದರೂ ಒಗ್ಗಟ್ಟಾಗಿ ಕೆಲಸಮಾಡಿದರೇ? ಸ್ವಾರ್ಥತೆಯನ್ನು ತ್ಯಾಗಮಾಡಿ ತಮ್ಮ ಸಂಸ್ಕೃತಿಯ, ಧನಕನಕಗಳ, ಕುಟುಂಬಗಳ ಮತ್ತು ಧರ್ಮದ ರಕ್ಷಣೆಯನ್ನು ಮಾಡಿಕೊಂಡರೇ? ಭಾರತದ ಚರಿತ್ರೆಯನ್ನು ತಿಳಿಯದ ಜನರು ಭಾರತೀಯರಿಗೆ ಇಂಥ ಸದ್ಗುಣಗಳು ಇಲ್ಲವೆನ್ನುವರು. ಅಂತಃಕಲಹಗಳಲ್ಲಿ ಕಾಲವನ್ನು ಕಳೆದು ಪರಕೀಯರ ದಾಸ್ಯದಲ್ಲಿ ತೃಪ್ತಿಪಟ್ಟು ಮನುಷ್ಯಜನ್ಮವನ್ನು ನೀಗುವುದೇ ಈ ಭೂಖಂಡದ ನರರ ಸ್ವಭಾವವೆಂಬ ಸಂಶಯವು ಅನೇಕರಿಗೆ ಹುಟ್ಟಿರುವುದು. ದೇಶದ ಉನ್ನತಿಗಾಗಿ ಪ್ರಯತ್ನಿಸುತ್ತಿರುವ ಒಬ್ಬಿಬ್ಬ ಮಹಾನುಭಾವರಿಗೂ ನಮ್ಮವರ ವರ್ತನೆಯನ್ನು ನೋಡಿ ನಿರಾಶೆಯು ತಲೆದೋರುವುದು. ಅದರಲ್ಲಿಯೂ ದಾಕ್ಷಿಣಾತ್ಯರೆಂದರೆ ದೇಶಾಭಿಮಾನವಿಲ್ಲದ ಸ್ವಾರ್ಥಪ್ರೇಮಿಗಳು ಎಂಬ ಅಪವಾದವು ಹೊರಟಿರುವುದು. ನಿಜವಾಗಿಯೂ ಈ ದಕ್ಷಿಣ ದೇಶದ ಜನರು ಎಂದಾದರೂ ಸ್ವಾತಂತ್ರ್ಯವನ್ನು ಅರಿತಿದ್ದರೇ? ತಮ್ಮ ದೇಶವನ್ನು ತಾವೇ ಆಳಿದರೇ? ಹೊರಗಿನಿಂದ ಶತ್ರುಗಳು ನುಗ್ಗಿದಾಗ ಒಗ್ಗಟ್ಟಾಗಿ ನಿಂತು ಅವರನ್ನು ಹೊಡೆದು ಅಟ್ಟಿದರೇ? ತಮ್ಮತಮ್ಮಲ್ಲಿ ಸೋದರ ಪ್ರೇಮವನ್ನು ವೃದ್ಧಿಗೊಳಿಸಿಕೊಂಡು ತಮ್ಮ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಯನ್ನು ತಿದ್ದುಪಡಿಸಿ ಆರ್ಯಸಂಸ್ಕೃತಿಯನ್ನು ಹೆಚ್ಚಿಸಿ ಆರ್ಯಮಾತೆಗೆ ಮಹತ್ತಾದ ಸೇವೆಯನ್ನು ಮಾಡಿ ಕೀರ್ತಿಯನ್ನು ಪಡೆದರೇ?

ಭಾರತದ ದುಃಸ್ಥಿತಿ

ವಿಜಯನಗರ ಸಾಮ್ರಾಜ್ಯದ ಚರಿತ್ರೆಯು ಬಹಿರಂಗವಾದ ಮೇಲೆ ಈ ಪ್ರಶ್ನೆಗಳಿಗೆ ಉತ್ತರವಾಗಿ ಅಹುದೆಂಬ ಧೀರನಾದವನ್ನು ಮಾಡಬಹುದಾಗಿದೆ.

ಸಾಮಾನ್ಯ ಮನುಷ್ಯನಿಗೆ ಹೇಗೋ ಹಾಗೆಯೇ ಒಂದು ಸಮುದಾಯಕ್ಕೂ ಸಹ ಸಂಪತ್ತು ಮತ್ತು ವಿಪತ್ತುಗಳ ಪರಂಪರೆಗಳು ಸಂಭವಿಸುವುವು. ಇಂತಹ ಕಷ್ಟಗಳು ಒದಗಿದಾಗ ಭಾರತವು ತಲೆತಗ್ಗಿಸಿದುದೂ ಉಂಟು. ಪುನಃ ತಲೆ ಎತ್ತಿದುದೂ ಉಂಟು. ಆರ್ಯಾವರ್ತದ ಚರಿತ್ರೆಯಲ್ಲಿ ಗ್ರೀಕರ ದಾಳಿಯ ಅನಂತರ ಮೌರ್ಯ ಸಾಮ್ರಾಜ್ಯವೂ, ಶಕರ ರಾಜ್ಯವಾದ ಮೇಲೆ ಗುಪ್ತ ಚಕ್ರಾಧಿಪತ್ಯವೂ, ಹೂಣರ ಹಾವಳಿಯನ್ನು ಅಡಗಿಸಿ ಕನೋಜಿನ ಆಧಿಪತ್ಯವೂ ಹುಟ್ಟಿದುದು ಈಗ ಎಲ್ಲರಿಗೂ ತಿಳಿದ ವಿಷಯವಾಗಿದೆ. ಹೀಗೆ ಸಂಕಟಸಮಯಗಳ ತರುವಾಯ ದೊರೆತ ಸ್ವತಂತ್ರ ಅವಕಾಶಗಳಲ್ಲಿ ಭಾರತೀಯರ ಸಂಸ್ಕೃತಿಯು ಒಂದಕ್ಕೆ ನಾಲ್ಮಡಿಯಾಗಿ ಹೆಚ್ಚುತ್ತಿತ್ತು. ಇಂತಹ ಸನ್ನಿವೇಶಗಳು ದಕ್ಷಿಣ ದೇಶದ ಚರಿತ್ರೆಯಲ್ಲಿಯೂ ಉಂಟು. ವಿಜಯನಗರದ ಸಾಮ್ರಾಜ್ಯವು ಹೀಗೆ ಉದಯಿಸಿದ ಮಹಾಕಾಲಗಳಲ್ಲಿ ಒಂದಾಗಿದೆ.

ಪುನರುಜ್ಜೀವನಗಳು

ಕ್ರಿ. ಶ. ೭೧೧ರಿಂದ ೧೨೯೬ ರ ವರೆಗೆ ಮುಸಲ್ಮಾನರು ಮೊದಲು ಸಿಂಧೂ ದೇಶವನ್ನೂ ತರುವಾಯ ಗಾಂಧಾರ ಪಂಜಾಬ್ ಪ್ರಾಂತ್ಯಗಳನ್ನೂ ಅನಂತರ ದಿಲ್ಲಿ ಕನೋಜನ್ನೂ ಕಡೆಗೆ ವಂಗ ಮಾಳವ ದೇಶಗಳನ್ನೂ ಕ್ರಮೇಣ ಹಿಡಿಯುತ್ತಾ ಬಂದಾಗ ದಕ್ಷಿಣದ ರಾಜರೂ ಉತ್ತರದ ರಾಜರೂ ಕಲೆತು ದೇಶದ ರಕ್ಷಣೆಯನ್ನು ಮಾಡಿಕೊಳ್ಳಲಿಲ್ಲ. ದಿಲ್ಲಿಯಲ್ಲಿ ಯಾರು ಆಳಿದರೆ ನಮಗೆ ಬಂದ ಕಷ್ಟವಾದರೂ ಸುಖವಾದರೂ ಏನು ಎಂದು ದಾಕ್ಷಿಣಾತ್ಯರು ಕೂರ್ಮನ್ಯಾಯವನ್ನು ಆಚರಿಸಿದರು. ಆರ್ಯಾವರ್ತದ ಸ್ವಾತಂತ್ರ್ಯವು ಹೋದ ಮೇಲೆ ದಕ್ಷಿಣದೇಶದ ನೆಮ್ಮದಿಯು ಕೆಟ್ಟಿತೆಂದು ಮೊದಲು ಬುದ್ಧಿ ಕಲಿಸಿದವನು ಅಲ್ಲಾಉದ್ದೀನ್ ಖಿಲ್ಜಿ. ಅವನ ದಂಡಿನ ಮುಂದೆ ದೇವಗಿರಿ, ಓರಂಗಲ್ಲು, ದ್ವಾರಸಮುದ್ರ ಮೊದಲಾದ ದಾಕ್ಷಿಣಾತ್ಯ ರಾಜಧಾನಿಗಳು ಉರುಳಿ ಬಿದ್ದುವು. ಮಲ್ಲಿಕ್‌ಕಾಫರನ ದಂಡಯಾತ್ರೆಯು ಅಂತಃಕಲಹಗಳಲ್ಲಿ ಮಗ್ನರಾಗಿ ನಿದ್ರಿಸುತ್ತಿದ್ದ ದಕ್ಷಿಣ ದೇಶದ ರಾಜರನ್ನು ಅಲ್ಲಾಡಿಸಿತು. ಆದರೂ ಇವರಿಗೆ ಬುದ್ಧಿ ಬರಲಿಲ್ಲ. ಇವರ ರಾಜ್ಯಗಳಲ್ಲಿ

ವಿಜಯನಗರದ ಸ್ಥಾಪನೆಗೆ ಕಾರಣ

ಸುಖದಿಂದ ಜೀವಿಸುತ್ತಿದ್ದ ದಕ್ಷಿಣದೇಶದ ಜನರಿಗಂತೂ ಎಚ್ಚರಿಕೆಯೇ ಇಲ್ಲ. ಮಹಮ್ಮದ್ ಬೀನ್ ತೊಗಲಕನ ದಕ್ಷಿಣದ ಯಾತ್ರೆಗಳು ಈ ಎಚ್ಚರಿಕೆಯನ್ನು ಉಂಟುಮಾಡಿದುವು. ವಿದ್ವಾಂಸನಾದ ಪ್ರತಾಪ ರುದ್ರನಿಗೆ ಕಾರಾಗೃಹದಲ್ಲಿ ಸಂಭವಿಸಿದ ದುರವಸ್ಥೆಯೂ ವೀರರಾದ ಕಂಪಿಲೇಶ್ವರ, ಕುಮಾರ ರಾಮರು ಯುದ್ಧದಲ್ಲಿ ಚಲ್ಲಿದ ರಕ್ತವೂ ಲೂಟಿಗೆ ಸಿಲುಕಿದ ದ್ವಾರಸಮುದ್ರದ ಗೋಳೂ ಮಧುರೆಯಿಂದ ವಿಸ್ತರಿಸಿಕೊಂಡು ಬರುತ್ತಿದ್ದ ತುರುಷ್ಕರ ಸಂಸ್ಥಾನವೂ ದಾಕ್ಷಿಣಾತ್ಯ ಆರ್ಯರು ನಿದ್ರೆಯನ್ನು ತ್ಯಜಿಸಿ ಗಾಬರಿಯಿಂದ ಬೆಚ್ಚಿ ಎದ್ದು ನಿಲ್ಲುವಂತೆ ಮಾಡಿದುವು. ಪರಸ್ಪರ ಅನುರಾಗದಿಂದ ವರ್ತಿಸಿ ಭೇದಗಳನ್ನೆಣಿಸದೆ ಒಗ್ಗಟ್ಟಿನಿಂದ ಕೆಲಸ ಮಾಡಿ ಪುನಃ ಸ್ವಾತಂತ್ರ್ಯಸ್ಥಾಪನೆಯನ್ನು ಮಾಡಿಕೊಂಡು ಆತ್ಮರಕ್ಷಣೆಯನ್ನು ಮಾಡಬೇಕೆಂಬ ಮಹಾ ಸಂಕಲ್ಪವು ದಾಕ್ಷಿಣಾತ್ಯ ರಾಜರಿಗೂ ವಿದ್ವಾಂಸರಿಗೂ ಜನಸಾಮಾನ್ಯದವರಿಗೂ ಹೃದಯದಲ್ಲಿ ಉದಯಿಸಿತು. ಈ ಎಚ್ಚರಿಕೆಯ ಫಲವು ವಿಜಯನಗರರಾಜ್ಯದ ಸ್ಥಾಪನೆಯ ರೂಪದಲ್ಲಿ ಪರಿಣಮಿಸಿತು.

ಸಾಮ್ರಾಜ್ಯವು ಮಾಡಿದ ಸೇವೆ

ಈ ಮಹತ್ಕಾರ್ಯವನ್ನು ಕನ್ನಡಿಗರು ಪ್ರಾರಂಭಿಸಿದರು. ಕರ್ಣಾಟಕ, ಆಂಧ್ರ, ದ್ರವಿಡ ದೇಶಗಳ ಜನರೆಲ್ಲರೂ ಕೂಡಿ ಈ ಸಾಮ್ರಾಜ್ಯದ ವಿಜಯವನ್ನೂ ಸಂಸ್ಕೃತಿಯನ್ನೂ ಕೀರ್ತಿಯನ್ನೂ ಮುಂದೆ ಸಾಗಿಸಿದರು. ದೇವಗಿರಿ, ಓರಂಗಲ್ಲು, ದೋರಸಮುದ್ರ, ಕಾಂಚೀಪುರ ಮೊದಲಾದ ವಿದ್ಯಾಸ್ಥಾನಗಳನ್ನು ಸೂರೆಗೊಂಡು ಹೊಯ್ಸಳ ವಂಶವು ಮೃತಪಟ್ಟು ದಕ್ಷಿಣ ಪ್ರಾಂತ್ಯವು ನಾಥನಿಲ್ಲದೆ ಹಂಬಲಿಸುತ್ತಿದ್ದ ಸಮಯದಲ್ಲಿ ವಿಜಯನಗರದ ವೀರಪತಾಕೆಯು ಎದ್ದು ನಿಂತು ಅಭಯಪ್ರದಾನ ಮಾಡಿತು. ದಕ್ಷಿಣ ದೇಶದ ವೀರರು, ವಿದ್ವಾಂಸರು, ಕಲಾವಂತರು, ವರ್ತಕರು ವಿಜಯನಗರವನ್ನು ಸೇರಿದರು. ಅಲ್ಲಿನ ಮಹರಾಯರ ನೆರಳಿನಲ್ಲಿ ಆರ್ಯಸಂಸ್ಕೃತಿಯು ಪುನರುಜ್ಜೀವಿತವಾಗಿ ಮನುಷ್ಯಕುಲಕ್ಕೆ ಪ್ರಶಂಸೆಯನ್ನು ತರುವ ಪುರುಷರತ್ನಗಳು ಎಲ್ಲಾ ವಿಧವಾದ ಕಾರ್ಯಗಳಲ್ಲೂ ಪ್ರವರ್ತಿಸತೊಡಗಿದರು. ವಿದ್ಯಾರಣ್ಯರು ವ್ಯಾಸತೀರ್ಥರೇ ಮೊದಲಾದ ಯತಿಗಳು, ಸಾಯನಾಚಾರ್ಯರು,

ಜಯತೀರ್ಥರು, ಅಪ್ಪಯ್ಯದೀಕ್ಷಿತರೇ ಮೊದಲಾದ ಮಹಾ ವಿದ್ವಾಂಸರು, ಮಾಧವಾಚಾರ್ಯರು, ಲಕ್ಕಣ್ಣ ದಣಾಯಕರು, ಸಾಳುವ ತಿಮ್ಮಯ್ಯ ಮೊದಲಾದ ಮಂತ್ರಿಶ್ರೇಷ್ಠರು, ಬುಕ್ಕರಾಜ, ಸಾಳುವ ನರಸಿಂಗ, ರಾಮರಾಜರಂತಹ ಮಹಾಯೋಧರು, ಗದುಗಿನ ನಾರಾಯಣ, ಪುರಂದರ ದಾಸರು, ಪೆದ್ದನ್ನ ಮೊದಲಾದ ಕವಿಶ್ರೇಷ್ಠರು, ಕೃಷ್ಣದೇವ, ವೆಂಕಟಪತಿ ಮೊದಲಾದ ರಾಜಶ್ರೇಷ್ಠರು, ಈ ವಿಜಯನಗರ ಸಾಮ್ರಾಜ್ಯವೆಂಬ ಮಹಾ ಚಂಪಕವೃಕ್ಷದಲ್ಲಿ ಅರಳಿದ ಕೆಲವು ಕುಸುಮಗಳು. ಇಂತಹ ಮಹಾ ಪುರುಷರ ಪ್ರಭಾವದಿಂದ ಕರ್ಣಾಟಕ, ಆಂಧ್ರ ಮತ್ತು ದ್ರಾವಿಡ ದೇಶಗಳಲ್ಲಿ ಮೂರು ಶತಮಾನಗಳ ಮೇಲೆ ಸ್ವಾತಂತ್ರ್ಯವು ನೆಲೆಯೂರಿ, ವಿದ್ಯೆಯು ವೃದ್ಧಿಯಾಗಿ, ಕಾವ್ಯಗಳು ಹುಟ್ಟಿ, ಆರ್ಥಿಕ ಸಂಪತ್ತು ಹೆಚ್ಚಿ, ಗುಡಿ ಗೋಪುರಗಳೂ ಕಟ್ಟಡವೂ ಪ್ರತಿಮಾದಿಗಳ ಶಿಲ್ಪವೂ ಚಿತ್ರಕಲೆಯೂ ಕರ್ಣಾಟಕ ರೀತಿಯ ಸಂಗೀತವೂ ಹೃದಯಂಗಮವಾದ ಭರತವಿದ್ಯೆಯೂ ದಿಗಂತವಾದ ಪ್ರಖ್ಯಾತಿಯನ್ನು ಪಡೆದುವು. ಸರ್ವಮತಗಳಿಗೂ ರಕ್ಷಣೆಯು ದೊರೆಯಿತು. ಹೀಗೆ ಪುನರುಜ್ಜೀವಿತವಾದ ಆರ್ಯಸಂಸ್ಕೃತಿಯೂ ಆರ್ಯಧರ್ಮವೂ ಉತ್ತರಕ್ಕೆ ಹಬ್ಬಿ ರಾಜಪುತ್ರರ ರಾಜ್ಯಗಳನ್ನು ಆಕ್ರಮಿಸಿ ಮೊಗಲರನ್ನೂ ಮುಟ್ಟಿದುವು. ವಿಜಯನಗರದ ಪ್ರಖ್ಯಾತಿಯು ಲೋಕದಲ್ಲೆಲ್ಲಾ ಹಬ್ಬಿತು. ಆಗಿನ ಪ್ರಪಂಚದ ಮಹಾನಗರಗಳಲ್ಲಿ ವಿಜಯನಗರವೊಂದು ಬಲು ದೊಡ್ಡದೆಂದು ಯೂರೋಪಿನವರೂ ಸಹ ಒಪ್ಪಿಕೊಂಡರು.

ಕನ್ನಡಿಗರ ಹೆಮ್ಮೆ

ಇಂತಹ ಮಹತ್ಕಾರ್ಯವು ನಡೆಯುವ ಕಾಲದಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸಿ ಯುದ್ಧಗಳಲ್ಲಿ ಎದೆ ಒಡ್ಡಿ ರಾಜ್ಯಸೂತ್ರಗಳನ್ನು ಕೈಯಲ್ಲಿ ಹಿಡಿದು ಸಿಂಹಾಸನದ ಮೇಲೆ ಕುಳಿತು ಅಥವಾ ರಾಜ್ಯ ಭಾರದ ಸೇವೆಯಲ್ಲಿ ಅಧಿಕ ಭಾರವನ್ನು ವಹಿಸುವ ಪುಣ್ಯವು ಕನ್ನಡಿಗರಿಗೆ ದೊರೆಯಿತು. ಮಹಾರಾಷ್ಟ್ರೀಯರು ಪರಾಧೀನಕ್ಕೆ ಸಿಕ್ಕಿಬಿದ್ದಿದ್ದರು. ದ್ರಾವಿಡರು ಮಧುರೆಯ ಸುಲ್ತಾನರ ಕೈಗೆ ಸಿಕ್ಕಿ ಅವರಿಂದ ತಮ್ಮನ್ನು ಬಿಡಿಸಿದ ಕನ್ನಡಿಗರ ಆಧಿಪತ್ಯವನ್ನು ಸಂತೋಷದಿಂದ

ಒಪ್ಪಿಕೊಂಡರು. ಉದಯಗಿರಿ, ನೆಲ್ಲೂರು ಪ್ರಾಂತ್ಯಗಳ ದಕ್ಷಿಣದ ಆಂಧ್ರರು ಭೇದಭಾವವಿಲ್ಲದೆ ಕನ್ನಡಿಗ ನಾಯಕರ ಕೈಕೆಳಗೆ ಹೋರಾಡಿದರು. ಈ ದಾಕ್ಷಿಣಾತ್ಯ ಜನಪದಗಳನ್ನು ಒಟ್ಟುಗೂಡಿಸಿ ಸಾಮ್ರಾಜ್ಯವನ್ನು ಕಟ್ಟಿ ಹೆಚ್ಚಿನ ಕಾಲ ಅದನ್ನು ಕಾಪಾಡಿ ಹೆಮ್ಮೆಯನ್ನು ಪಡೆದವರು ಕನ್ನಡಿಗರು. ಈ ಮಹಾಸಾಮ್ರಾಜ್ಯವು ಕನ್ನಡಿಗರೇ ಸ್ಥಾಪಿಸಿದುದು. ಕನ್ನಡ ದೇಶದಲ್ಲಿ ಮೊದಲು ಹುಟ್ಟಿ ಬೆಳೆದುದು. ಕನ್ನಡಿಗರು ಎರಡು ಶತಮಾನಗಳ ಮೇಲೆ ಆಳಿದುದು. ರಾಜಧಾನಿಯಲ್ಲಿ ಕನ್ನಡ ಭಾಷೆಯನ್ನು ಆಡುತ್ತಿದ್ದುದು. ಇದರ ಹೆಸರೇ ಕರ್ಣಾಟಕ ಸಾಮ್ರಾಜ್ಯವೆಂದು. ಇದರ ರಾಜ್ಯವು ಬೆಳೆದು, ಇದರ ನೆರಳು ದಕ್ಷಿಣ ದೇಶವನ್ನೆಲ್ಲಾ ಆವರಿಸಲು ಕರ್ಣಾಟಕವೆಂಬ ಶಬ್ದವು ಕನ್ನಡ, ಆಂಧ್ರ, ದ್ರವಿಡ ದೇಶಗಳಿಗೆಲ್ಲಾ ಅನ್ವಯಿಸುವಂತಾಯ್ತು. ಈ ದಾಕ್ಷಿಣಾತ್ಯ ಸಂಸ್ಕೃತಿಯೇ ಕರ್ಣಾಟಕ ಸಂಸ್ಕೃತಿಯೆಂದು ಪ್ರಸಿದ್ಧಿ ಪಡೆಯಿತು. ಭೇದಬುದ್ಧಿಯಿಲ್ಲದೆ ಆಂಧ್ರರೂ ದ್ರಾವಿಡರೂ ಸಹ ತಮ್ಮ ಸಂಸ್ಕೃತಿಯು ಕರ್ಣಾಟಕ ಸಂಸ್ಕೃತಿಯೆಂದು ಹೆಮ್ಮೆಪಡಹತ್ತಿದರು. ಭಾರತಭೂಮಿಯ ಇತರ ಪ್ರಾಂತ್ಯಗಳೆಲ್ಲಾ ಪರಾಧೀನತೆಯ ಅಂಧಕಾರ ದಲ್ಲಿ ಮುಳುಗಿದ್ದಾಗ ದಕ್ಷಿಣದಲ್ಲಿ ಈ ಕರ್ಣಾಟಕದ ಸೂರ್ಯನೊಂದು ಪ್ರಕಾಶಿಸಿ ಸ್ವಾತಂತ್ರ್ಯ, ಧರ್ಮ, ಸಂಸ್ಕೃತಿಗಳ ರಕ್ಷಣೆಯನ್ನು ಮಾಡಿತು. ಇಂತಹ ಸೇವೆಯನ್ನು ಭರತಖಂಡಕ್ಕೆ ನಮ್ಮ ಕನ್ನಡನಾಡು ಮಾಡಿತೆಂದು ಯಾವ ಕನ್ನಡಿಗನು ತಾನೇ ಆನಂದಪಡಲಾರನು?

ಈ ಚರಿತ್ರೆಯನ್ನೋದು ವುದರ ಫಲ

ಮಹಾಭಾರತ ರಾಮಾಯಣಾದಿ ಇತಿಹಾಸಗಳ ಪುಣ್ಯ ಕಥೆಗಳನ್ನು ಓದುವುದರಿಂದ ನಮ್ಮ ಪಾಪಗಳೂ ಕೂಡ ತೊಡೆದುಹೋಗುವುವೆಂದು ನಮ್ಮ ಹಿರಿಯರು ನಂಬಿದರು. ಈ ಕಲಿಯುಗ ದಲ್ಲಿ ಚಾರಿತ್ರಕ ಕಾಲದಲ್ಲಿ ಸತ್ಯಯುಗದ ಸತ್ಯ ಸಂಧತೆಯನ್ನೂ ತ್ರೇತಾಯುಗದ ಧರ್ಮನಿಷ್ಠತೆ ಯನ್ನೂ ದ್ವಾಪರಯುಗದ ಪರಾಕ್ರಮವನ್ನೂ ಮೂರು ಶತಮಾನಗಳ ವರೆಗೆ ಸಾಧ್ಯವಾದ ಮಟ್ಟಿಗೆ ಅನುಕರಿಸಿ, ನಿದರ್ಶನವಾಗಿ ತೋರಿಸಿ, ಈ ಪುಣ್ಯಭೂಮಿಯ ಇತಿಹಾಸದಲ್ಲಿ ಯವನರೆಂಬ ಪ್ರಳಯವು ಮೇಲೆ

ಕವಿದಾಗ ಆರ್ಯಸಂಸ್ಕೃತಿಯನ್ನು ಮೂರು ಶತಮಾನಗಳ ಕಾಲ ರಕ್ಷಿಸಿ ಪುನಃ ಭಾರತೀಯರ ಪುರೋವೃದ್ಧಿಗಾಗಿ ದೊರೆಯುವಂತೆ ಮಾಡಿ ಈಗ ಕೀರ್ತಿ ಶೇಷವಾದ ವಿಜಯನಗರ ಸಾಮ್ರಾಜ್ಯದ ಚರಿತ್ರೆಯು ಪುಣ್ಯದಾಯಕವಾದ ಮಹಾಪುರಾಣಗಳಲ್ಲಿ ಉಚ್ಚಸ್ಥಾನವನ್ನು ವಹಿಸದೆ ಇರದು. ಇದರ ಶಾಸ್ತ್ರೀಯವಾದ ವ್ಯಾಸಂಗದಿಂದ ನಮ್ಮ ದೇಶಬಂಧುಗಳಿಗೆ ನಿದ್ರೆಗೆ ಬದಲಾಗಿ ಎಚ್ಚರಿಕೆಯೂ, ಅಂತಃಕಲಹಗಳಿಗೆ ಬದಲಾಗಿ ಒಗ್ಗಟ್ಟೂ, ಸ್ವಾರ್ಥತೆಗೆ ಬದಲಾಗಿ ದೇಶಹಿತದಲ್ಲಿ ತ್ಯಾಗವೂ, ಹೇಡಿತನಕ್ಕೆ ಬದಲಾಗಿ ಧೈರ್ಯವೂ ಹುಟ್ಟುವುವು. ಇದರಿಂದ ಮುಂದೆ ಬೆಳೆಯುವ ಭರತಖಂಡದ ಮಹೋನ್ನತಿಯ ಪ್ರಯತ್ನಕ್ಕೆ ದಾಕ್ಷಿಣಾತ್ಯರು ಮುಂದರಿದು ನಿಲ್ಲುವಂತೆ ಸ್ಫೂರ್ತಿಯು ಹುಟ್ಟುವುದು. ಆರ್ಯಸಂಸ್ಕೃತಿಯನ್ನು ಪ್ರಳಯಕಾಲದಲ್ಲಿ ರಕ್ಷಿಸಿದ ಕನ್ನಡಿಗರು ಮುಂದಿನ ಭಾರತದ ಸ್ವಾರಾಜ್ಯವನ್ನು ಕಟ್ಟಿ ನಡೆಸುವುದರಲ್ಲಿ ಮುಂದಾಳುಗಳಾಗುವರು. ಹೀಗೆಂಬ ಆಶೆಯು ನನ್ನ ಹೃದಯದಲ್ಲಿ ಹುಟ್ಟಿರುವುದು.

ಇಂತಹ ಪುಣ್ಯಶ್ಲೋಕವಾದ ವಿಜಯನಗರಸಾಮ್ರಾಜ್ಯದ ಚರಿತ್ರೆಯನ್ನು ನಮ್ಮ ತಾಯ್ನುಡಿಯಾದ ಕನ್ನಡದಲ್ಲಿ ಓಜಸ್ಸಿನಿಂದಲೂ ದೇಶಪ್ರೇಮದಿಂದಲೂ ತುಂಬಿದ ವೀರಭಾಷೆಯಲ್ಲಿ ಬರೆದ ಶ್ರೀ. ದೇಸಾಯಿ ಪಾಂಡುರಂಗರಾಯ ಇವರಿಗೂ ಇದನ್ನು ಅಚ್ಚುಮಾಡಿ ವಿಜಯನಗರ ಸಾಮ್ರಾಜ್ಯದ ಸ್ಮಾರಕೋತ್ಸವದ ವೇಳೆಗೆ ಸರಿಯಾಗಿ ಪ್ರಕಾಶಗೊಳಿಸಿದ ವಿಜಯನಗರ ಸಾಮ್ರಾಜ್ಯ ಸ್ಮಾರಕಮಂಡಳಿಯುವರಿಗೂ ಕನ್ನಡಿಗರ ಪರವಾಗಿ ಅನಂತವಾದ ಕೃತಜ್ಞತೆಯನ್ನು ಸಮರ್ಪಿಸುವೆನು.

ಮೈಸೂರು
೮-೧೦-೧೯೩೬

ಹಟ್ಟಿ ಕೃಷ್ಣ



ಹಂಪೆಯ ಶ್ರೀವಿರೂಪಾಕ್ಷ ದೇವಾಲಯ

(ಮುಂಭಾಗ)

# ವಿಜಯನಗರ ಸಾಮ್ರಾಜ್ಯ

## ಒಂದನೆಯ ವಿಲಾಸ

## ವಿಹಂಗಮ ನಿರೀಕ್ಷಣ

(ಕ್ರಿಸ್ತಯುಗಾರಂಭದಿಂದ ಕ್ರಿಸ್ತವರ್ಷ ೧೩೦೦ ವರೆಗೆ)

ಪರರಾಜ್ಯ, ಪರಧರ್ಮ, ಪರಸಂಸ್ಕೃತಿಗಳ ಘೋರ ಆಕ್ರಮಣಕ್ಕೆ ತುತ್ತಾಗಿ ದಕ್ಷಿಣಭಾರತೀಯ ಜನಾಂಗವು ನಾಮಶೇಷವಾಗುವ ಪ್ರಚಂಡ ಗಂಡಾಂತರವು ಒಡ್ಡಿದಾಗ ಸ್ವರಾಜ್ಯ, ಸ್ವಧರ್ಮ, ಸ್ವಸಂಸ್ಕೃತಿ ಇವುಗಳ ಮೇಲಿನ ಆ ಆಘಾತಗಳನ್ನು ಅತ್ಯಂತ ಧೈರ್ಯ-ಪರಾಕ್ರಮ-ಸಂಘಟನೆಯಿಂದ ಮುರಿದೊತ್ತಿ, ಭಾರತೀಯರ ಜೀವನಜ್ಯೋತಿಯನ್ನು ಪ್ರಜ್ವಲನಗೊಳಿಸಿದ ಕನ್ನಡಿಗರ[೧] ಕೊನೆಯ ಮಹಾ ಸಾಮ್ರಾಜ್ಯವಾದ ವಿಜಯನಗರದ ಇತಿಹಾಸವನ್ನು ಪರಿಶೀಲಿಸುವ ಮೊದಲು ಕನ್ನಡ ಜನಾಂಗದ ಪೂರ್ವೇತಿಹಾಸವನ್ನು ವಿಹಂಗಮ ದೃಷ್ಟಿಯಿಂದ ನಿರೀಕ್ಷಿಸುವುದು ಅವಶ್ಯಕವಾಗಿದೆ.

ಇತಿಹಾಸಪೂರ್ವಕಾಲದಲ್ಲಿ ಕನ್ನಡ ಜನಾಂಗವು ಎಂದು ಜನ್ಮವನ್ನು ತಾಳಿ ತನ್ನ ಬಾಲಲೀಲೆಗಳನ್ನಾರಂಭಿಸಿತು ಎಂಬ ಸಮಸ್ಯೆಯು ಪ್ರಸ್ತುತದಲ್ಲಿ ಗೂಢವೂ ಅನಿರ್ಣೀತವೂ ಆಗಿದೆ. ಆದರೂ ಭರತಭೂಮಿಯಲ್ಲಿ ಬಹು ಪ್ರಾಚೀನ ಕಾಲದಿಂದ ನೆಲೆಸಿದ ದ್ರಾವಿಡ ಜನಾಂಗವು ಉತ್ತರದಲ್ಲಿ ಊರ್ಜಿತವಾದ ಆರ್ಯಜನಾಂಗಕ್ಕೆ ಪ್ರಾಚೀನವೆಂದಾಗಲಿ ಸಮಕಾಲೀನವೆಂದಾಗಲಿ ಎಣಿಸುವುದಾಗಿ, ಆ ದ್ರಾವಿಡ ಜನಾಂಗದ ಬಳಗಗಳಲ್ಲಿ ಕನ್ನಡಿಗನು ಪ್ರಮುಖನೂ ಹಿರಿಯನೂ ಎಂದು ನಿರ್ಧರಿಸಬಹುದಾದಲ್ಲಿ, ಕನ್ನಡಜನಾಂಗದ ಇತಿಹಾಸದ ಮೇರೆಯನ್ನು ಕ್ರಿಸ್ತಪೂರ್ವ ಎಷ್ಟೋ ಶತಮಾನಗಳ ಹಿಂದೆ ಒಯ್ಯಲಿಕ್ಕಾಗಬಹುದು.

---

೧. ಪರಿಶಿಷ್ಟ ೧ ನ್ನು ನೋಡಿ

ಮಂಜು ಮುಸುಕಿದ ಈ ಪ್ರದೇಶವನ್ನು ಬಿಟ್ಟು ಹೆಚ್ಚು ಸ್ಪಷ್ಟವಾದ ಇತಿಹಾಸಕಾಲದತ್ತ ಹೊರಳಿದರೆ, ಸ್ಥೂಲಮಾನದಿಂದ ಕ್ರಿಸ್ತಶಕದ ಆರಂಭದ ಅಕ್ಕಪಕ್ಕದಲ್ಲಿ ಕನ್ನಡಜನಾಂಗವು ರೂಪುಗೊಂಡು ಬಾಳಿತ್ತು ಎಂಬುದಕ್ಕೆ ಸ್ಪಷ್ಟವಾದ ಕುರುಹುಗಳು ದೊರೆವುವು[೨].

ಕದಂಬ ರಾಜ್ಯ ಸ್ಥಾಪಕನಾದ ತಾಳಗುಂದದ ಮಯೂರವರ್ಮ ನಿಂದ ಬಲವಾದ ಕನ್ನಡ ಅರಸೊತ್ತಿಗೆಯು ಧ್ವಜಾರೋಪಣವಾಯಿತು (ಸು. ೩೦೦).[೩] ಮೂರರಿಂದ ಆರನೆಯ ವರೆಗಿನ ಶತಮಾನಗಳಲ್ಲಿ ಕದಂಬ ರಾಜ್ಯವು ಸ್ವತಂತ್ರವಾಗಿ ಬಾಳಿತು. ಸಾಧಾರಣವಾಗಿ ಇದೇ ಸಮಯ ದಲ್ಲಿ ಮೈಸೂರ ಪ್ರದೇಶದಲ್ಲಿ ಗಂಗರಸರು ಹೆಚ್ಚಳವನ್ನು ಪಡೆದರು. ಈ ರಾಜ್ಯಗಳ ಸ್ಥಾಪನೆ-ಸಂವರ್ಧನೆಗಳ ಸಾಧಕದಿಂದ ಕನ್ನಡ ಜನಾಂಗ ದಲ್ಲಿ ಬಲ, ಆತ್ಮವಿಶ್ವಾಸ, ಮಹತ್ವಾಕಾಂಕ್ಷೆ ಇವುಗಳು ವೃದ್ಧಿಂಗತ ವಾದುವು.

ಆರನೆಯ ಶತಮಾನದ ನಟ್ಟ ನಡುವೆ ಒರುವಷ್ಟರಲ್ಲಿ ಕನ್ನಡಿಗರು ಭರದಿಂದ ಸಾಮ್ರಾಜ್ಯವನ್ನು ಕಟ್ಟುವ ಉದ್ಯೋಗದಲ್ಲಿ ನಿರತರಾದ ನೋಟವು ಕಣ್ಣಿಗೆ ಬೀಳುವುದು. ಬಾದಾಮಿಯ ಚಾಲುಕ್ಯ ಸಾಮ್ರಾ-ಜ್ಯದ ಸ್ಥಾಪನೆಯಿಂದ ಕನ್ನಡ ಸಾಮ್ರಾಜ್ಯವೃಕ್ಷವು ಬೇರೂರಿ ಬಲುಹಿನಿಂದ ಬೆಳೆಯಲಾರಂಭಿಸಿತು. ಕೆಲಕಾಲದ ಹಿಂದೆ ದಕ್ಷಿಣ ಭಾರತದ ಒಂದು ಮೂಲೆಯಲ್ಲಿ ತಲೆಯೆತ್ತಿದ ಚಿಕ್ಕ ಜನಾಂಗವು ಅಲ್ಪಾವಧಿಯಲ್ಲಿ ದಕ್ಷಿಣಭಾರತದ ಸಾಮ್ರಾಜ್ಯಸಿಂಹಾಸನದ ಮೇಲೆ ವಿರಾಜಿಸುತ್ತ ಉತ್ತರಭಾರತದಲ್ಲಿಯೂ ತನ್ನ ಪ್ರಭಾವವನ್ನು ಬೀರತೊಡಗಿದುದು ಕೌತುಕಾಸ್ಪದವಾಗಿದೆ. ಉನ್ನತವಾದ ಈ ಗೌರವಕ್ಕೆ ಕಾರಣಪುರುಷ-ನಾದ 'ಪರಮೇಶ್ವರ' ಇಮ್ಮಡಿ ಪುಲಿಕೇಶಿಯು ಈ ಸಾಮ್ರಾಜ್ಯದ ಗಗನ ಮಧ್ಯದಲ್ಲಿ ರಾರಾಜಿಸುವ ದಿನಮಣಿಯು.

ಎಂಟನೆಯ ಶತಮಾನದ ಅರ್ಧವು ಸರಿದು ಹೋಗುತ್ತಿರುವಾಗ ಇನ್ನೊಂದು ಕನ್ನಡ ಚಕ್ರಾಧಿಪತ್ಯವು[೪] ಉದಯೋನ್ಮುಖವಾಗುವುದು.

---

೨. ಕ. ಜ. ಸಂ. ೧ ಪ್ರ. ಪು. ೫-೭. ೩. M. G. vol. 11, pp. 502-3.

೪ A. R. pp. 21-24.

ಇಂದಿಗೂ ಕರ್ನಾಟಕದ ಗಡಿನಾಡಾಗಿ ಉಳಿದ ಈಗಲೂ ಕನ್ನಡ ಸಂಸ್ಕೃತಿಯ ಕುರುಹುಗಳುಳ್ಳ ಲಾತೂರು[೫] ತಮ್ಮ ಹೆಮ್ಮೆಯ ತವರೂರು ಎಂದು ಹೇಳಿಕೊಳ್ಳುವ ರಾಷ್ಟ್ರಕೂಟರು ಮುಂದೆ ಮಳ-ಖೇಡದಲ್ಲಿ ತಳವೂರಿ ಉತ್ತರದಲ್ಲಿ ಗುಜರಾತ ಮಾಳವ ಬಂಗಾಲಗಳ ವರೆಗೂ ದಕ್ಷಿಣದಲ್ಲಿ ತಂಜಾವರದ ವರೆಗೂ[೬] ತಮ್ಮ ಸಾಮ್ರಾಜ್ಯದ ಕೈಕಾಲುಗಳನ್ನು ಚಾಚಿದರು. ಸುಲೇಮಾನ ಸೌದಾಗರನು ಹೇಳು-ವಂತೆ ಒಂಭತ್ತನೆಯ ಶತಮಾನದಲ್ಲಿ ಭೂಮಂಡಲದ ಮೇಲಿನ ಸುವಿಖ್ಯಾತವಾದ ನಾಲ್ಕು ಸಾಮ್ರಾಜ್ಯಗಳಲ್ಲಿ ಈ ರಾಷ್ಟ್ರಕೂಟ ಸಾಮ್ರಾಜ್ಯವು ಒಂದಾಗಿ ಎಣಿಸಲ್ಪಡುತ್ತಿತ್ತು.[೭]

ಹತ್ತನೆಯ ಶತಮಾನದ ಕೊನೆಯ ಪಾದದಲ್ಲಿ ಇನ್ನೊಂದು ಕನ್ನಡ ಸಾಮ್ರಾಜ್ಯವು ಹಳೆಯ ಪರಂಪರೆಯನ್ನು ಹೊಸತಾಗಿ ಎತ್ತಿಹಿಡಿದು ಮುಂದೆ ನೂಕಿತು. ಉತ್ತರಕ್ಕೆ ಗುಜರಾತ, ಮಾಳವ, ಪೂರ್ವಕ್ಕೆ ಬಂಗಾಲ, ಆಸಾಮ, ದಕ್ಷಿಣಕ್ಕೆ ಕಂಚಿ. ಇವುಗಳ ವರೆಗೆ ದೇಶವನ್ನು ಪಾದಾಕ್ರಾಂತ ಮಾಡಿ, ಆಸೇತು-ಹಿಮಾಚಲ ತನ್ನ ಕೀರ್ತಿದುಂದುಭಿ-ಯನ್ನು ಮೊಳಗಿಸಿ, ಬಿಲ್ಹಣ–ವಿಜ್ಞಾನೇಶ್ವರರಂತಹ ಪಂಡಿತಪ್ರವರರಿಂದ 'ಇಂತಹ ಭೂಪಾಲನನ್ನು ಹಿಂದೆ ಯಾರೂ ನೋಡಿಯೂ ಇಲ್ಲ, ಕೇಳಿಯೂ ಇಲ್ಲ' ಎಂದು[೮] ಯಥಾರ್ಥವಾಗಿ ಹೊಗಳಿಸಿಕೊಂಡು ಕರ್ನಾಟಕದ ಯುಗಪ್ರವರ್ತಕನಾಗಿ[೯] ಮೆರೆದ ಕಲ್ಯಾಣ ಚಾಲುಕ್ಯರ ಶ್ರೀ ವಿಕ್ರಮಾದಿತ್ಯ ದೇವನ[೧೦] ಕೈಯಲ್ಲಿ ಕನ್ನಡ ಸಾಮ್ರಾಜ್ಯ ವೈಭವವು ಪರಮಾ-ವಧಿಗೆ ಮುಟ್ಟಿತು.

ಮುಂದೆ, ಮಾಳವದಿಂದ ಕನ್ಯಾಕುಮಾರಿಯ ವರೆಗೆ ಪ್ರಭಾವ ಶಾಲಿಯಾಗಿ ದಕ್ಷಿಣಭಾರತವನ್ನು ಏಕಚ್ಛತ್ರದಿಂದ ಆಳಿದ ಈ ಕರ್ನಾಟಕ ಸಾರ್ವಭೌಮತ್ವದ ಬಿಗುವು ಹನ್ನೆರಡನೆಯ ಶತಮಾನದ ಕೊನೆಯಲ್ಲಿ

೫. ದೀರ್ಘ ಟಿಪ್ಪಣಿ ೧. ೬. A. R, p. 121. ೭. V. S 445-6.

೮. ಮಿತಾಕ್ಷರಾ ಟೀಕೆಯ ಉಪಸಂಹಾರ ಶ್ಲೋಕದಲ್ಲಿ ೯. ಚಾಲುಕ್ಯ ವಿಕ್ರಮ ವರ್ಷ ಎಂಬ ಕಾಲಗಣನೆಯನ್ನು ಆರಂಭಿಸಿದನು—ಗದಗಿನ ವೀರನಾರಾಯಣಗುಡಿಯ ಶಾಸನ. ೧೦. ಆರನೆಯ ವಿಕ್ರಮಾದಿತ್ಯ

ಶಿಥಿಲವಾಗತೊಡಗಿತು. ನಡುನಾಡಾದ ಕಲ್ಯಾಣ ಪ್ರಾಂತದಲ್ಲಿ ರಾಜಕೀಯ ಮತ್ತು ಧಾರ್ಮಿಕ ಕ್ರಾಂತಿಗಳ ಗೊಂದಲವು ಉಂಟಾಗಿ ದೇಶವು ಅರಾಜಕಕ್ಕೀಡಾಯಿತು. ಈ ಸಂಧಿಯಲ್ಲಿ ಉತ್ತರದಲ್ಲಿ ದೇವಗಿರಿಯ ಯಾದವರೂ ದಕ್ಷಿಣದಲ್ಲಿ ಹೊಯ್ಸಳರೂ ಕೆಲಕಾಲ ಪ್ರಬಲರಾಗಿ ತಮ್ಮ ತಮ್ಮ ಸಾಮ್ರಾಜ್ಯಗಳನ್ನು ಮುಂದೆ ನೂಕಿದರು. ದೇವಗಿರಿಯ ಸಿಂಘಣನೂ ಹೊಯ್ಸಳರ ಇಮ್ಮಡಿ ವೀರಬಲ್ಲಾಳನೂ ಮುಂದಿನ ಕೆಲ ವರ್ಷಗಳಲ್ಲಿ ಮಹತ್ವಾಕಾಂಕ್ಷಿಗಳಾದ ಸಮ್ರಾಜರಾಗಿ ಹೊಳೆದರು.

ಹದಿಮೂರನೆಯ ಶತಮಾನದ ಕೊನೆಯಲ್ಲಿ ಪ್ರಭುಶಕ್ತಿಯ ಅಸಮರ್ಥತೆಯಿಂದಲೂ ಅಂತಃಕಲಹಗಳಿಂದಲೂ ದಕ್ಷಿಣ ಭಾರತದ ಜನಾಂಗಗಳ ಮೇಲೆ ದೌರ್ಬಲ್ಯದ ಕರಿನೆಳಲು ಪಸರಿಸಿತು. ಶಕ್ತಿಹೀನವಾದ ಈ ರಾಜ್ಯಗಳು ಉತ್ತರದಿಂದ ಮಹಾಸಾಗರದ ತೆರೆಯಂತೆ ಉರುಳುರುಳಿ ಬರುವ ಬಲಿಷ್ಠವಾದ ಪರಕೀಯರ ಆಕ್ರಮಣಕ್ಕೆ ತುತ್ತಾಗಿ ಅಲ್ಪಾವಧಿಯಲ್ಲಿ ಕಳೆಗುಂದಿದುವು. ಸುಮಾರು ಮೂವತ್ತು ನಾಲ್ವತ್ತು ವರ್ಷಗಳ ವರೆಗೆ ದೇಶದಲ್ಲಿ ಎಲ್ಲೆಡೆಗೆ ಅನಾಯಕತ್ವದ ಬಿರುಗಾಳಿಯು ಬೀಸುತ್ತ ದೈನ್ಯದ ಕಗ್ಗತ್ತಲೆಯು ಕವಿದಿತು !

ಇಂತು ಮೂರರಿಂದ ಹದಿಮೂರನೆಯ ಶತಮಾನದ ವರೆಗಿನ ಒಂದು ಸಾವಿರ ವರ್ಷದ ಕಾಲಾವಧಿಯಲ್ಲಿ ಕರ್ನಾಟಕದಲ್ಲಿ ನಾಲ್ಕೈಯ್ಯು ಸಾಮ್ರಾಜ್ಯಗಳೂ ಕೆಲವು ಚಿಕ್ಕ ದೊಡ್ಡ ರಾಜ್ಯಗಳೂ ಉದಯಿಸಿದುವು. ಅನೇಕ ಅರಸರೂ ಅರಸುಮನೆತನಗಳೂ ಬೆಳಗಿದುವು. ಇವುಗಳೆಲ್ಲವು ಕನ್ನಡವಾಗಿದ್ದುವೆಂದು ಧಾರಾಳವಾಗಿ ಹೇಳಬಹುದು. ಇವರ ರಾಜ್ಯಗಳು ಸ್ಥಾಪನವಾದುದು ಕರ್ನಾಟಕದಲ್ಲಿ. ಇವರೆಲ್ಲರು ಬಾಳಿ ಬೆಳೆದುದು ಕನ್ನಡ ನಾಡಿನಲ್ಲಿ. ಕರ್ನಾಟಕವನ್ನು ತಮ್ಮ ತಾಯ್ನಾಡನ್ನು ಮಾಡಿಕೊಂಡು ಕನ್ನಡ ಹಾಲಿನಿಂದ ತಮ್ಮ ಬಲೋತ್ಸಾಹಗಳನ್ನು ಸಂವರ್ಧಿಸಿಕೊಂಡು ಕನ್ನಡ ಬಲ್ಲಾಳುಗಳಿಂದ ತಮ್ಮ ರಾಜ್ಯಾಂಗಗಳನ್ನು ಸ್ಥಿರಪಡಿಸಿಕೊಂಡು ಕನ್ನಡ ನೆತ್ತರದಲ್ಲಿ ಬೆರೆತು ಸಮರಸವಾಗಿ ಹೋದ ಇವರು ಈ ನಾಡಿನ ಅಭಿಮಾನವನ್ನು ತೊಟ್ಟು ಕರ್ನಾಟಕ ಸಂಸ್ಕೃತಿಯನ್ನು ಪಾಲಿಸಿ ಬಲಿಸಿದರು.

ಅರಸರ ವಂಶಾವಳಿಯು ನಾಡಿನ ಚರಿತ್ರೆಯಾಗದು. ನಾಡ ಜನರ ಚರಿತ್ರೆಯು ನಾಡಿನ ನಿಜವಾದ ಇತಿಹಾಸವು.'ರಾಜಾ ಕಾಲಸ್ಯ ಕಾರಣಂ' ಎಂದು ಹೇಳುವಂತೆ ರಾಜಶಕ್ತಿಯು ಜನಜೀವನವನ್ನು ರೂಪು-ಗೊಳಿಸುವ ಶಕ್ತಿಗಳಲ್ಲಿ ಹಿರಿದಾದುದರಿಂದ ಚರಿತ್ರೆಯಲ್ಲಿ ಕೆಲವಂಶದಿಂದ ಅರಸೊತ್ತಿಗೆಗೆ ಪ್ರಾಧಾನ್ಯವು ಬರುವುದು ಸ್ವಾಭಾವಿಕವು. ಆದರೆ ಈ ಅರಸರ ವೈಭವವು ಜನತೆಯ ಗೆಯ್ಮೆಯನ್ನು ನುಂಗಿ ಬಿಡ ಬಾರದು. ಈ ಸಾವಿರ ವರ್ಷದಲ್ಲಿ ಏಳಗೂಸಾಗಿದ್ದ ಕನ್ನಡಿಗನು ಹರೆಯವನ್ನು ಏರಿ ಹಿರಿಯತನವನ್ನು ಸೇರಿ ರಾಜಕಾರ್ಯಧುರಂಧರನಾಗಿ ಪ್ರಖ್ಯಾತಿ ಹೊಂದಿದನು. ಕನ್ನಡ ಜನಾಂಗದಲ್ಲಿ ಚೈತನ್ಯವು ಉಕ್ಕಿತು. ವೃತ್ತಿಯು ವಿಶಾಲವಾಯಿತು. ಆಶೆ-ಆಕಾಂಕ್ಷೆಗಳು ನೀಳವಾದುವು. ಜನಜೀವನವು ಉನ್ನತವೂ ಸಮೃದ್ಧವೂ ಆಯಿತು. ಭಾಷೆಯು ಬೆಳೆಯಿತು. ಸಾಹಿತ್ಯವು ಅರಳಿತು. ಶಿಲ್ಪ ಮುಂತಾದ ಕಲೆಗಳು ಕಳೆಗೊಂಡುವು. ಧರ್ಮ-ಮತ-ನೀತಿ-ತತ್ವಗಳು ಸ್ಥಿರವಾದುವು. ಒಟ್ಟಿನಲ್ಲಿ ಕರ್ನಾಟಕದ ಸಂಸ್ಕೃತಿ-ಸಂಪ್ರದಾಯಗಳು ಸಂವರ್ಧಿತವಾಗಿ ರೂಪುಗೊಂಡು ನಿಂತುವು.

ಈ ಕಾಲಾವಧಿಯಲ್ಲಿ ಕರ್ನಾಟಕ ಸಂಸ್ಕೃತಿಯ ಉತ್ಕರ್ಷ ರೇಖೆಯು ದಕ್ಷಿಣದಿಂದ ಉತ್ತರಕ್ಕೆ ಬೆಳೆಯುತ್ತ ಹೋದುದನ್ನು ನೋಡಬಹುದಾಗಿದೆ. ಕನ್ನಡ ರಾಷ್ಟ್ರದ ವಿಸ್ತಾರವು ಊರ್ಧ್ವಗಾಮಿಯಾ-ಯಿತು. ಒಂದರ ಹಿಂದೊಂದು ಅಭ್ಯುದಯವನ್ನು ಹೊಂದಿದ ಕನ್ನಡ ರಾಜ್ಯಗಳು ಉತ್ತರೋತ್ತರವಾಗಿ ಹಬ್ಬಿದುವು.ಸಂಸ್ಕೃತಿಯು ರಾಜ್ಯಗಳ ಮಾರ್ಗವನ್ನು ಅನುಸರಿಸಿತು. ವರ್ಧಿಷ್ಣುವಾದ ಕನ್ನಡ ಜನಾಂಗದ ಈ ಊರ್ಧ್ವಗಮನವನ್ನು ಸಂಸ್ಕೃತಿ ಮತ್ತು ಪ್ರಭುಶಕ್ತಿ ಇವುಗಳ ಕೇಂದ್ರಗಳೆಂದು ಹೇಳಬಹುದಾದ ಕರ್ನಾಟಕದ ರಾಜಧಾನಿಯ ಸ್ಥಲಗಳು ಸೂಚಿಸುವಂತಹವಾಗಿವೆ. ಅದು ಹೀಗೆ: ತಲಕಾಡು → ಬನವಾಸಿ → ಬಾದಾಮಿ → ಮಳಖೇಡ → ಕಲ್ಯಾಣ → ದೇವ-ಗಿರಿ. ಇಂತು ಉತ್ತರದಲ್ಲಿ ಗೋದಾವರಿಯ ವರೆಗೆ ಉನ್ನತಿಪಡೆದ ಕರ್ನಾ-ಟಕ ಸಂಸ್ಕೃತಿಯು ಕಲ್ಯಾಣ ಚಾಲುಕ್ಯ ಸಾಮ್ರಾಜ್ಯದ ಆಳಿಗಾಲ

ದೊಂದಿಗೆ ಇಳಿಗಾಲಕ್ಕೀಡಾಯಿತು. ಉತ್ತರ ಪ್ರದೇಶದಲ್ಲಿ ಕನ್ನಡ ಸಂಸ್ಕೃತಿಯು ಕಳೆಗುಂದುತ್ತ ಕನ್ನಡ ಗಡಿಗಳು ತಿರುಳುಗೆಡಲು ಅನುವಾದುವು. ಬಳಿಕ ಪರಕೀಯ ಆಕ್ರಮಣದ ಕೋಲಾಹಲದಲ್ಲಿ ಅನ್ಯ ಸಂಸ್ಕೃತಿಯಿಂದಾಕ್ರಾಂತವಾದ ಉತ್ತರ ಕರ್ನಾಟಕವು ಚಿರಕಾಲ ಕನ್ನಡಿಗರ ಕೈಬಿಟ್ಟು ಹೋಯಿತು. ಮುಂದೆ ಸ್ವಲ್ಪ ಕಾಲದಲ್ಲಿ ಲಂಕಾ ದ್ವೀಪದ ವರೆಗೆ ತಮ್ಮ ಸಾಮ್ರಾಜ್ಯವನ್ನು ಬೆಳೆಸಿದ ವಿಜಯನಗರದ ಮಹತ್ವಾಕಾಂಕ್ಷೆಯ ದೃಷ್ಟಿಗೆ ಕೂಡ ಕೃಷ್ಣೆಯ ಉತ್ತರದ ಕರ್ನಾಟಕವು ಕೊನೆಯ ವರೆಗೂ ಸಿಲುಕದೆ ಬೇರೆಯಾಗಿಯೆ ಉಳಿದು ಹೋಯಿತು.

---

## ಎರಡನೆಯ ವಿಲಾಸ

# ಕಾಳರಾತ್ರಿ (೧೨೯೪-೧೩೩೦)

ಹಣ-ನೆಲಗಳ ಆಶೆಯಿಂದಲೂ ಧರ್ಮಾಭಿಮಾನದಿಂದಲೂ ಪ್ರೇರಿತರಾದ ಮಹಮ್ಮದೀಯರು ವಾಯುವ್ಯದ ಕಣಿವೆಗಳೊಳಗಿಂದ ಧುಮು-ಧುಮುಕಿ ಭರತಭೂಮಿಯ ಮೇಲೆ ಕಾಲಿಟ್ಟು ಸುಮಾರು ಮೂರು ನೂರು ವರ್ಷಗಳಾಗಿವೆ (೧೦೦೦—೧೨೯೪). ಈ ಅವಧಿಯಲ್ಲಿ ಉತ್ತರ ಭಾರತದ ಬಹುಭಾಗವು ಅವರಿಂದ ಪಾದಾಕ್ರಾಂತವಾಗಿ ಹೋಗಿದೆ. ದಕ್ಷಿಣ ಭಾರತದತ್ತ ಅವರ ದೃಷ್ಟಿಯು ಇನ್ನೂ ಹೊರಳಿಲ್ಲ. ಆದರೆ ಇದೇ ಪರಿಸ್ಥಿತಿಯು ಇನ್ನು ಮುಂದೆ ಬಹುಕಾಲ ಉಳಿಯುವಂತಿರಲಿಲ್ಲ. ಅವರ ಮಹತ್ವಾಕಾಂಕ್ಷೆಗೆ ಉತ್ತರ ಭಾರತವು ಕಿರಿನೆಲವಾಗಿ ಅವರ ಕಟಾಕ್ಷವು ವಿಂಧ್ಯಗಿರಿಯ ಆಚೆಗೆ ದಕ್ಷಿಣಕ್ಕೆ ನುಗ್ಗಿತು. ಆಗ ದಕ್ಷಿಣ ದೇಶದಲ್ಲಿ ಕಾಣಬರುವ ರಾಜಕೀಯ ಪರಿಸ್ಥಿತಿಯು ಹೀಗೆ ಇದ್ದಿತು.

ತೀರ ಉತ್ತರದಲ್ಲಿ ದೇವಗಿರಿಯ ಯಾದವ ರಾಜ್ಯವು ನೆಲೆಸಿದೆ. ಅದರ ಕೆಳಗೆ ವರಂಗಲ ರಾಜ್ಯವು. ನಡುವೆ ಹೊಯ್ಸಳರ ವಿಸ್ತಾರವಾದ ರಾಜ್ಯವು. ಅದರ ಕೆಳಗೆ ತೀರ ದಕ್ಷಿಣದಲ್ಲಿ ಮದುರೆಯ ಪಾಂಡ್ಯ

ರಾಜ್ಯವು. ಇದಲ್ಲದೆ ಇವುಗಳನ್ನು ಹೊಂದಿಕೊಂಡ ಅನೇಕ ಸಣ್ಣ ಸಣ್ಣ ಮಾಂಡಲಿಕ ರಾಜ್ಯಗಳು ಅಲ್ಲಲ್ಲಿ ಬಾಳಿವೆ. ಆದರೆ ಈ ಎಲ್ಲ ರಾಜ್ಯಗಳನ್ನೂ ಮೇಲೆ ಹೇಳಿದ ನಾಲ್ಕು ಪ್ರಮುಖ ರಾಜ್ಯಗಳನ್ನೂ ಒಂದು ಬಗೆಯ ನಿಶ್ಚಿಂತನೆಯು ಆವರಿಸಿಕೊಂಡಿತ್ತು.

ದಕ್ಷಿಣ ಭಾರತದ ಮೇಲೆ ಕಾಳರಾಹುವಿನ ಭೀಷಣಚ್ಛಾಯೆಯು ಕವಿಯಲಾರಂಭಿಸಿತು. ಎಡೆಬಿಡದೆ ಒಂದರ ಹಿಂದೊಂದು ವಿಧ್ವಂಸಕರಾದ ಕಟ್ಟಾಳುಗಳ ದಂಡುಗಳು ದೇಶವನ್ನು ಗೆಲ್ಲುತ್ತ, ತುಳಿಯುತ್ತ ಮುಂದೆ ಸಾಗಿದುವು. ದಕ್ಷಿಣ ಭಾರತಕ್ಕೆ ಕಾಲನ ದೂತನಾಗಿ ಮೊದಲು ದೇವಗಿರಿಗೆ ಬಂದವನು ಅಲ್ಲಾವುದ್ದೀನ ಖಿಲಜಿಯು (೧೨೯೪). ಮುಂದೆ ಆತನ ಬಿರುದನ್ನು ತೊಟ್ಟು ಆತನ ಪಂಥವನ್ನು ಎತ್ತಿ ಹಿಡಿದು ಪ್ರಚಂಡ ಸಾಹಸದಿಂದ ಅಖಿಲ ದಕ್ಷಿಣ ಭಾರತವನ್ನು ಗಡಗಡನೆ ನಡುಗಿಸಿ ಇಲ್ಲಿಯ ರಾಜ್ಯಗಳನ್ನೆಲ್ಲ ಬುಗಮೇಲು ಮಾಡಿದವನು ಮಲಿಕ ಕಾಫರನು (೧೩೦೬-೧೩೩೦).

ದೇವಗಿರಿಯ ರಾಜ್ಯಕ್ಕೆ ೧೨೯೪ರಲ್ಲಿ ಹಿಡಿಯತೊಡಗಿದ ಗ್ರಹಣವು ೧೩೧೨ರಷ್ಟರಲ್ಲಿ ಪೂರ್ಣ ಖಗ್ರಾಸವಾಗಿ ಆ ರಾಜ್ಯವು ಮುಹಮ್ಮದೀಯರ ಪಾಲಾಯಿತು. ಆ ಮೇಲೆ ಅವರ ಆಕ್ರಮಣಕ್ಕೆ ಆಹುತಿಯಾದ ಎರಡನೆಯ ರಾಜ್ಯವು ವರಂಗಲ್ಲು (೧೩೦೯). ಅನಂತರ ಹೊಯ್ಸಳರ ರಾಜ್ಯದಲ್ಲಿ ಕೊಸಗಾಟವು ಮುಂದುವರಿಯಿತು. ಮರುವರುಷವೆ ಹೊಯ್ಸಳ ರಾಜಧಾನಿಯಾದ ದೋರಸಮುದ್ರವು ಮಲಿಕಕಾಫರನಿಂದ ಕಸಿಯಲ್ಪಟ್ಟು ಮುಮ್ಮಡಿ ವೀರಬಲ್ಲಾಳರಾಯನು ರಾಜ್ಯಭ್ರಷ್ಟನಾಗಿ ಅಲೆದಾಡತೊಡಗಿದನು (೧೩೧೦). ಇದೇ ಸಮಯದಲ್ಲಿ, ಮದುರೆಯ ರಾಜ್ಯದಲ್ಲಿ ಅಂತಃಕಲಹವು ತಲೆಯೆತ್ತಿ ಬಂಧುದ್ರೋಹಿಯೂ ದೇಶಘಾತಕಿಯೂ ಆದ ಸುಂದರ ಪಾಂಡ್ಯನು ತನ್ನ ಅಣ್ಣನಾದ ವೀರಪಾಂಡ್ಯನನ್ನು ನದೆಯಲು ದಿಲ್ಲೀಶ್ವರನಲ್ಲಿಗೆ ದೂರಸಿಟ್ಟು ಮುಹಮ್ಮದಿಯ ಬಲವನ್ನು ಬರಮಾಡಿಕೊಂಡನು. ಹಾಂ ಹಾಂ ಎನ್ನುವಷ್ಟರಲ್ಲಿ ಪಾಂಡ್ಯ ರಾಜ್ಯವು ವೈರಿಗಳಿಗೆ ಆಹಾರವಾಗಿ ಮದುರೆಯಲ್ಲಿ ಮುಸಲ್ಮಾನ ಸುಬೇದಾರನು ಸ್ಥಾಪಿತನಾದನು (೧೩೧೧). ಅಲ್ಪಾವಧಿಯಲ್ಲಿಯ ಅಪೂರ್ವ

ವಾದ ಈ ವಿಷಯಗಳಿಂದ ಉನ್ಮಾದವೇರಿದ ಮಲೀಕಕಾಫರನು ಅಲ್ಲ-ಲ್ಲಿಯ ಸಿರಿಯುಳ್ಳ ದೇವಾಲಯಗಳನ್ನು ಹುಡಿಗೂಡಿಸುತ್ತ "ಸೇತುಬಂಧ ರಾಮೇಶ್ವರ"ದ ವರೆಗೆ ನುಗ್ಗಿ ಅಲ್ಲಿ ಒಂದು ಮಸೂತಿಯನ್ನು ನಿಲ್ಲಿ-ಸಿದನು.

ದೇಶವು ಹೆರವರ ಪಾಲಾಯಿತು. ಸ್ವರಾಜ್ಯಗಳು ನೆಲಸಮ ವಾದುವು. ರಾಜರು ರಾಜ್ಯಭ್ರಷ್ಟರಾದರು. ಹಿಂದು ಜನಾಂಗವು, ಹಿಂದು ಸಂಸ್ಕೃತಿಯು ತತ್ತರಿಸಿ, ಕಂಗೆಟ್ಟು, ಕಕ್ಕಾವಿಕ್ಕಿಯಾಯಿತು. ಸ್ವಧರ್ಮವು ಸಂಕಟಕ್ಕೆ ಸಿಲುಕಿತು. ಅನಾದಿಯಿಂದ ಪೂಜೆಗೊಳ್ಳುತ್ತ ಬಂದ ದೇವಾಲಯಗಳು ಉಧ್ವಸ್ತವಾದುವು. ಪವಿತ್ರ ಸ್ಥಳಗಳು ಅಪ-ವಿತ್ರವಾದುವು. ವೈಭವವು ಹಾಳಾಯಿತು. ನೂರಾರು ವರುಷ-ಗಳಿಂದ ಕಟ್ಟಿ ನಿಲ್ಲಿಸಿದ ನಾಗರಿಕತೆಯು ನಾಮಶೇಷವಾಗುವ ದುರ್ಧರ ಸಮಯವು ಒದಗಿತು.

ಇಷ್ಟರಲ್ಲಿ ದಿಲ್ಲಿಯ ಸಿಂಹಾಸನದ ಮೇಲೆ ಧರ್ಮಾಂಧನೂ ಕ್ರೂರನೂ ಹಿಂಸಾವಿನೋದಿಯೂ ಆದ ಮಹಮ್ಮದ ತಘಲಖನು ಆರೂಢನಾಗಿ ಅಖಿಲ ಭರತಭೂಮಿಯನ್ನು ಏಕಚ್ಛತ್ರದಿಂದ ಆಳಲು ಹವಣಿಸಿ ದೇವಗಿರಿಗೆ ತನ್ನ ರಾಜಧಾನಿಯನ್ನು ತಂದನು (೧೩೨೭). ಹಿಂದುಗಳ ಮೇಲಿನ ಮಹಮ್ಮದೀಯರ ಕ್ರೂರ ಅತ್ಯಾಚಾರಗಳು ದಿನ ದಿನಕ್ಕೆ ಹೆಚ್ಚಲಾರಂಭಿಸಿದುವು. ಈ ಮೊದಲೆ ದೇವಗಿರಿಯ ಹರಪಾಲ ರಾಯನನ್ನು ಮೈದೊಗಲು ಸುಲಿಸಿ ಕೊಲ್ಲಿಸಿದ (೧೩೧೮) ಭೀಷಣವಾರ್ತೆ ಯಿಂದ ಜನರ ಹೃದಯಗಳು ಹೌಹಾರಿ ಹೋಗಿದ್ದುವು. ಈ ದಾಳಿ ಗಾರರು ಎಂತಹ ಅಸುರ ಕೃತಿಗಳನ್ನೂ ಎಸಗಲು ಹೇಸರು ಎಂಬದು ಚೆನ್ನಾಗಿ ಜನರ ಅನುಭವಕ್ಕೆ ಬಂದಿತು. ಎತ್ತ ನೋಡಿದತ್ತ ಕೊಲೆ, ಸುಲಿಗೆ, ವಿಧ್ವಂಸ, ವಿನಾಶ, ಭ್ರಷ್ಟತೆ! ಇದರಿಂದ ಮೊದಲೆ ಬಲಗುಂದಿ ಬಳಲುತ್ತಿರುವ ಹಿಂದುಜನಾಂಗದಲ್ಲಿ ಒಂದೇ ಹಾಹಾಕಾರವು ಎದ್ದಿತು! ಘೋರವಾದ ಈ ಪರಕೀಯ ಆಕ್ರಮಣದಿಂದ ದಾರುಣದುರವಸ್ಥೆ-ಗೀಡಾದ ಜನಾಂಗದ ಸಂಸ್ಕೃತಿಯ ಚಿತ್ರವನ್ನು ಹಿರಿಯ ಬುಕ್ಕರಾಯನ ಸೊಸೆಯಾದ ಗಂಗಾದೇವಿಯು ತನ್ನ 'ವೀರಕಂಪಣರಾಯಚರಿತಂ'

ಎಂಬ ಐತಿಹಾಸಿಕ ಕಾವ್ಯದಲ್ಲಿ ಬಹು ಹೃದಯಭೇದಕವಾಗಿ ಎಳೆದು ತೋರಿಸಿದ್ದಾಳೆ. ಸಂಸ್ಕೃತಿಯು ಈ ವಿನಾಶವನ್ನು ಕುರಿತು ಆಕೆಯು ಅರ್ಥಗಂಭೀರವಾದ ಒಂದು ಪದ್ಯದಲ್ಲಿ ತನ್ನ ಭಾವವನ್ನು ಈ ರೀತಿಯಾಗಿ ವ್ಯಕ್ತಪಡಿಸಿರುವಳು:

"ದೇಶವು ಅನ್ಯರ ಪಾಲಾಯಿತು. (ರಾಷ್ಟ್ರವು ಹಾಳಾಯಿತು. ಹೋಗಲಿ.) ಈ ಹಾಳೂರುಗಳಲ್ಲಿ ಸೇರಿಕೊಂಡ ಈ ಗೂಗೆಗಳು ಕಿರಚುತ್ತ ಕಿವಿಸೂಲೆಯನ್ನು ಎಬ್ಬಿಸುತ್ತಲಿವೆ. ಇದನ್ನೂ ಒಂದು ವೇಳೆ ಹೇಗಾದರೂ ಸಹಿಸಬಹುದು. ಆದರೆ ಈ ಹಕ್ಕಿಗಳು—ಈ ನಮ್ಮ ಗಿಳಿಗಳು, ಇವುಗಳು ಯವನರ ಅರಮನೆಯಲ್ಲಿ ಸೆರೆಯಾಗಿ, (ಪರಸಂಸ್ಕೃತಿಗೆ ಮನಸೋತು), ಪಾರಸೀ ಭಾಷೆಯನ್ನು ಓದುತ್ತಿರುವ ನೋಟವು ಮಾತ್ರ ಎದೆಗೆ ಬಲು ನೋವನ್ನು ಉಂಟು ಮಾಡುತ್ತಲಿದೆ!"*

ಈ ಮೇರೆಗೆ ಅಲ್ಪಾವಧಿಯಲ್ಲಿ ಮಹಾವಿಪತ್ತಿಗೆ ಗುರಿಯಾದ ದಕ್ಷಿಣ ಭಾರತದ ರಾಜ್ಯಗಳೆಲ್ಲ ಉರುಳಾಡಿದುವು. ಅವುಗಳಲ್ಲಿ ಆನೇಗುಂದಿಯಂತಹ ಚಿಕ್ಕ ರಾಜ್ಯಗಳಲ್ಲದೆ ಮೇಲೆ ಕಂಡಂತೆ ದೇವಗಿರಿ, ವರಂಗಲ, ಹೊಯ್ಸಳ, ಮದುರೆ, ಈ ನಾಲ್ಕು ದೊಡ್ಡ ರಾಜ್ಯಗಳೂ ಇದ್ದುವು. ಈ ರಾಜ್ಯಗಳ ಆಶ್ರಯದಿಂದ ಬಾಳಿದ ವಿಶಿಷ್ಟವಾದ ನಾಲ್ಕು ಜನಾಂಗಗಳು ಈ ರಾಜ್ಯಗಳೊಂದಿಗೆ ಗಂಡುಗೆಟ್ಟುವು. ಅವು ಯಾವುವೆಂದರೆ: ಅದೀಗ ಉತ್ತರದಲ್ಲಿ ತಲೆಯೆತ್ತುತ್ತಲಿದ್ದ ಮರಾಟರು, ಬಳಿಕ ಆಂಧ್ರರು, ಕನ್ನಡಿಗರು, ತಮಿಳರು. ಈ ಜನಾಂಗಗಳು ಈ ಮರ್ಮಾಘಾತದಿಂದ ಕೆಲಕಾಲ ಸ್ತಿಮಿತಸ್ಥಿತಿಯಲ್ಲಿ ವಿಶೇಷ ಚಲನವಲನವಿಲ್ಲದಂತೆ ಬಿದ್ದುಕೊಂಡುವು. ಅಷ್ಟರಲ್ಲಿ, ಇವುಗಳಲ್ಲಿ ಮೊದಲು ಮೂರ್ಛೆ ತಿಳಿದು ಚೇತರಿಸಿಕೊಂಡು ಎದ್ದು ನಿಂತುದು ಕನ್ನಡ ಜನಾಂಗವು. ಅದು ಹೇಗೆ ಎಂಬುದನ್ನು ಮುಂದಿನ 'ವಿಲಾಸ'ದಲ್ಲಿ ನಿರೀಕ್ಷಿಸುವ.

---

* ನ ತಥಾ ಕಟುಘೂತ್ಕೃತಾದ್ವ್ಯಥಾಮೇ
ಹೃದಿ ಜೀರ್ಣೋಪವನೇಷು ಘೂಕಲೋಕಾತ್
ಪರಿಶೀಲಿತಪಾರಸೀಕವಾಗ್ಭ್ಯೋ
ಯವನಾನಾಂ ಭವನೇ ಯಥಾ ಶುಕೇಭ್ಯಃ"

—ಮಧುರಾವಿಜಯಂ ೮, ೧೨.

## ಮೂರನೆಯ ವಿಲಾಸ

# ಸ್ವರಾಜ್ಯೋದಯ (೧೩೩೦-೧೩೩೬)

ಹದಿನಾಲ್ಕನೆಯ ಶತಮಾನದ ಆರಂಭದಲ್ಲಿ ಸ್ವರಾಜ್ಯ, ಸ್ವಧರ್ಮ, ಸ್ವಸಂಸ್ಕೃತಿ ಇವುಗಳು ಹಿಂದೆ ವಿವರಿಸಿದಂತೆ ಪರಕೀಯ ಆಕ್ರಮಣದ ಕರಾಲ ಲೀಲೆಗಳಿಗೆ ಈಡಾಗಿ, ಜನಾಂಗದಲ್ಲಿ ದೈನ್ಯ, ದಿಗ್ಭ್ರಾನ್ತಿ, ನಿರಾಶೆ ಇವುಗಳ ಸಾಮ್ರಾಜ್ಯವು ನೆಲೆಗೊಂಡಿತು. ದಕ್ಷಿಣಭಾರತದಲ್ಲಿ ಆ ಕಾಲಕ್ಕೆ ಎಷ್ಟೋ ರಾಜರಿದ್ದರು; ನೂರಾರು ನಾಯಕರು, ಸಾವಿರಾರು ವೀರಭಟರು, ಜೀವಿಸಿದ್ದರು. ಈ ದೈನ್ಯಾವಸ್ಥೆಯನ್ನು ದೂರಮಾಡುವ ಸಾಹಸವು ಇವರಲ್ಲಿ ಯಾರ ಹೃದಯದಲ್ಲಿಯೂ ಸಂಚರಿಸಲಿಲ್ಲವೆ ? ಈ ಪಾರತಂತ್ರ್ಯವನ್ನು ಪ್ರತಿಭಟಿಸುವ ಪರಾಕ್ರಮವು ಯಾರ ಬಾಹುಗಳ-ಲ್ಲಿಯೂ ಸ್ಫುರಿಸಲಿಲ್ಲವೆ ? ಇದ್ದರು; ಇಂತಹ ಕೆಲವು ವೀರಪುರುಷರು ದೇಶದಲ್ಲಿ ಇದ್ದರು.

ಭೀಷಣವಾದ ಈ ಪರಿಸ್ಥಿತಿಯಲ್ಲಿ ಕೆಲವು ವ್ಯಕ್ತಿಗಳು ಎದೆಗೆಡದೆ ಮರಳಿ ಸ್ವರಾಜ್ಯವನ್ನು ಸ್ಥಾಪಿಸಿ, ಸ್ವಶಕ್ತಿಯನ್ನು ಸಂವರ್ಧಿಸಿ, ಸ್ವಸಂ-ಸ್ಕೃತಿಯನ್ನು ಪುನರುಜ್ಜೀವನಗೊಳಿಸುವ ಕಾರ್ಯದಲ್ಲಿ ಅವಿಶ್ರಾಂತ-ವಾಗಿ ಹೆಣಗುತ್ತಿದ್ದುವು. ಇಂತಹ ವ್ಯಕ್ತಿಗಳ ಸಾಹಸಗಳಿಂದ ದೇವಗಿರಿ-ಯಲ್ಲಿಯಾಗಲಿ, ವರಂಗಲ್ಲಿನಲ್ಲಿಯಾಗಲಿ, ಮಧುರೆಯಲ್ಲಿಯೇ ಆಗಲಿ ಯಾವ ಸ್ವಾಭಿಮಾನದ ತೇಜವು, ಯಾವ ಸ್ವಾತಂತ್ರ್ಯದ ಜ್ಯೋತಿಯು ಪ್ರಕಟವಾಗಲಿಲ್ಲವೋ, ಆ ಸ್ವಾಭಿಮಾನದ ಕಿಚ್ಚು ಆ ಸ್ವಾತಂತ್ರ್ಯದ ಜ್ವಾಲೆಯು ದಕ್ಷಿಣಭಾರತದ ಹೃದಯದಂತಿದ್ದ ಕರ್ನಾಟಕದಲ್ಲಿ, ಹೊಯ್ಸಳ ರಾಜ್ಯದಲ್ಲಿ ಸಂದದೆ ಕುಂದದೆ ಹೊತ್ತುತ್ತ ಭುಗಿಲೆಂದು ಉರಿದೇಳಲಣಿಯಾಯಿತು.

ಹೀಗೆ ಈ ಕಗ್ಗತ್ತಲೆಯಲ್ಲಿ, ಈ ನಿರ್ವೀರ್ಯತೆಯಲ್ಲಿ ಸ್ವಾತಂತ್ರ್ಯದ ಮತ್ತು ಸ್ವರಾಜ್ಯದ ಜ್ಯೋತಿಯನ್ನು ಬೆಳಗಲಿರಿಸಿದ ಕರ್ನಾಟಕದ ಮಹಾಪುರುಷರಲ್ಲಿ ಮುಮ್ಮಡಿ ವೀರಬಲ್ಲಾಳನು ಮೊದಲಿಗನು. ಕಳೆ-ಗುಂದುತ್ತಲಿರುವ ಹೊಯ್ಸಳ ವಂಶಮಂದಿರದ ಕೊನೆಯ ದೇದೀಪ್ಯ-

ಮಾನವಾದ ದೀಪವಿದು. ಮಲಿಕ ಕಾಫರನ ಹೊಡೆತಕ್ಕೆ ಹೊಯ್ಸಳ ರಾಜ್ಯದ ರಾಜಧಾನಿಯಾದ ದೋರಸಮುದ್ರವು ಈತನ ಕೈಯಿಂದ ಜಾರಿಹೋಯಿತು (೧೩೧೦). ರಾಜಧಾನಿಯು ಹೋದರೂ ಈ ರಾಜನ ರಾಜಕಾರ್ಯವು ನಿಲ್ಲಲಿಲ್ಲ. ನಷ್ಟವಾದ ರಾಜ್ಯಶಕ್ತಿಯನ್ನು ಮತ್ತೆ ಸಂಪಾದಿಸಲು ಈತನು ಹಗಲಿರುಳು ಭಗೀರಥ ಪ್ರಯತ್ನಗಳನ್ನು ನಡೆಸಿ-ದನು. ಮುಂದೆ ಮೂವತ್ತು ಮೂವತ್ತೆರಡು ವರ್ಷಗಳ ವರೆಗೆ (೧೩೧೦—೪೨) ಈ ರಾಜನಿಗೆ ವಿರಾಮವೆಂಬುದು ಗೊತ್ತಿರಲಿಲ್ಲ. ಇಂದು ಒಂದು ಊರು, ನಾಳೆ ಇನ್ನೊಂದು ಊರು, ಹೀಗೆ ಈ ರಾಜನು ಬೇರೆ ಬೇರೆ ಬೀಡುಗಳಿಗೆ ಸಂಚರಿಸುತ್ತ ತನ್ನ ರಾಜ್ಯದಲ್ಲಿ ಸಂಘಟನೆಯನ್ನೂ ಜನಾಂಗದಲ್ಲಿ ಪ್ರತಿಕಾರ ಶಕ್ತಿಯನ್ನೂ ನಿರ್ಮಾಣ ಮಾಡಲು ಹೋರಾ-ಡಿದನು. ಇಷ್ಟರಲ್ಲಿ ದೋರಸಮುದ್ರರಾಜಧಾನಿಯು ಶತ್ರುಗಳಿಂದ ಸಂಪೂರ್ಣವಾಗಿ ಉಧ್ವಸ್ತಮಾಡಲ್ಪಟ್ಟಿತು (೧೩೨೭). ಇದರಿಂದ ಈ ರಾಜನ ಹೃದಯವು ಇನ್ನಿಷ್ಟು ಪ್ರಕ್ಷುಬ್ಧವಾಯಿತು. ಮುಂದಿನ ವರುಷ ಈ ರಾಜನು ತಿರುವಣ್ಣಾಮಲೆ (ದಕ್ಷಿಣ ಆರ್ಕಾಟ ಜಿಲ್ಲೆ) ನೆಲೆ-ವೀಡಿನಲ್ಲಿ ಬೀಡುಬಿಟ್ಟನು (೧೩೨೮).

ತುಂಗಭದ್ರೆಯ ದಕ್ಷಿಣ ಪ್ರದೇಶದಲ್ಲಿ ಹೀಗೆ ಹೋರಾಟವು ನಡೆ-ದಿರುವಾಗ ಉತ್ತರದಲ್ಲಿ ಇದ್ದಬಿದ್ದ ರಾಜ್ಯಗಳ ಮೇಲೆ ಹೆಚ್ಚುಹೆಚ್ಚು ಅನಾಹೂತಗಳು ಬಂದೊದವುತ್ತ ಜನತೆಯ ಶಕ್ತಿಗಳು ಸೂರೆ ಮಾಡಲ್ಪ-ಡುತ್ತಿದ್ದುವು. ಕೆಲಕಾಲ ಹಿಂದೆ ವರಂಗಲ ರಾಜ್ಯವು ಪೂರ್ಣವಾಗಿ ಪರಕೀಯರಿಗೆ ಅಧೀನವಾಗಿ (೧೯೨೩)[೧] ರಾಜಪುತ್ರನಾದ ಕೃಷ್ಣನಾಯ-ಕನು ದಿಕ್ಕುಗೆಟ್ಟು ಅಲೆದಾಡತೊಡಗಿದ್ದನು. ಸ್ವಲ್ಪ ದಿನಗಳ ಹಿಂದೆಯೇ ಆನೇಗುಂದಿ-ಕಂಪಲಿ[೨] ರಾಜ್ಯದ ಮೇಲೆ ಘೋರವಾದ ಅನರ್ಥವು ಒದ-ಗಿತು. ಮುಹಮ್ಮದ ತಘಲಖ ಬಾದಶಹನ ತಮ್ಮನ ಮಗನಾದ ಬಹಾವುದ್ದೀನನು ತನ್ನ ಕಕ್ಕನ ವಿರುದ್ಧವಾಗಿ ಬಂಡಾಯವನ್ನು ಹೂಡಿ,

೧. V. R. P. 6. ೨. ಇಬ್ನ ಬತೂತ, ಬಾರ್ನಿ, ಫಿರಿಷ್ತರು ಹೇಳುವ ಕಂಪಲಿಯ ವೃತ್ತಾಂತವೂ ನ್ಯೂನಿಝನು ಹೇಳುವ ಆನೇಗುಂದಿಯ ವೃತ್ತಾಂತವೂ ಈ ಒಂದೇ ರಾಜ್ಯಕ್ಕೆ ಸಂಬಂಧಪಟ್ಟವೆ ಎಂಬುದು ಸ್ಪಷ್ಟವಿದೆ.

ಸೋತು ಆನೇಗುಂದಿಯ ಕಂಪಿಲರಾಯನ ಆಶ್ರಯಕ್ಕೆ ಬಂದನು. ಆತನಿಗೆ ಆಶ್ರಯ ಕೊಟ್ಟುದಕ್ಕಾಗಿ ಕಂಪಿಲರಾಯನನ್ನು ದಂಡಿಸಲು ದಿಲ್ಲಿಯ ಸುಲ್ತಾನನ ಪ್ರಚಂಡವಾದ ಸೇನೆಯು ಬಂದು ಆನೇಗುಂದಿಗೆ ಮುತ್ತಿಗೆಯನ್ನು ಹಾಕಿತು. ಬಹಾವುದ್ದೀನನು ಸುರಕ್ಷಿತತೆಗಾಗಿ ಆನೇಗುಂದಿಯಿಂದ ಬಲ್ಲಾಳರಾಯನಲ್ಲಿಗೆ ಕಳುಹಲ್ಪಟ್ಟನು. ಕಂಪಿಲರಾಯನ ಮೇಲೆ ಸರ್ವನಾಶ ಪ್ರಸಂಗವು ಪ್ರಾಪ್ತವಾಯಿತು. ರಾಯನು ಅಂತಃಪುರ ವರ್ಗವನ್ನು ಮೊದಲು ಅಗ್ನಿನಾರಾಯಣನಿಗೆ ಬಲಿಯಾಗಿ ಕೊಟ್ಟು ಪ್ರಜ್ವಲಿತವಾದ ರಣಯಜ್ಞದಲ್ಲಿ ತನ್ನ ಪ್ರಾಣಸರ್ವಸ್ವದ ಆಹುತಿಯನ್ನು ಸಮರ್ಪಿಸಿದನು (೧೩೨೭).[೩] ಕಂಪಿಲರಾಯನ ಮಕ್ಕಳೂ ಕೆಲವು ಅಧಿಕಾರಿಗಳೂ ಸೆರೆಸಿಲುಕಿ ದಿಲ್ಲಿಗೆ ಒಯ್ಯಲ್ಪಟ್ಟರು. ಆನೇಗುಂದಿಯ ಪ್ರದೇಶಕ್ಕೆ ಮುಸಲ್ಮಾನ ಮೇಲಧಿಕಾರಿಯೊಬ್ಬನು ರಾಜಪ್ರತಿನಿಧಿಯಾಗಿ (ಮಲಿಕನಾಯಬ) ನಿಯುಕ್ತನಾದನು.

ಇಂತು ಎಲ್ಲೆಲ್ಲಿಯೂ ಪದಭ್ರಷ್ಟರಾದ ಜನನಾಯಕರಿಗೆ ಉತ್ತರದಲ್ಲಿ ನಿಲ್ಲಲಿಕ್ಕೆ ಎಡೆಯಿಲ್ಲದಾಯಿತು. ಉತ್ತರದಿಂದ ತಳ್ಳಲ್ಪಟ್ಟ ಈ ನಾಯಕರು ದಕ್ಷಿಣದಲ್ಲಿ ಹಿಂದುಗಳಿಗೆ ತಾನೊಬ್ಬನೆ ಒಬ್ಬನು ಆಧಾರವಾಗಿ ತೋರುತ್ತಿದ್ದ ಬಲ್ಲಾಳರಾಯನಲ್ಲಿಗೆ ಆಕರ್ಷಿತರಾದರು. ಈ ಸಮಯದಲ್ಲಿ ಬಲ್ಲಾಳರಾಯನು ತಿರುವಣ್ಣಮಲೆಯಲ್ಲಿ ನಿಂತು ವೈರಿಗಳನ್ನು ಪ್ರತಿಭಟಿಸುವುದಕ್ಕಾಗಿ ಜನಾಂಗದಲ್ಲಿ ಸಂಘಟನೆಯನ್ನು ಉಂಟು ಮಾಡುವ ಹಿರಿದಾದ ಸಂಕಲ್ಪವನ್ನು ಹೂಡಿದ್ದನು. ವರಂಗಲ್ಲ ಕೃಷ್ಣನಾಯಕನು ಈತನ ಈ ಉದ್ಯೋಗದಲ್ಲಿ ಭಾಗಿಯಾಗಲನುವಾದನು.[೪] ನಿರಾಧಾರವಾದ ದೇವಗಿರಿ ರಾಜ್ಯದ ಅನುಬಂಧಿಗಳೂ ಅವನನ್ನು ಸೇರಿದರು.[೫] ಸಮದುಃಖಿಗಳಾದ ಹಿಂದುಗಳು ಈ ರೀತಿಯಾಗಿ ಏಕತ್ರಿತರಾಗುತ್ತಿರಲು, ಬಲ್ಲಾಳರಾಯನು ಆಪ್ತಬಾಂಧವರದೊಂದು ಮಂತ್ರಾಲೋಚನಾಸಭೆಯನ್ನು ನೆರೆಸಿದನು (೧೩೨೯).[೬] ಈ ಸಭೆಯಲ್ಲಿ ರಾಯನ ಸಮರ್ಥಮಂಡಲೇಶ್ವರರೂ ಸಂಗಮಪುತ್ರರೂ ಆದ ಹರಿಹರ ಬಂಧುಗಳು ಪ್ರಮುಖ ಭಾಗವನ್ನು ವಹಿಸಿದ್ದರು. ಗಡಿಗಳ ಸಂರ-

೩. V.R.P. 93. ೪. Heras,p. 66. ೫. M. G. P. 1426. ೬. Heras,p.125.

ಕ್ಷಣೆ ಮತ್ತು ವೈರಿಯ ಉಚ್ಚಾಟನೆ ಈ ಎರಡು ವಿಷಯಗಳು ಈ ಅಧಿವೇಶನದಲ್ಲಿ ಮುಖ್ಯವಾಗಿ ನಿರ್ಧರಿಸಬೇಕಾಗಿದ್ದುವು.

ಈಗಾಗಲೆ ದೇಶದಲ್ಲಿ ಪರಶಕ್ತಿಯ ಬೇರುಗಳು ಎರಡೂ ಕಡೆಯಿಂದ ಬಲಿಯತೊಡಗಿದ್ದುವು. ತುಂಗಭದ್ರೆಯ ಉತ್ತರ ಪ್ರಾಂತದಲ್ಲಿ ದೇವಗಿರಿಯು ಮಹಮ್ಮದೀಯರ ಭದ್ರವಾದ ಕೇಂದ್ರಸ್ಥಳವಾದಂತೆ, ದಕ್ಷಿಣದ ಇನ್ನೊಂದು ತುದಿಯಲ್ಲಿ ಸ್ಥಾಪಿತವಾದ ಮದುರೆಯಲ್ಲಿ ಮಹಮ್ಮದೀಯ ರಾಜ್ಯದ ಸಾಮರ್ಥ್ಯವೂ ಬೆಳೆಯತೊಡಗಿತ್ತು. ಈ ಎರಡೂ ಬದಿಯಿಂದ ವೈರಿಗಳ ಬಲವು ವೃದ್ಧಿಂಗತವಾಗಿ ಅವರು ಪರಸ್ಪರ ಸಂಲಗ್ನವಾದರೆ,[2] ಹಿಂದುಗಳ ಏಳ್ಗೆಯ ಆಶೆಗೆ ತಿಲಾಂಜಲಿಯನ್ನೇ ಬಿಡುವ ಪ್ರಸಂಗವು ಬರುವುದು. ಆದ್ದರಿಂದ ನಡುನಾಡಿನಲ್ಲಿ ಬಲಿಷ್ಠವಾದ ಪ್ರಭುಶಕ್ತಿಯನ್ನು ನಿರ್ಮಾಣಮಾಡಿ,ಉತ್ತರ-ದಕ್ಷಿಣದ ಈ ಮಹಮ್ಮದೀಯ ರಾಜ್ಯಗಳಲ್ಲಿಯ ಸಂಬಂಧವನ್ನು ತಪ್ಪಿಸಿ, ಉತ್ತರದಲ್ಲಿಯ ಪ್ರಬಲವಾದ ಮಹಮ್ಮದೀಯ ಶಕ್ತಿಯನ್ನು ದಕ್ಷಿಣಕ್ಕೆ ಹೆಚ್ಚಾಗಿ ಹಬ್ಬಗೊಡದಂತೆ ತಡೆದು ನಿಲ್ಲಿಸುವುದು ದೇಶದ ಹಿತದ ದೃಷ್ಟಿಯಿಂದ ಇವರು ಮೊದಲು ಮಾಡಬೇಕಾದ ಪ್ರಧಾನ ಕರ್ತವ್ಯವಾಗಿದ್ದಿತು.

ಈ ಕಾರ್ಯವನ್ನು ನೆರವೇರಿಸಲು ಉಪಾಯಗಳು ಯೋಜಿಸಲಾದುವು. ಬಲಿಷ್ಠರಾದ ಕಾರ್ಯಕರ್ತರು ಬೇರೆ ಬೇರೆ ಭಾಗಗಳಲ್ಲಿ ಕಾರ್ಯಕ್ರಮಗಳನ್ನು ಹಂಚಿಕೊಂಡು ಹೆಚ್ಚಿನ ಹೋರಾಟವನ್ನು ನಡೆಸಬೇಕೆಂದು ನಿಶ್ಚಯಿಸಲಾಯಿತು. ದೂರದರ್ಶಿಯಾದ ಬಲ್ಲಾಳರಾಯನು ತಾನು ಪೂರ್ವಸೀಮೆಯಲ್ಲಿ ಆಯಕಟ್ಟಿನ ಗಡಿಯಾದ ತಿರುವಣ್ಣಾಮಲೆಯಲ್ಲಿ ಹೆಚ್ಚು ಕಾಲ ತಳವೂರಿ ಆ ಸ್ಥಳವನ್ನು ಭದ್ರಪಡಿಸಿದನು. ಅಲ್ಲಲ್ಲಿ ಬಲಿಷ್ಠರಾದ ತನ್ನ ಮಹಾಮಂಡಲೇಶ್ವರರನ್ನು ಸ್ಥಾಪಿಸಿದನು. ಉತ್ತರದ ಗಡಿಗಳನ್ನು ಸಂರಕ್ಷಿಸುತ್ತ ವೈರಿಗಳನ್ನು ಇದಿರಿಸುವ ಮಹತ್ತರವಾದ ಕಾರ್ಯಧುರೆಯನ್ನು ಸಂಗಮಕುಮಾರನಾದ ಮಹಾಮಂಡಲೇಶ್ವರ ಹರಿಹರನು ಹೊತ್ತುಕೊಂಡನು. ಈಶಾನ್ಯದ ಆಂಧ್ರ ನಾಡಿನಲ್ಲಿ ಇನ್ನೊಬ್ಬ ಸಂಗಮ ಕುಮಾರನಾದ ಕಂಪಣ್ಣನೂ ಪಶ್ಚಿಮದ

---

[2] Ibid p. 49.

ಮಲೆನಾಡಿನಲ್ಲಿ ಮತ್ತೊಬ್ಬ ಸಂಗಮಕುಮಾರನಾದ ಮಾರಪ್ಪನೂ ಮಹಾಮಂಡಲೇಶ್ವರರ ಅಧಿಕಾರಗಳನ್ನು ವಹಿಸಿದರು. ದೋರ-ಸಮುದ್ರದ ನಡುನಾಡಿನಲ್ಲಿ ಮಗದೊಬ್ಬ ಸಂಗಮಕುಮಾರನಾದ ಮಹಾಮಂಡಲೇಶ್ವರ ಬುಕ್ಕನು ಬಲ್ಲಾಳರಾಯನಿಗೆ ಸಹಾಯಕನಾಗಿ ನಿಂತನು.[೮] ಬಲ್ಲಾಳರಾಯನು ಎಲ್ಲ ಕಡೆಯಲ್ಲಿಯೂ ಸಂಚರಿಸುತ್ತ ಬಹುಜಾಗರೂಕತೆಯಿಂದ ಜನಾಂಗದಲ್ಲಿ ಸಂಘಟನೆಯನ್ನೂ ಸಾಮ-ರ್ಥ್ಯವನ್ನೂ ಸಂವರ್ಧನಗೊಳಿಸಿದನು.

ವೀರಪ್ರತಾಪನಾದ ಹರಿಹರನು ಹೊಯ್ಸಳ ರಾಜ್ಯದ ಉತ್ತರ ಸೀಮೆಯಲ್ಲಿ ಧುರೀಣನಾಗಿ ಕಾರ್ಯಭಾರವನ್ನು ಕೈಕೊಂಡಿರುವಾಗ ಆನೇಗುಂದಿಯ ಪ್ರದೇಶವು ಅಸಂತೋಷಾಗ್ನಿಯಿಂದ ಕುದಿಯುತ್ತ-ಲಿತ್ತು. ಆನೇಗುಂದಿಯ ರಾಜ್ಯವನ್ನು ಹಾಳುಮಾಡಿ ಅಲ್ಲಿ ನೇಮಿಸ-ಲಾದ ಮುಸಲ್ಮಾನ ಪ್ರತಿನಿಧಿಯ ಒಡೆತನವನ್ನು ಜನತೆಯು ಅಂಗೀಕರಿ-ಸಲಿಲ್ಲ. ಆತನ ಆಡಳಿತವು ಸಾಗದಂತೆಯೂ ಆತನ ಅಧಿಕಾರವು ನಿಷ್ಫಲವಾಗುವಂತೆಯೂ ಎಡೆಬಿಡದೆ ಪ್ರಯತ್ನಗಳು ನಡೆದುವು. ಜನ-ಕ್ಷೋಭೆಯಿಂದ ಸಂತ್ರಸ್ತನಾದ ಆ ಅಧಿಕಾರಿಯು ತನ್ನ ಗೋಳನ್ನು ದಿಲ್ಲೀಶ್ವರನಲ್ಲಿಗೆ ಕೂಗಿಟ್ಟನು. ಈ ಹಿಂದು ಪ್ರಜೆಗಳನ್ನು ಸಂತಯಿಸುವ ಉದ್ದೇಶದಿಂದ ದಿಲ್ಲಿಯ ಸುಲ್ತಾನನು ತನ್ನ ಸೆರೆಯಲ್ಲಿದ್ದ ಆನೇಗುಂದಿಯ ಅಧಿಕಾರಿಗಳನ್ನು ಬಿಡುಗಡೆ ಮಾಡಿ, ಅವರಲ್ಲಿ ಒಬ್ಬನನ್ನು ತನ್ನ ಮಾಂಡ-ಲಿಕ ಅರಸನಾಗಿ ನಿಯೋಜಿಸಿ ಆನೇಗುಂದಿಗೆ ಕಳುಹಿದನು. ದಿಲ್ಲಿಯಿಂದ ಬಂದ ಈ ಅಧಿಕಾರಿಯು ರಾಜನಿಷ್ಠನಾಗಿ ಉಳಿಯದೆ ಪ್ರಜಾಪಕ್ಷವನ್ನು ಪುರಸ್ಕರಿಸಿ ಅಲ್ಲಿಯ ಮುಹಮ್ಮದೀಯ ರಾಜ್ಯಕ್ಕೆ ವಿರೋಧಿಯಾದನು.

ಈ ಸಮಯದಲ್ಲಿ ಈ ಆನೇಗುಂದಿಯ ಪ್ರದೇಶದಲ್ಲಿಯೆ ಜನಾಂ-ಗದ ಬಲವನ್ನು ಸಂವರ್ಧನಗೊಳಿಸುತ್ತಿರುವ ಹರಿಹರನು ಈ ಗಲಭೆಯಲ್ಲಿ ಪ್ರಮುಖ ಭಾಗವನ್ನು ವಹಿಸಿ ಉತ್ತರದ ಈ ಪ್ರಾಂತದಲ್ಲಿ ಹಿಂದುಗಳ-ದೊಂದು ಪ್ರಬಲವಾದ ಕೇಂದ್ರಶಕ್ತಿಯನ್ನು ನಿರ್ಮಾಣಮಾಡಲು

---

[೮] Heras, p. 100.

ಹವಣಿಸಿದನು. ಬಲಿಷ್ಠನೂ ಮಹತ್ವಾಕಾಂಕ್ಷಿಯೂ ದೂರದರ್ಶಿಯೂ ಆದ ಆತನು ದಕ್ಷಿಣಭಾರತದ ಆಗಿನ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದನು. ವೀರಬಲ್ಲಾಳನನ್ನು ಮುಪ್ಪು ಆವರಿಸುತ್ತಲಿದೆ; ಆತನ ಹಿಂದೆ ಆತನ ವೀರಪರಂಪರೆಯನ್ನು ಎತ್ತಿ ನಡೆಸುವ ಸಾಮರ್ಥ್ಯವು ಆತನ ದಾಯಾದಿಗಳಲ್ಲಿ ತೋರಲೊಲ್ಲದು. ಇನ್ನು ಅಲ್ಪಾವಧಿಯಲ್ಲಿ ಹಣ್ಣಾದ ಹೊಯ್ಸಳ ಅರಸೊತ್ತಿಗೆಯು ಕಳಚಿ ಹೋಗತಕ್ಕದು. ಮುಂದೆ ಹಿಂದುಗಳಿಗೆ ಗತಿಯಾರು ? ಜೀರ್ಣವಾದ ಈ ಹೊಯ್ಸಳ ಸಾಮ್ರಾಜ್ಯದ ಪರಂಪರೆಯನ್ನು ಮುಂದುವರಿಸಿ, ಹಿಂದು ಸ್ವರಾಜ್ಯವನ್ನು ಸ್ಥಿರಗೊಳಿಸಿ, ಹಿಂದು ಸಂಸ್ಕೃತಿಯನ್ನು ಸಂರಕ್ಷಿಸುವ ಭಾರವನ್ನು ಹೊರಲು ಯಾರು ಸಮರ್ಥರಿರುವರು ? ದೇಶದ ನಾಲ್ಕೂ ದಿಕ್ಕುಗಳಲ್ಲಿ ಬಲವಾಗಿ ನಿಂತುಕೊಂಡು ಹೊಯ್ಸಳ ಸಾಮ್ರಾಜ್ಯಕ್ಕೂ ಹಿಂದು ಸಂಸ್ಕೃತಿಗೂ ಆಧಾರಸ್ತಂಭರಾದ ವೀರಸಂಗಮಪುತ್ರರೇ ಈ ಮಹಾಕಾರ್ಯವನ್ನು ಸಾಧಿಸಬಲ್ಲರಲ್ಲವೆ ? ಈ ರೀತಿಯಾಗಿ ಆಲೋಚಿಸಿದ ಹರಿಹರನು ತನ್ನ ಬಂಧುಗಳ ಸಮ್ಮತಿಯಿಂದ ಸ್ವರಾಜ್ಯ ಸ್ಥಾಪನೆಯ ಉಪಕ್ರಮವನ್ನು ಹೂಡಿದನು.

ಈ ಕಾಲದಲ್ಲಿ ಆನೇಗುಂದಿಯ ಪ್ರದೇಶವು ಹಲವು ಬಗೆಯಿಂದ ಮಹತ್ವವುಳ್ಳುದಾಗಿತ್ತು. ನಡುನಾಡಿನಲ್ಲಿ ನೆಲೆಸಿ ದುರ್ಭೇದ್ಯವಾದ ಗಿರಿರಾಜಿಯಿಂದ ಪರಿವೇಷ್ಟಿತವಾದ ಆನೇಗುಂದಿಯ ದುರ್ಗವು ಉತ್ತರದ ರಾಜಕೀಯ ತಂತ್ರದಲ್ಲಿ ಆಯಕಟ್ಟಿನ ಸ್ಥಳವಾಗಿದ್ದಿತು. ಉತ್ತರದಿಂದ ಬರುವ ಮುಹಮ್ಮದೀಯರ ಆಕ್ರಮಣವನ್ನು ತಡೆಯಲು ಅದು ಬಹು ಅನುಕೂಲವುಳ್ಳ ಕೇಂದ್ರವಾಗಿದ್ದಿತು. ಈ ಸ್ಥಳದ ಮಹತ್ವವನ್ನು ಅರಿತ ಮುಹಮ್ಮದೀಯರು ಹಿಂದೆ ಹೇಳಿದಂತೆ ಇದನ್ನು ಸ್ವಾಧೀನಪಡಿಸಿಕೊಳ್ಳಲು ಎರಡು ಬಾರಿ ಹೆಣಗಾಡಿದ್ದರು. ಮುಹಮ್ಮದೀಯರ ಉಪಟಳವನ್ನು ಮೊದಮೊದಲು ಪ್ರತಿಭಟಿಸಲು ವೀರಬಲ್ಲಾಳನು ಭದ್ರಪಡಿಸಿದ ಗಡಿಗಳಲ್ಲಿ ಇದು ಪ್ರಧಾನವಾಗಿದ್ದಿತು.[೯] ಬರಿಯ ರಾಜಕೀಯ

೯. F. B. I, p. 427.

ಕ್ಷೇತ್ರವೆಂಬ ವಿಚಾರದಿಂದಷ್ಟೇ ಅಲ್ಲ, ಧಾರ್ಮಿಕ ದೃಷ್ಟಿಯಿಂದಲೂ ಈ ಪ್ರದೇಶವು ಪವಿತ್ರಸ್ಥಳವಾಗಿದ್ದಿತು. ಆನೇಗುಂದಿಯ ನೆರೆಯಲ್ಲಿ ತುಂಗಭದ್ರೆಯ ತೆಂಕಣ ತಡಿಯಲ್ಲಿ ಪುರಾಣಕಾಲದ ಸನ್ನಿವೇಶಗಳಿಂದ ಸಂಸ್ಮರಣೀಯವಾದ ಹಂಪೆ (ಪಂಪಾಕ್ಷೇತ್ರ) ಎಂಬ ಗ್ರಾಮವೂ ಕೆಲ-ಕಾಲ ಪೂರ್ವದಿಂದ ಅಲ್ಲಿ ಸ್ಥಾಪಿತವಾಗಿದ್ದ ಶ್ರೀ ವಿರೂಪಾಕ್ಷನ ದೇವಾ-ಲಯವೂ[೧೦] ಜನತೆಯ ವಿಶೇಷವಾದ ಆದರಕ್ಕೆ ಪಾತ್ರವಾಗಿದ್ದುವು.

ಇಂತಹ ಈ ಆನೇಗುಂದಿಯ ಸೀಮೆಯಲ್ಲಿ ಹಿಂದು–ಮುಹಮ್ಮದೀ-ಯರ ನಡುವೆ ಕಡುತರವಾದ ಕಾದಾಟವು ನಡೆದಿರಲು, ರಾಜಕಾರ್ಯ ಚತುರನಾದ ಹರಿಹರನ ದೃಷ್ಟಿಯು ಅತ್ತ ಆಕರ್ಷಿತವಾಯಿತು. ಆತನು ಅಲ್ಲಿ ಹಿಂದು ಅರಸೊತ್ತಿಗೆಯು ಅಳಿದುದನ್ನು ನೋಡಿದನು; ತಮ್ಮ ಅಧಿಕಾರವನ್ನು ಸ್ಥಾಪಿಸಲು ಮುಹಮ್ಮದೀಯರು ನಡೆಸಿದ ನಿಷ್ಫಲವಾದ ಸಾಹಸವನ್ನು ನಿರೀಕ್ಷಿಸಿದನು; ಹಿಂದು ಜನಾಂಗದಲ್ಲಿ ಉಂಟಾದ ಪ್ರಚಂಡವಾದ ಜಾಗೃತಿಯನ್ನೂ ಹಿಂದುಜನತೆಯಲ್ಲಿ ಹೊರಹೊಮ್ಮುವ ಪ್ರಬಲವಾದ ಪ್ರತಿಕಾರ ಶಕ್ತಿಯನ್ನೂ ಅವಲೋಕಿಸಿದನು. ತಾನು ಕನ-ಸಿನಲ್ಲಿ ಕಂಡು ಮನಸಿನಲ್ಲಿ ನೆನೆದ ಭಾರತೀಯ ಸ್ವರಾಜ್ಯದ ಬೀಜಾರೋ-ಪಣವನ್ನು ಮಾಡಲು ಈ ಸುಸಂಧಿಯು ಅನಾಯಾಸವಾಗಿ ಒದವಿಬಂದಿದೆ ಎಂದು ಬಗೆದನು. ಈ ರೀತಿಯಾಗಿ ನಿರ್ಧಾರಗೊಂಡ ಹರಿಹರನು ಆನೇ-ಗುಂದಿಯ ಕೋಟೆಯಿಂದಲೂ ತುಂಗಭದ್ರೆಯ ಅಗಳ್ತದಿಂದಲೂ ಸುರ-ಕ್ಷಿತವಾದ ತುಂಗಭದ್ರೆಯ ದಕ್ಷಿಣ ಪ್ರದೇಶದಲ್ಲಿ ತಾನು ಸಂಕಲ್ಪಿಸಿದ ಸ್ವರಾಜ್ಯದ ಪ್ರಾಣಪ್ರತಿಷ್ಠೆಯನ್ನು ಮಾಡಿ ವಿಜಯನಗರ ಸಾಮ್ರಾಜ್ಯದ ವಿಜಯಧ್ವಜವನ್ನು ಊರಿದನು!

ಹರಿಹರನ ಈ ಸ್ವರಾಜ್ಯೋದ್ಯಮಕ್ಕೆ ಶೃಂಗೇರಿಯ ಶ್ರೀಶಂಕರಾ-ಚಾರ್ಯ ಪೀಠದ ಗುರುಗಳಾದ ಶ್ರೀ ವಿದ್ಯಾರಣ್ಯರು ಪ್ರೇರಕರೂ ಮುಖ್ಯ ಸಾಹಾಯ್ಯಕರ್ತರೂ ಆಗಿದ್ದರು ಎಂದು ನಂಬುಗೆಯಿದೆ. ಹರಿ-ಹರ ಬಾಂಧವರು ಮತ್ತು ಶೃಂಗೇರಿಯ ಪೀಠವು ಇವುಗಳಲ್ಲಿ ಯಾವ

೧೦. Heras, p 52.

ಬಗೆಯ ಸಂಬಂಧವಿದ್ದಿತು, ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಲ್ಲಿ ವಿದ್ಯಾರಣ್ಯರ ಸ್ಥಾನವೇನು, ಎಂಬ ಪ್ರಮೇಯಗಳು ಇವುಗಳಿಗೆ ಯೋಗ್ಯ ಸ್ಥಳವಾದ ಮುಂದಿನ 'ವಿಲಾಸ'ದ ಕಡೆಯ ಭಾಗದಲ್ಲಿ ವಿಶದ-ವಾಗಿ ಚರ್ಚಿಸಲ್ಪಡುವುವು.

**ಈ ಘಟನೆಯು ಪರಂಪರಾಗತ ಐತಿಹ್ಯದಂತೆ ಶಾಲಿವಾಹನ ಶಕ ೧೨೫೮, ಧಾತೃ ಸಂವತ್ಸರ, ವೈಶಾಖ ಶುದ್ಧ ಸಪ್ತಮಿ ಎಂದರೆ ಕ್ರಿ. ವ. ೧೩೩೬ರಲ್ಲಿ ಸಂಭವಿಸಿತು.**

ಹರಿಹರನು ತನ್ನ ಈ ಹೊಸ ರಾಜ್ಯಕ್ಕೆ ರಾಜಧಾನಿಯಾಗಿ ಹಂಪೆಯ ಪ್ರದೇಶದಲ್ಲಿ ನೆಲೆಗೊಂಡಿದ್ದ ಹೊಸಪಟ್ಟಣವೆಂಬ ಊರನ್ನು ಆರಿಸಿ-ಕೊಂಡನು.[೧೧] ಇಂತು ಎಲ್ಲ ರೀತಿಯಿಂದ ಪರಿಸ್ಥಿತಿಯು ಅನುಕೂಲ-ವಿರದಿದ್ದರೂ ಮುಂದಣ ಅಭ್ಯುದಯದ ನಿಶ್ಚಿತವಾದ ಸುಚಿಹ್ನಗಳಿಂದ ಪ್ರಕಾಶಿತವಾದ ಈ ಉಷಃಕಾಲದಲ್ಲಿ ಹರಿಹರನು ನವ ರಾಜ್ಯಸ್ಥಾಪನೆಯ ಅಲ್ಪಾರಂಭವನ್ನು ಮಾಡಿದನು. ಸಂಗಮಪುತ್ರರು ಕಟ್ಟಲಿರುವ ವಿಜಯ-ನಗರ ಸಾಮ್ರಾಜ್ಯಮಂದಿರದ ಪ್ರಥಮ ಸೋಪಾನವಿದು.[೧೨]

---

## ನಾಲ್ಕನೆಯ ವಿಲಾಸ

# ಸಾಮ್ರಾಜ್ಯ ಸಂಸ್ಥಾಪನೆ (೧೩೩೬–೧೩೪೬)

ನವರಾಜ್ಯಸ್ಥಾಪನೆಯ ಸಂಕಲ್ಪವು ಅಂಕುರಿಸಿತು. ಭಾರ-ತೀಯ ಸಂಸ್ಕೃತಿಯ ಪುನರುತ್ಥಾನದ ಧ್ವಜವು ಮೇಲಕ್ಕೇರಿತು. ಹರಿಹರನು ತನ್ನ ಮನೋರಥಸಿದ್ಧಿಯ ಪಥವನ್ನು ಆಕ್ರಮಿಸತೊಡಗಿ-ದನು. ಆದರೆ ಆತನ ಮಾರ್ಗವು ಇನ್ನೂ ಎಡರುಗಳಿಂದ ತುಂಬಿತ್ತು. ದೇಶದಲ್ಲಿ ಪರಕೀಯ ಆಕ್ರಮಣದ ವಿರುದ್ಧವಾಗಿ ಜಾಗೃತಿಯುಂಟಾಗಿ

---

೧೧. ದೀ. ಟಿ. ೨. ೧೨. ದ. ಟಿ. ೩.

ಪ್ರತಿಕಾರಶಕ್ತಿಯು ಬೆಂಕೆಯು ಉರಿದೇಳತೊಡಗಿದ್ದರೂ ಜನಾಂಗದಲ್ಲಿ ಇನ್ನೂ ಸಾಕಷ್ಟು ಸಂಘಟನೆಯುಂಟಾಗಿದ್ದಿಲ್ಲ. ಈ ಜನಜಾಗೃತಿ-ಯನ್ನು ಹೆಚ್ಚಾಗಿ ತನ್ನೆಡೆಗೆ ಒಲಿಸಿಕೊಳ್ಳುವುದು ಹರಿಹರನು ಮುಂದೆ ಸಾಧಿಸಬೇಕಾದ ಪ್ರಮುಖ ಕರ್ತವ್ಯವಾಗಿದ್ದಿತು. ತನ್ನ ಬಂಧುಗಳು ಅಲ್ಲಲ್ಲಿ ಮಹಾಮಂಡಲೇಶ್ವರರಾಗಿ ಸಂವರ್ಧನಗೊಳಿಸುತ್ತಿರುವ ಜನಾಂ-ಗದ ಶಕ್ತಿಗಳನ್ನು ಒಂದುಗೂಡಿಸಿ ತನ್ನ ಕಾರ್ಯಕ್ಕೆ ಅನುಕೂಲಿಸಿಕೊಳ್ಳ-ಬೇಕಾಗಿದ್ದಿತು. ಅಲ್ಲದೆ ತನ್ನ ಈ ಸ್ವರಾಜ್ಯದ ಮಹತ್ವಾಕಾಂಕ್ಷೆಯು ಒಡೆಯನಾದ ಬಲ್ಲಾಳರಾಯನ ಧ್ಯೇಯಕ್ಕೆ ಯಾವ ವಿಧದಿಂದಲೂ ವಿರೋಧಿಯಾಗದೆ, ಪೋಷಕವೇ ಆಗಿದೆ ಎಂಬುದನ್ನು ಜನರಿಗೆ ಮನ-ಗಾಣಿಸಬೇಕಾಗಿದ್ದಿತು. ಇವೆಲ್ಲಕ್ಕೂ ಹಿರಿದಾಗಿ ಸ್ವರಾಜ್ಯದ ಮತ್ತು ಸ್ವಸಂಸ್ಕೃತಿಯ ಮಾರ್ಗದಲ್ಲಿ ವಿಘ್ನವಾಗಿ ನಿಂತ ವೈರಿಗಳನ್ನು ದೇಶ-ದಿಂದ ಬಡಿದಟ್ಟಿ ರಾಷ್ಟ್ರವನ್ನು ನಿಷ್ಕಂಟಕವಾಗಿ ಮಾಡಬೇಕಾಗಿದ್ದಿತು. ಈ ಕಾರ್ಯಗಳ ಸಾಧನೆಯಲ್ಲಿ ಹರಿಹರನು ಮುಂದಿನ ಹತ್ತು ವರ್ಷಗಳ ವರೆಗೆ ಅತಿದಕ್ಷತೆಯಿಂದ ತೊಡಗಿಕೊಂಡನು.

ಈ ಹತ್ತು ವರ್ಷಗಳಲ್ಲಿ (೧೩೩೬-೧೩೪೬) ಹರಿಹರನ ಚಟವಟಿಕೆ-ಗಳು ಬಹುವೇಗದಿಂದ ಸಾಗಿದುವು. ಈ ಹತ್ತು ವರ್ಷಗಳಲ್ಲಿ ಹರಿ-ಹರನು ಮಹಾಸಾಹಸವನ್ನು ನೀಡಿ, ಅಪ್ರತಿಹತವಾದ ಹೋರಾಟ-ಗಳನ್ನು ಹೂಡಿ, ಹಿಂದು ಜನಾಂಗದಲ್ಲಿ ಪ್ರಚಂಡವಾದ ಸಂಘಶಕ್ತಿ-ಯನ್ನು ನಿರ್ಮಾಣಮಾಡಿ, ವೈರಿಗಳನ್ನು ಪೂರ್ಣವಾಗಿ ಪರಾಭವ-ಗೊಳಿಸಿದನು. ಉತ್ತರದ ಸೀಮೆಗಳಲ್ಲಿ ಶತ್ರುಗಳ ಆಘಾತಗಳನ್ನು ಇದಿರಿಸುತ್ತ, ಹಿಂದುಗಳಲ್ಲಿ ಸಂಘಟನೆಯನ್ನು ಬೆಳೆಸುತ್ತ ಪೂರ್ವಸಮು-ದ್ರದಿಂದ ಪಶ್ಚಿಮ ಸಮುದ್ರದ ವರೆಗಿನ ಪ್ರದೇಶವನ್ನು ಸ್ವಾಧೀನಪಡಿಸಿ-ಕೊಂಡು ಹಿಂದು ಶಕ್ತಿಯ ಅಭೇದ್ಯವಾದ ಒಂದು ಕೋಟೆಯನ್ನು ನಿಲ್ಲಿ-ಸಿದನು. ಅಲ್ಲದೆ ಆತನು ದಕ್ಷಿಣದಲ್ಲಿಯೂ ತನ್ನ ಪ್ರಭಾವವನ್ನು ಹಬ್ಬಿ-ಸಿದನು. ಕೆಳಗೆ ಕಾಣಿಸಿದ ಕೆಲವು ಮಹತ್ವದ ಘಟನೆಗಳಿಂದ ಹರಿಹರನ ಸ್ವರಾಜ್ಯಸ್ಥಾಪನೆಯ ಉದ್ಯೋಗವು ದಿನದಿನಕ್ಕೆ ಹೇಗೆ ಉತ್ಕರ್ಷವನ್ನು ಪಡೆಯಿತು, ಎಂಬುದು ಸ್ಫುಟವಾಗುವುದು.

೧೩೩೬: ಹರಿಹರನು ಬಾರಕೂರಲ್ಲಿ (ಪಶ್ಚಿಮ ಪ್ರದೇಶ) ಕೋಟೆ-ಯನ್ನು ಕಟ್ಟಿಸಿದನು.[೧]

೧೩೩೯—೪೦: ಹರಿಹರನು ಕರ್ನೂಲಪ್ರಾಂತದಲ್ಲಿ (ಪೂರ್ವ ಪ್ರದೇಶ) ಆಳುತ್ತಿದ್ದನು.[೨]

೧೩೪೦: ಹರಿಹರನು ಬಾದಾಮೀ ಪ್ರದೇಶದಲ್ಲಿ ತನ್ನ ಬಲವನ್ನು ಸ್ಥಾಪಿಸಿ, ಬಾದಾಮೀ ಕೋಟೆಯನ್ನು ಕಟ್ಟಿಸಿದನು. **'ಅರಿರಾಯ-ವಿಭಾಡ, ಭಾಷೆಗೆ-ತಪ್ಪುವ-ರಾಯರ-ಗಂಡ, ಪೂರ್ವ-ಪಶ್ಚಿಮ ಸಮುದ್ರಾಧಿಪತಿ'** ಎಂಬ ತನ್ನ ಬಿರುದುಗಳನ್ನು ಮೆರೆಸುವನು.[೩]

೧೩೪೦: ಇದೇ ವರ್ಷ ಹರಿಹರನು ತನ್ನ ಸ್ವಾತಂತ್ರ್ಯಾಭಿಲಾಷೆ-ಯನ್ನು ಸೂಚಿಸುತ್ತ, ಒಡೆಯನಾದ ಬಲ್ಲಾಳರಾಯನ ಹೆಸರನ್ನು ಮರೆ ಮಾಡಿ **'ಚತುಃಸಮುದ್ರಾಧಿಪತಿ'** ಎಂಬ ಗೌರವದ ಬಿರುದನ್ನು ಧರಿಸಿದನು.[೪]

೧೩೪೨: ಹರಿಹರನ ಒಡೆತನವನ್ನು ಹೊಸಾವರದ ಮುಸಲ್ಮಾನ ಸುಬೇದಾರನು ಒಪ್ಪಿಕೊಂಡನು.[೫]

೧೩೪೩: **'ಮಹಾರಾಜಾಧಿರಾಜ – ರಾಜಪರಮೇಶ್ವರ – ವೀರಪ್ರತಾಪ-ಹರಿಹರ ಮಹಾರಾಯ'** ಎಂಬ ಪೂರ್ಣ ಸ್ವಾತಂತ್ರ್ಯ ಸೂಚಕವಾದ ಸಮ್ರಾಜನ ಬಿರುದುಗಳನ್ನು ಧರಿಸಿದನು.[೬]

ಈ ಏಳು ವರ್ಷಗಳಲ್ಲಿ (೧೩೩೬—೪೩) ಹರಿಹರನ ಸ್ವರಾಜ್ಯ ಸ್ಥಾಪನೆಯ ಕಾರ್ಯವು ಬಹ್ವಂಶದಿಂದ ನೆರವೇರಿತು. ಈ ಏಳು ವರ್ಷ-ಗಳಲ್ಲಿ ಹಿಂದುಗಳ ಸಂಘಟನೆಯು ದಿನಕ್ಕೊಂದು ಪರಿಯಿಂದ ವೃದ್ಧಿಂಗತ-ವಾಗಿ ವಿರಾಟ ಸ್ವರೂಪವನ್ನು ತಳೆದಿತು. ಈ ಏಳು ವರ್ಷಗಳಲ್ಲಿ ಕಾರ್ಯೋನ್ಮುಖವಾದ ಹಿಂದು ಶಕ್ತಿಗಳು ಬೇರೆ ಬೇರೆ ಕಡೆಯಲ್ಲಿ ಬಲ-ವನ್ನು ಪಡೆಯುತ್ತ ಹರಿಹರನ ಸ್ವರಾಜ್ಯಸ್ಥಾಪನೆಯ ಕಾರ್ಯಕ್ಕೆ ಪೋಷಕವಾದುವು. ಈಶಾನ್ಯದ ಆಂಧ್ರ ಗಡಿಯಲ್ಲಿ ಕಂಪಣ್ಣನ ಅಧಿ-

---

೧. S. K. M. I, P. 55. ೨. V. R. P. 94. ೩. Ibid. ೪. E C. IX, Nelamangala 19. ೫. Heras, p 68. ೬. E. C. V, Arasikere 159.

ಕಾರವು ಸ್ಥಿರವಾಗಿ, ಆ ನಾಡು ಉದಯವಾಗುತ್ತಿರುವ ವಿಜಯನಗರ ಸಾಮ್ರಾಜ್ಯಕ್ಕೆ ಒಳಪಟ್ಟಿತು. ಅತ್ತ ಪಶ್ಚಿಮದ ಗಡಿಯಲ್ಲಿ ಮಾರಪ್ಪನು ಸಾಗರದವರೆಗಿನ ಮಲೆನಾಡನ್ನು ಗೆದ್ದುಕೊಂಡು ವಿಜಯನಗರ ಸಾಮ್ರಾಜ್ಯದ ಪ್ರಭಾವವನ್ನು ಪಸರಿಸಿದನು.[೭] ನಡುನಾಡಿನಲ್ಲಿ ಭೀಮ ಪರಾಕ್ರಮಿಯಾದ ಬುಕ್ಕರಾಯನು ಹರಿಹರರಾಯನಿಗೂ ಬಲ್ಲಾಳರಾಯನಿಗೂ ಸಹಾಯಕನಾಗಿ ಹೊಯ್ಸಳ ರಾಜ್ಯದ ಮೂಲಸ್ಥಾನವನ್ನು ಬಲಪಡಿಸುತ್ತ ದಕ್ಷಿಣದಲ್ಲಿ ಸ್ವರಾಜ್ಯದ ಸಾಹಸವನ್ನು ಮುಂದುವರಿಸಿದನು. ಮುಪ್ಪಿನಿಂದ ಬಲಗುಂದುತ್ತಿರುವ ಬಲ್ಲಾಳರಾಯನು ಈ ಮೇರೆಗೆ ತನ್ನ ಜನಾಂಗದಲ್ಲಿ ರಾಜಕೀಯ ಶಕ್ತಿಯು ಬೆಳೆಯುತ್ತಿರುವುದನ್ನು ನೋಡಿ ಅಭಿನಂದಿಸದೆ ಇರಲಿಲ್ಲ. ನಾಯಕರ ಈ ಸಾಹಸಗಳಿಂದ ಹುರಿದುಂಬಿದ ರಾಷ್ಟ್ರದಲ್ಲಿ ಎತ್ತ ನೋಡಿದತ್ತ ಚೈತನ್ಯವು ಸ್ಫುರಿಸಿತು. ಯಾದವರ, ಹೊಯ್ಸಳರ, ಸಂಗಮರ, ತೆಲುಗರ ಶಕ್ತಿಗಳು ಏಕತ್ರಿತವಾಗಿ ವೈರಿಗಳನ್ನು ದೇಶದಿಂದ ಹೊಡೆದೋಡಿಸುವ ಒಂದೇ ಒಂದು ಮಹಾಕಾರ್ಯಕ್ಕೆ ಉದ್ಯುಕ್ತವಾದುವು. ಅರಿಗಳು ಸರಿಯುತ್ತ ಸರಿಯುತ್ತ ಕೃಷ್ಣೆಯ ಆಚೆಗೆ ನೂಕಲ್ಪಟ್ಟರು.[೮] ಭಾರತೀಯರ ಸಂಘಶಕ್ತಿಯು ಜಯಶಾಲಿಯಾಯಿತು.

ಆದರೆ ದಕ್ಷಿಣದಲ್ಲಿ ಇನ್ನೂ ಒಂದು ಕಾರ್ಯವು ಆಗಬೇಕಾಗಿದ್ದಿತು. ಮದುರೆಯ ರಾಜ್ಯದಲ್ಲಿ ಬೀಡುಬಿಟ್ಟಿದ್ದ ವೈರಿಗಳು ಇದುವರೆಗೆ ಸುರಕ್ಷಿತವಾಗಿಯೇ ಉಳಿದುಕೊಂಡಿದ್ದರು. ಅವರನ್ನು ಅಲ್ಲಿಂದ ಬಡಿದಟ್ಟಿ ರಾಷ್ಟ್ರವನ್ನು ಪೂರ್ಣ ನಿರ್ಭಯವಾಗಿ ಮಾಡುವುದು, ಬಲ್ಲಾಳರಾಯನೂ ಇತರನಾಯಕರೂ ಬಹುಕಾಲ ಹಿಂದೆ ಆಲೋಚಿಸಿದ ಪ್ರಧಾನ ಕಾರ್ಯಗಳಲ್ಲಿ ಒಂದಾಗಿತ್ತು. ಇದನ್ನು ನೆರವೇರಿಸಲು ಬಲ್ಲಾಳರಾಯನು ತಾನೆ ಹಾತೊರೆದನು. ಆತನು ಮದುರೆಯ ಮೇಲೆ ದಂಡಯಾತ್ರೆಯನ್ನು ಹೂಡಿ ಅರಿಗಳೊಡನೆ ಹೋರಾಟವನ್ನು ಆರಂಭಿಸಿದನು (೧೩೪೨). ಆದರೆ ದುರ್ದೈವದಿಂದ ಆತನಿಗೆ ವಿಜಯವು ಪ್ರಾಪ್ತ-

---

೭. Heras, p. 100. ೮. M. G. P. 1457.

ವಾಗಲಿಲ್ಲ. ಆ ಮಹಾ ರಾಜಯೋಗಿಯು ಮದುರೆಯ ಕಾಳಗದಲ್ಲಿ ಮಡಿದನು ![೯] ಕರ್ನಾಟಕದ ಮಹನೀಯವಾದ ವಿಭೂತಿಯು, ಹೊಯ್ಸ-ಳರ ಕೊನೆಯ ಸ್ವಾತಂತ್ರ್ಯಜ್ಯೋತಿಯು ಅಸ್ತಂಗತವಾಯಿತು. ದಕ್ಷಿಣಭಾರತದ ಕಾಳರಾತ್ರಿಯ ಭೀಷಣತೆಯನ್ನು ಹಿಂಗಿಸಿ ಭಾರತೀಯ ಜನಾಂಗದ ಉದಯಕಾಲದ ಆಶೆಯ ಪ್ರಕಾಶವನ್ನು ಬೀರಿದ ಅರುಣನು ಮಾಯವಾದನು ! ವಿಜಯನಗರಸಾಮ್ರಾಜ್ಯರವಿಯು ಮುಂದಕ್ಕೆ ಸರಿದನು. ಹರಿಹರನು ಮರುವರುಷದಿಂದ ಅಧಿಕವಾದ ಪ್ರಭೆಯಿಂದ ಸಮ್ರಾಜನೆಂದು ವಿರಾಜಮಾನನಾದನು (೧೩೪೩).[೧೦]

ಮಹಾಸಾಗರದಂತೆ ಉತ್ತರಕ್ಕೆ ಉಕ್ಕುಕ್ಕಿ ಏರಿಬರುವ ಭಾರತೀ-ಯರ ಶಕ್ತಿಗಳನ್ನು ಶತ್ರುಗಳು ತಡೆಯುದಾದರು. ಮೂವತ್ತು ನಾಲ್ವತ್ತು ವರ್ಷಗಳ ಹಿಂದೆ ದಕ್ಷಿಣಭಾರತದ ಇತಿಹಾಸ ಪ್ರಪಂಚದ ತೆರೆಯ ಮೇಲೆ ಮೂಡಿದ, ಭಾರತೀಯರು ಮತ್ತು ಮಹಮ್ಮದೀಯರು ಇವರ ಸಡು-ವಿನ ಜಯಪರಾಜಯಗಳ ಚಿತ್ರಪಟವು ತಿರುವು ಮುರುವಾದ ಸೋಜಿ-ಗದ ನೋಟವು ಕಣ್ಗೊಳಿಸತೊಡಗಿತು. ಆಗ ಉತ್ತರದಿಂದ ದಕ್ಷಿಣಕ್ಕೆ ಒಂದೊಂದು ಭಾರತೀಯರ ರಾಜ್ಯಗಳು, ಒಂದರ ಹಿಂದೊಂದು ರಾಷ್ಟ್ರದ ಗಡಿಗಳು ಪರಕೀಯರಿಂದ ಪಾದಾಕ್ರಾಂತವಾಗಿ ಹೋಗಿದ್ದುವು. ಅದೇ ಈಗ, ದಕ್ಷಿಣದಿಂದ ಉತ್ತರಕ್ಕೆ ಒಂದೊಂದು ಮಹಮ್ಮದೀಯರ ಪ್ರಾಂತಗಳು, ಒಂದರ ಹಿಂದೊಂದು ಮಹಮ್ಮದೀಯರಿಗೆ ಕೈಬಿಟ್ಟು ಹೋದ ಗಡಿಗಳು ಮರಳಿ ಭಾರತೀಯರಿಗೆ ಸ್ವಾಧೀನವಾಗತೊಡಗಿದುವು. ದ್ವಾರಸಮುದ್ರದ ಮಧ್ಯರಾಜ್ಯವು ಮೊದಲು ಹರಿಹರನ ವಶವಾ-ಯಿತು.[೧೧] ಬಳಿಕ ಉತ್ತರದ ಪ್ರಾಂತವು ನಿಶ್ಶತ್ರುವಾಗಿ ಪೂರ್ವದಿಂದ ಪಶ್ಚಿಮ ಸಮುದ್ರದ ವರೆಗಿನ ಪ್ರದೇಶವು ನವೋದಿತವಾದ ವಿಜಯನಗರ ರಾಜ್ಯಕ್ಕೆ ಒಳಪಟ್ಟು ತುಂಗಭದ್ರೆಯ ದಕ್ಷಿಣಕ್ಕೆ ಅರಿಗಳ ಸುಳಿದಾಟವು ಇಲ್ಲದಂತಾಯಿತು. ಅಷ್ಟರಲ್ಲಿ ಆನೇಗುಂದಿಯ ರಾಜ್ಯವೂ ಮಹಮ್ಮ-ದೀಯರ ಪ್ರಭುತ್ವವನ್ನು ಸಂಪೂರ್ಣವಾಗಿ ಕಿತ್ತೊಗೆದು ನಿಂತಿತು. ಇದೇ

೯. Heras, p. 69. ೧೦. E. C, V. Arasikere 159.
೧೧. M. G. P. 1457.

ಸಮಯಕ್ಕೆ ಭಾರತೀಯರ ಈ ಸಂಘಶಕ್ತಿಯ ಬೆಂಬಲವನ್ನು ಪಡೆದ ಕೃಷ್ಣನಾಯಕನು ವರಂಗಲ ರಾಜ್ಯದಲ್ಲಿ ಬಂಡಾಯವನ್ನು ಎಬ್ಬಿಸಿ ಹಗೆಗಳನ್ನು ಹಣಿದೋಡಿಸಿ ಅಲ್ಲಿ ಮರಳಿ ಸ್ವರಾಜ್ಯವನ್ನು ಸ್ಥಾಪಿಸಿದನು (೧೩೪೪).[೧೨]

ಈ ರೀತಿಯಾಗಿ ಪರಕೀಯರ ಆಕ್ರಮಣದಿಂದ ದೇಶವು ದುರವಸ್ಥೆಯನ್ನು ಅನುಭವಿಸುತ್ತಿರುವಾಗ ಸುಮಾರು ಹದಿನೈದು ವರ್ಷಗಳ ಹಿಂದೆ ಬಲ್ಲಾಳರಾಯ, ಹರಿಹರ ಮೊದಲಾದ ವೀರರ ಎದೆಗಳೂ ಧೀರರ ತಲೆಗಳೂ ಕೂಡಿ ಕಂಡ ಕನಸುಗಳು, ಸಂಕಲ್ಪಿಸಿದ ಮನೋರಥಗಳು ಬಹುಭಾಗ ಪೂರ್ಣವಾಗಿ ನೆರವೇರಿದುವು. ಹಗೆಗಳು ಕಂಗೆಟ್ಟು ದೆಸೆದೆಸೆಯಿಂದ ಪಲಾಯನ ಮಾಡಿದರು. ಸ್ವದೇಶದಲ್ಲಿ ಸ್ವರಾಜ್ಯವು ಸ್ಥಾಪನವಾಗಿ ಜನಾಂಗದ ಆಧಿಪತ್ಯವು ಮತ್ತೆ ನೆಲೆಗೊಂಡಿತು. ಪ್ರಭುಶಕ್ತಿಯ ಪ್ರಭಾವದಿಂದ ಭಾರತೀಯ ಸಂಸ್ಕೃತಿಯು ಮತ್ತೆ ಜೀವಕಳೆಯನ್ನು ತುಂಬಿಕೊಂಡು ಭಾರತೀಯ ನಾಗರಿಕತೆಯು ಬೆಳೆಯಲು ಅನುವಾಯಿತು. ಎಂಟು ವರ್ಷಗಳ ಹಿಂದೆ ಸ್ವರಾಜ್ಯವನ್ನು ಸ್ಥಾಪಿಸಬೇಕು, ಹಿಂದು ಸಾಮ್ರಾಜ್ಯವನ್ನು ಬೆಳಗಿಸಬೇಕು ಎಂಬ ಮಹತ್ವಾಕಾಂಕ್ಷೆಯನ್ನು ತಳೆದು ಹರಿಹರನು ಆನೆಗುಂದಿಯಲ್ಲಿ ನೆಟ್ಟ ಬೀಜವು ಸಸಿಯಾಗಿ ಪುಟ ನೆಗೆದು ನಿರಾತಂಕವಾಗಿ ಬಲಿಯತೊಡಗಿತು.

ಮುಂದಿನ ಎರಡು ಮೂರು ವರ್ಷಗಳನ್ನು (೧೩೪೪—೪೬) ಹರಿಹರನು ಅಳಿದುಳಿದ ಹಗೆಯ ಕುರುಹುಗಳನ್ನು ಅಳಿಸುವುದರಲ್ಲಿಯೂ ಗಳಿಸಿದ ರಾಜ್ಯವನ್ನು ಸ್ಥಿರಗೊಳಿಸುವುದರಲ್ಲಿಯೂ ಅಲ್ಲಲ್ಲಿಯ ಗಡಿಗಳನ್ನು ಭದ್ರಪಡಿಸುವುದರಲ್ಲಿಯೂ ಜನಾಂಗದಲ್ಲಿ ಸುಸಂಘಟನೆಯನ್ನು ತನ್ನ ಸಹಕಾರಿಗಳಲ್ಲಿ ಬಾಂಧವ್ಯವನ್ನು ಬೆಳೆಸುವುದರಲ್ಲಿಯೂ ಕಳೆದನು. ಅಷ್ಟರಲ್ಲಿ ಹೊಯ್ಸಳ ವಂಶದ ಕೊನೆಯ ಎಳೆಯೂ ಮುಮ್ಮಡಿ ವೀರಬಲ್ಲಾಳನ ಮಗನೂ ಆ ಅರಸೊತ್ತಿಗೆಯ ನಾಮಧಾರೀ ಒಡೆಯನೂ ಆದ ವೀರ ವಿರೂಪಾಕ್ಷ ನಾಲ್ವಡಿ ಬಲ್ಲಾಳನು ಇಹಲೋಕಯಾತ್ರೆ-

೧೨. V. R. p. 93.

ಯನ್ನು ಮುಗಿಸಿದನು (೧೩೪೬). ಹೊಯ್ಸಳ ವಂಶದೀಪವು ನಂದಿ ಹೋಯಿತು. ಈಗಂತೂ ಹರಿಹರನು ನ್ಯಾಯ್ಯವಾಗಿಯೆ ಯಾವ ತಡೆಯೂ ಇಲ್ಲದೆ ರಾಷ್ಟ್ರದ ಭಕ್ತಿವಿಶ್ವಾಸಗಳಿಗೆ ಏಕಮಾತ್ರ ವಿಷಯ-ವಾದನು. ಎಲ್ಲ ಜನಾಂಗವು ಆತನ ಒಡೆತನವನ್ನು ಕೂಡಲೆ ಸ್ವಾಗತ-ಪೂರ್ವಕವಾಗಿ ಒಪ್ಪಿಕೊಂಡಿತು.[೧೩]

ಅನಂತರ ದಕ್ಷಿಣ ಭಾರತದಲ್ಲಿ ಜಯಶಾಲಿಯಾಗಿ ಭಾರತೀಯ ಸಾಮ್ರಾಜ್ಯವನ್ನು ಸಂಸ್ಥಾಪಿಸಿದ **'ಮಹಾಮಂಡಲೇಶ್ವರ, ಅರಿ-ರಾಯ ವಿಭಾಡ, ಭಾಷೆಗೆ-ತಪ್ಪುವ-ರಾಯರ-ಗಂಡ'** ವೀರಹರಿಹರ-ರಾಯನು, ಕಂಪಣ್ಣೊಡೆಯರು, ಬುಕ್ಕಣ್ಣ, ಮಾರಪ್ಪ ಮೊದಲಾದ ತನ್ನ ನಾಲ್ವರು ತಮ್ಮಂದಿರು, ಅಳಿಯ ಬಲ್ಲಪ್ಪ ದಂಡನಾಯಕನು, ಕುಮಾರ ಸೋವಣ್ಣೊಡೆಯರು ಮೊದಲಾದ ಆಪ್ತಬಾಂಧವರೊಂದಿಗೆ ಆರ್ಯ-ಧರ್ಮ-ವಿದ್ಯೆಗಳ ನೆಲೆವೀಡಾಗಿ ತನ್ನ ಸ್ವರಾಜ್ಯಸ್ಥಾಪನೆಯ ಕಾರ್ಯಕ್ಕೆ ಬಲವಾದ ಸ್ಫೂರ್ತಿಯನ್ನು ನೀಡಿದ ಶೃಂಗೇರಿಯ ಶ್ರೀಶಂಕರಾಚಾರ್ಯ ಮಠಕ್ಕೆ ಪಯಣಬೆಳೆಸಿ **ವಿಜಯನಗರ ಸಾಮ್ರಾಜ್ಯಸ್ಥಾಪನೆಯ ವಿಜಯೋತ್ಸವದ ಸ್ಮಾರಕರೂಪವಾಗಿ ಮಹಾದಾನವನ್ನು ಮಾಡಿದನು** (೧೩೪೬).[೧೪] ಹತ್ತು ವರ್ಷಗಳ ಹಿಂದೆ (೧೩೩೬) ಆರಂಭವಾದ ವಿಜಯನಗರಸಾಮ್ರಾಜ್ಯಸ್ಥಾಪನೆಯ ಕಾರ್ಯವು ಇಂದು (೧೩೪೬) ಪೂರ್ತಿಗೊಂಡಿತು. ವಿಜಯನಗರ ಸಾಮ್ರಾಜ್ಯದ ವಿಜಯ-ಧ್ವಜವು **ಶ್ರೀ ವಿರೂಪಾಕ್ಷನ ಕೃಪಾಛತ್ರದಲ್ಲಿ** ಉದಿತೋದಿ-ತವಾದ ಶಕ್ತಿಯಿಂದ ಉತ್ತುಂಗವಾಗಿ ತುಂಗಭದ್ರೆಯ ತೀರದಲ್ಲಿ ನಲಿ-ದಾಡತೊಡಗಿತು.

ಹೀಗೆ ತಮ್ಮ ಸಾಮ್ರಾಜ್ಯಸಂಸ್ಥಾಪನೆಯ ಮಹಾಕಾರ್ಯಕ್ಕೆ ಯಾವ ಶೃಂಗೇರೀ ಪೀಠದ ಆಧ್ಯಾತ್ಮಿಕ ಬೆಂಬಲವನ್ನು ಹರಿಹರಾದಿ ಸಂಗಮ ಪುತ್ರರು ಹಾರಯಿಸಿದರೊ, ಆ ಶೃಂಗೇರಿಗೂ ಸಂಗಮರಿಗೂ

---

೧೩. Heras, p. 104. ೧೪. E. C. VI. Sg. 1.

ಪರಂಪರಾಗತವಾದ ನಿಕಟ ಸಂಬಂಧವಿದ್ದಿತು.[೧೫] ಧರ್ಮಪ್ರಧಾನವಾದ ಈ ಯುಗದ ಭಾರತೀಯರ ರಾಜಕೀಯ ಚರಿತ್ರೆಯನ್ನು ಪರಿಶೀಲಿಸಿದರೆ ಧರ್ಮಭಾವನೆಯು ರಾಜಕೀಯ ಕ್ಷೇತ್ರದಲ್ಲಿಯೂ ಪ್ರಭಾವಶಾಲಿ-ಯಾಗಿದ್ದಿತು ಎಂದು ಕಾಣಬರುತ್ತದೆ. ಧರ್ಮಗುರುಗಳೂ ಆಧ್ಯಾತ್ಮಿಕ ಜ್ಞಾನಸಂಪನ್ನರಾದ ಪುಣ್ಯಪುರುಷರೂ ರಾಜ್ಯಸ್ಥಾಪನೆಯಲ್ಲಿಯೂ ರಾಜ್ಯಕಾರ್ಯಗಳಲ್ಲಿಯೂ ಆಗಾಗ ಸ್ಫೂರ್ತಿಸಾಹಾಯ್ಯಗಳನ್ನು ನೀಡುವಂತಹರಾಗಿದ್ದರು. ಈ ಪರಂಪರೆಗೆ ಅನುಗುಣವಾಗಿ ಭಾರ-ತೀಯ ಧರ್ಮ ಹಾಗು ಭಾರತೀಯ ಸಂಸ್ಕೃತಿ ಇವುಗಳ ಉದ್ಧಾರಕ-ರಾದ ಸಂಗಮಪುತ್ರರು ಉಜ್ವಲವಾದ ಧಾರ್ಮಿಕ ತೇಜದಿಂದ ಮಿನುಗುವ ಶೃಂಗೇರಿಯಲ್ಲಿಯೂ ಅಲ್ಲಿಯ ಗುರುಗಳಲ್ಲಿಯೂ ತಮಗೆ ಸ್ಫೂರ್ತಿಸಾಹಾಯ್ಯಗಳನ್ನು ಅರಸಿಕೊಂಡುದು ಸ್ವಾಭಾವಿಕವೆ ಆಗಿ-ದ್ದಿತು. ವಿಜಯನಗರದ ಮುಂದಿನ ಅನೇಕ ಅರಸರಿಗೆ ಶೃಂಗೇರಿಯು ಅತ್ಯಂತ ಗೌರವದ ಸ್ಥಾನವಾಗಿ ಉಳಿಯಿತು. ಹರಿಹರ ಬಂಧುಗಳಿಗೆ ಈ ನವರಾಜ್ಯಸಂಸ್ಥಾಪನೆಯ ಕಾರ್ಯದ ಪ್ರೇರಣೆಯೂ ಆಧ್ಯಾತ್ಮಿಕ ಬೆಂಬಲವೂ ಸಾಮಾನ್ಯವಾಗಿ ಶೃಂಗೇರಿಯ ಗುರುಗಳಿಂದ ದೊರೆತಿದ್ದರೂ ಅವರಿಗೆ ಅಲ್ಲಿಯ ಒಬ್ಬ ವ್ಯಕ್ತಿಯೊಡನೆ ವಿಶೇಷವಾದ ಜೀವಾಳದ ಸಂಬಂಧವು ಉಂಟಾಗಿದ್ದಿತು. ವಯಸ್ಸಿನಲ್ಲಿಯೂ ಅಧಿಕಾರದಲ್ಲಿಯೂ ಈ ಮೂರ್ತಿಯು ಈಗ ಕಿರಿದಾಗಿದ್ದರೂ ಮುಂದೆ ಕಾಲಕ್ರಮದಲ್ಲಿ ಅದರ ಕೀರ್ತಿಯೂ ವಿಜಯನಗರದೊಡನೆ ಸಂಬಂಧವೂ ಹೆಚ್ಚಾಗುತ್ತ ಹೋದುವು. ಪಾಂಡಿತ್ಯ, ಜ್ಞಾನ, ವೈರಾಗ್ಯ, ಲೋಕಸಂಗ್ರಹ ಮುಂತಾದ ಅಸಾಧಾರಣವಾದ ದೈವೀಸಂಪತ್ತಿಯಿಂದಲೂ ಆಧ್ಯಾತ್ಮಿಕ ಪ್ರಭೆಯಿಂದಲೂ ಪ್ರಕಾಶಮಾನವಾದ ಈ ಪುಣ್ಯವಿಭೂತಿಯ ಪ್ರಭಾವವು ಬರಬರುತ್ತ ಜನಮನಗಳಲ್ಲಿ ಹೆಚ್ಚಾಗಿ ಬೆಳೆದು ವಿಜಯನಗರ ಸಾಮ್ರಾ-

---

೧೫. ಶೃಂಗೇರಿಯ ಸಮೀಪವಿರುವ ಕಲಾಸ ಎಂಬ ಊರು ಸಂಗಮರ ಮೂಲಸ್ಥಾನವಾಗಿರಬೇಕು. ಅದರಿಂದ ಶೃಂಗೇರೀ ಪೀಠಕ್ಕೂ ಸಂಗಮರಿಗೂ ಒಂದು ಬಗೆಯ ಕೌಟುಂಬಿಕ ಗುರುತ್ವದ ಋಣಾನುಬಂಧವು ಉಂಟಾಗಿದ್ದಿತು ಎಂಬ ಊಹೆಯಲ್ಲಿ ಸತ್ಯಾಂಶವು ಇರಬಹುದು. (Heras, p. 77.)

ಜ್ಯಸ್ಥಾಪನೆಯ ಸಂಪೂರ್ಣವಾದ ಶ್ರೇಯಸ್ಸು ಇದಕ್ಕೆಯೇ ಅರ್ಪಿಸ-ಲಾಗದೆ. ಈ ನಾಮಾಂಕಿತ ವಿಭೂತಿಯೆ **ಶ್ರೀವಿದ್ಯಾರಣ್ಯರು.**[೧೬]

ವಿದ್ಯಾರಣ್ಯರನ್ನು ಕುರಿತು ಅನೇಕ ಆಖ್ಯಾಯಿಕೆಗಳೂ ದಂತಕಥೆ-ಗಳೂ ಪ್ರಚಲಿತವಾಗಿರುವುವು. ಅವುಗಳಲ್ಲಿ ಹಲವು ಈಚೆಯ ಕಾಲದ ಗ್ರಂಥಗಳಲ್ಲಿ[೧೭] ವಿಶೇಷವಾಗಿ ವಿಸ್ತರಿಸಲಾಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಸಂಕ್ಷೇಪವಾಗಿ ಕಾಣಿಸಬಹುದು:—

೧) ವಿದ್ಯಾರಣ್ಯರ ಗೃಹಸ್ಥಾಶ್ರಮದ ಹೆಸರು ಮಾಧವಾಚಾ-ರ್ಯರು. ಇವರು ಅಸದೃಶವಾದ ಪಾಂಡಿತ್ಯದಿಂದ ವಿಭೂ-ಷಿತರಾಗಿದ್ದರೂ ಕಡುತರವಾದ ದಾರಿದ್ರ್ಯದಿಂದ ಪೀಡಿತ-ರಾಗಿದ್ದರು. ಈ ದಾರಿದ್ರ್ಯವನ್ನು ನೀಗಲು ಇವರು ಶ್ರೀ ಭುವನೇಶ್ವರಿಯನ್ನು ಕುರಿತು ಉಗ್ರವಾದ ತಪವನ್ನು ಆಚರಿಸಿ-ದರು. ದೇವಿಯು ಪ್ರಸನ್ನಳಾದಳು. ಆದರೂ 'ಈ ಜನ್ಮದಲ್ಲಿ ನಿನ್ನ ಪಾಲಿಗೆ ಐಶ್ವರ್ಯವಿಲ್ಲ' ಎಂದು ಹೇಳಿದಳು. ಬಳಿಕ ವಿದ್ಯಾರಣ್ಯರು ದೇವಿಯ ಈ ಮಾತನ್ನು ಸತ್ಯಗೊಳಿಸಲು ಸಂನ್ಯಾಸವನ್ನು ಸ್ವೀಕರಿಸಿ ಜನ್ಮಾಂತರವನ್ನು ಹೊಂದಿದರು. ಭುವನೇಶ್ವರಿಯ ಅನುಗ್ರಹದಿಂದ ಚಿನ್ನದ ಮಳೆಯನ್ನು ಸುರಿ-ಸಿದರು. ವಿಜಯನಗರವನ್ನು ಸ್ಥಾಪಿಸಿದರು.

೨) ಹರಿಹರನು ಬೇಟೆಯಾಡುತ್ತಿರುವಾಗ ಒಂದು ಮೊಲವೆದ್ದು ಬೇಟೆ ನಾಯಿಯನ್ನು ಇದಿರಿಸಿತು. ಈ ಸೋಜಿಗವನ್ನು ನೋಡಿ ಚಕಿತನಾದ ಹರಿಹರನು ಸಮೀಪದಲ್ಲಿ ಒಬ್ಬ ಯತಿ-ಯನ್ನು ಕಂಡನು. ಇವರೇ ವಿದ್ಯಾರಣ್ಯರು. ವಿದ್ಯಾರಣ್ಯರ ಅಪ್ಪಣೆಯಂತೆ ಆ ಸೋಜಿಗದ ಸ್ಥಳದಲ್ಲಿ ಹರಿಹರನು ರಾಜ್ಯ-ವನ್ನು ಸ್ಥಾಪಿಸಿ ರಾಜಧಾನಿಯನ್ನು ಕಟ್ಟಿಸಿದನು. ಇದುವೆ ವಿದ್ಯಾನಗರವು, ವಿಜಯನಗರವು.

೩) ವಿದ್ಯಾರಣ್ಯರೆಂಬ ಯತಿಗೆ ಹುಗಿದ ಭಾಂಡಾರವು ದೊರೆತಿತು.

---

೧೬. ದೀ. ಟಿ. ೪. ೧೭. ರಾಜಕಾಲನಿರ್ಣಯ, ಶಿವತತ್ವರತ್ನಾಕರ ಇ.

> ಅದರಿಂದ ಅವರು ವಿಜಯನಗರ ಪಟ್ಟಣವನ್ನು ಕಟ್ಟಿಸಿ, ಅಲ್ಲಿ ಕೆಲದಿನ ರಾಜ್ಯವಾಳಿ ಆ ರಾಜ್ಯವನ್ನು ಹುಕ್ಕಬುಕ್ಕರೆಂಬ ಕುರುಬರ ವಂಶಕ್ಕೆ ಕೊಟ್ಟರು.[೧೮]

ಪರಂಪರಾಗತವಾದ ಆಖ್ಯಾಯಿಕೆ-ದಂತಕಥೆಗಳಲ್ಲಿ ಸತ್ಯಾಂಶವಿರಬಹುದಾದರೂ ಅವುಗಳು ಸತ್ಯವಾದ ಇತಿಹಾಸಪ್ರಪಂಚಕ್ಕೆ ಸೇರಲರ್ಹವಾಗಲಾರವು. ಈ ಆಖ್ಯಾಯಿಕೆಗಳನ್ನು ವಿವರಿಸುವ ಗ್ರಂಥಗಳಿಗಿಂತ ಹೆಚ್ಚು ಪ್ರಾಚೀನವೂ ಪ್ರಮಾಣಭೂತವೂ ಆಗಬಲ್ಲ, ವಿದ್ಯಾರಣ್ಯರ ಸಮಕಾಲಿಕವಾದ ಕೆಲವು ಶಾಸನಗಳು ದೊರೆತಿವೆ. ಇವುಗಳಲ್ಲಿ ವಿದ್ಯಾರಣ್ಯರನ್ನು ಕುರಿತು ಮೇಲೆ ನಿರ್ದಿಷ್ಟವಾದ ಮೂರು ಆಖ್ಯಾಯಿಕೆಗಳಲ್ಲಿ ಎರಡನೆಯ ಆಖ್ಯಾಯಿಕೆಯು ಸ್ಫುಟವಾಗಿ ಬಣ್ಣಿಸಲಾಗಿದೆ. ಈ ಶಾಸನಗಳ ಪ್ರಾಮಾಣ್ಯದ ಬಗೆಗೆ ಸಂಶೋಧಕರಲ್ಲಿ ತೀಕ್ಷ್ಣವಾದ ಮತಭೇದಗಳು ಉಂಟಾಗಿರುವುವು. ಈ ಭಿನ್ನಾಭಿಪ್ರಾಯಗಳನ್ನು ಮೇಳಗೂಡಿಸಿ ಅವುಗಳೊಳಗಿಂದ ಸರ್ವಸಮ್ಮತವಾಗಬಹುದಾದ ಸಮನ್ವಯ ಮಾರ್ಗವನ್ನು ಕಂಡುಹಿಡಿವುದು ಪ್ರಸ್ತುತದಲ್ಲಿ ಅತ್ಯಂತ ದುರ್ಘಟವಾಗಿದೆ. ಆದರೂ ಪೂರ್ವಗ್ರಹವನ್ನೂ ಏಕಾಂತಾಭಿನಿವೇಶವನ್ನೂ ಬದಿಗಿಟ್ಟು ವಿದ್ಯಾರಣ್ಯವಿಷಯಕವಾದ ಪ್ರಮಾಣ ಸಾಮಗ್ರಿಯನ್ನು ಸಮಾಲೋಚಿಸಿದರೆ, ವಿಜಯನಗರ ಸಾಮ್ರಾಜ್ಯಸ್ಥಾಪನೆಯಲ್ಲಿ ವಿದ್ಯಾರಣ್ಯರ ಕಾರ್ಯಭಾಗವನ್ನು ಸಂಪೂರ್ಣವಾಗಿ ಅಲ್ಲಗಳೆವುದು ವೃಥಾಸಾಹಸವೆಂದೆನಿಸದೆ ಇರಲಾರದು. ವಿದ್ಯಾರಣ್ಯರ ಪೂರ್ಣಪಕ್ಷಪಾತಿಗಳು ವಿಜಯನಗರಸಾಮ್ರಾಜ್ಯದೊಡನೆ ವಿದ್ಯಾರಣ್ಯರ ಸ್ಥಿರವಾದ ಸಾಹಚರ್ಯವನ್ನು ಮೂರು ಬಗೆಯಿಂದ ಸ್ಥಾಪಿಸಿ ಹೇಳುವರು:

೧. ಜನಕ—ಸಂಸ್ಥಾಪಕ,

೨. ರಾಜಗುರು,

೩. ರಾಜ್ಯಮಂತ್ರಿ; ಹರಿಹರ, ಬುಕ್ಕ, ಇಮ್ಮಡಿ ಹರಿಹರ ಈ ಮೊದಲಿನ ಮೂರು ಆಳಿಕೆಗಳಲ್ಲಿ.

---

೧೮. Heras, p. 10.

ವಿದ್ಯಾರಣ್ಯರ ಈ ಮೂರೂ ಅಧಿಕಾರಗಳನ್ನು ಸಮಗ್ರವಾಗಿ ಸಿದ್ಧಪಡಿಸಲು ಸಾಕಷ್ಟು ನಿಸ್ಸಂದಿಗ್ಧವಾದ ಪ್ರಮಾಣಗಳು ಇದುವರೆಗೆ ದೊರೆತಿಲ್ಲವೆಂಬುದನ್ನು ನಿಷ್ಪಕ್ಷಪಾತವಾಗಿ ಒಪ್ಪಿಕೊಳ್ಳಬೇಕಾಗಿದೆ. ಇದರ ಜೊತೆಗೆ ಇಷ್ಟು ಪ್ರಾಚೀನಕಾಲದ ಕೆಲವು ಸಂದರ್ಭಾಂಶಗಳನ್ನು ಕುರಿತು ಸ್ಪಷ್ಟವಾದ ಪ್ರಮಾಣಗಳು ದೊರೆವುದಿಲ್ಲವೆಂದಮಾತ್ರಕ್ಕೆ ಎಲ್ಲವೂ ಸುಳ್ಳು ಎಂದು ಹಠದಿಂದ ಸಾಧಿಸುವ ನಾಸ್ತಿಕವಾದವಾದರೂ ಅಸಮಂಜಸವಾಗಿದೆ ಎಂದು ಹೇಳಬೇಕಾಗುತ್ತದೆ. ವಿಜಯನಗರ ಸ್ಥಾಪನೆಗೆ ವಿದ್ಯಾರಣ್ಯರು ಹೇಗೆ ಕಾರಣರಾದರು ಎಂದು ಹೇಳುವ ಕಥೆಯು ಪೂರ್ಣವಾಗಿ ಐತಿಹಾಸಿಕಸತ್ಯದ ಒರೆಗೆ ಇಳಿಯದಿದ್ದರೂ ಇತರ ಅನೇಕ ಅನುಮಾನ ಪ್ರಮಾಣಗಳ ಬೆಂಬಲದಿಂದ ವಿದ್ಯಾರಣ್ಯರು ವಿಜಯನಗರ ಸ್ಥಾಪನೆಗೆ ಸ್ಫೂರ್ತಿಪ್ರೇರಣೆಗಳನ್ನು ನೀಡಿದರು ಎಂದು ಹೇಳುವುದು ಇತಿಹಾಸವಿರೋಧಕ ಸಂಗತಿಯಾಗಲಾರದು. ವಿದ್ಯಾರಣ್ಯರ ಈ ಅನುಗ್ರಹದ ಸ್ಮಾರಕವಾಗಿ ಹರಿಹರನು ತನ್ನ ಹೊಸ ರಾಜ್ಯದ ಹೊಸ ರಾಜಧಾನಿಗೆ ವಿದ್ಯಾನಗರ (ವಿಜಯನಗರ)ವೆಂದು ಹೆಸರಿಟ್ಟು ಗೌರವಿಸಿದನು ಎಂದು ಕಾಣಬರುತ್ತದೆ.[೧೯] ಆದುದರಿಂದ ವಿದ್ಯಾರಣ್ಯರು ವಿಜಯನಗರದ ಅರಸರ ಆಧ್ಯಾತ್ಮಿಕ ರಾಜಗುರುಗಳು ಅಹುದು ಎಂದು ಹೇಳಬಹುದು. ೧೩೩೬ರಿಂದ ೧೩೫೬ರ ವರೆಗಿನ ಕೆಲವು ಶಾಸನಗಳಲ್ಲಿ ವಿದ್ಯಾರಣ್ಯರ ಹೆಸರಿನ ಸಂಬಂಧವು ವಿಜಯನಗರದೊಡನೆ ಬರುತ್ತಿದ್ದರೂ ಅವರ ನಿವಾಸ, ಕಾರ್ಯಕಲಾಪಗಳ ಬಗೆಗೆ ನಿಶ್ಚಿತವಾದ ಹೆಚ್ಚಿನ ಸಂದರ್ಭಗಳು ತಿಳಿಯಬರುವುದಿಲ್ಲ. ಬುಕ್ಕರಾಯನು ೧೩೫೬ರಲ್ಲಿ ವಿದ್ಯಾರಣ್ಯರನ್ನು ಕಾಶಿಯಿಂದ ಬರಮಾಡಿಕೊಂಡನೆಂದು ಶೃಂಗೇರಿಯ ಕಡಿತದಿಂದ ತಿಳಿವುದರಿಂದ[೨೦] ಅಂದಿನಿಂದ ಮುಂದೆ ವಿಜಯನಗರದ ರಾಜಕೀಯ ಕ್ಷೇತ್ರದಲ್ಲಿ ವಿದ್ಯಾರಣ್ಯರ ಸಂಬಂಧವು ಪ್ರತ್ಯಕ್ಷವಾಗಿ ಹೆಚ್ಚು ಹೆಚ್ಚು ಉಂಟಾಯಿತು ಎಂಬುದು ಸ್ಫುಟವಾಗಿ ವ್ಯಕ್ತವಾಗು-

---

೧೯. ಹರಿಹರ-ಬುಕ್ಕರ ೧೩೫೬ರ ಪೂರ್ವದ ಅಕೃತಕವಾದ ಕೆಲವು ಶಾಸನಗಳಲ್ಲಿ 'ವಿದ್ಯಾನಗರ' ಎಂದು ರಾಜಧಾನಿಯ ನಿರ್ದೇಶವು ಬರುತ್ತದೆ. (V. R. P. 52 & 95)

೨೦. Heras, p. 15.

ತ್ತದೆ. ಇಮ್ಮಡಿ ಹರಿಹರನ ಆಳಿಕೆಯಲ್ಲಿ ವಿದ್ಯಾರಣ್ಯರು ಕೆಲಕಾಲ ವಿಜಯನಗರದ ಆಸ್ಥಾನದಲ್ಲಿ ಬಹು ಗೌರವದ ಸ್ಥಾನವನ್ನು ಅಲಂಕರಿಸಿದರೆಂಬುದು ನಿರ್ವಿವಾದವಾಗಿದೆ. ಇರಲಿ.

ಈ ಮೇರೆಗೆ ಶೃಂಗೇರಿಯ ಗುರುಪೀಠದ ಪ್ರೇರಣೆಯಿಂದಲೂ ಹರಿಹರಾದಿ ಸಂಗಮಪುತ್ರರ ಪ್ರಚಂಡವಾದ ಸಾಹಸ, ಪರಾಕ್ರಮ, ದೀರ್ಘೋದ್ಯೋಗ ಇವುಗಳಿಂದಲೂ ದಕ್ಷಿಣಭಾರತದಲ್ಲಿ ಭಾರತೀಯ ಸಂಸ್ಕೃತಿಯನ್ನು ಉದ್ಧರಿಸಲು ಅವತರಿಸಿದ **ವಿಜಯನಗರಸಾಮ್ರಾಜ್ಯಸ್ಥಾಪನೆಯ ಮಹಾಕಾರ್ಯವು ೧೩೩೬ರಲ್ಲಿ ಆರಂಭವಾಗಿ ೧೩೪೬ರಲ್ಲಿ ಪೂರ್ಣವಾಯಿತು.**

# ಸಂಗಮ ಮನೆತನದ ಆಳಿಕೆ

# (೧೩೪೬-೧೪೮೫)

## ಐದನೆಯ ವಿಲಾಸ

## ೧. ಹರಿಹರರಾಯ (೧೩೪೬-೫೬)

ಹರಿಹರನು ವಿಜಯನಗರ ಸಾಮ್ರಾಜ್ಯದ ಮೊದಲನೆಯ ಅರಸನು. ಈತನ ತಂದೆಯು ಸಂಗಮನು. ಆತನಿಂದ ಈ ವಂಶಕ್ಕೆ ಸಂಗಮ ಮನೆತನವೆಂಬ ಹೆಸರು ಬಂದಿದೆ. ಸಂಗಮನು ಯಾದವ ವಂಶದವನು; ಹೊಯ್ಸಳ ಅರಸುಮನೆತನಕ್ಕೆ ಸಂಬಂಧಪಟ್ಟವನು.[೧] ದೇವಗಿರಿಯ ಯಾದವ ಮನೆತನದೊಡನೆಯೂ ಹೊಯ್ಸಳರೊಡನೆಯೂ ಸಂಗಮ ಮನೆತನದ ರಕ್ತಸಂಬಂಧಗಳಾದುದುಂಟು. ಮೈಸೂರ ಸೀಮೆಯ ಕಡೂರ ಜಿಲ್ಲೆಯು ಸಂಗಮನ ಮೂಲಸ್ಥಾನವಾಗಿದ್ದಿತು.[೨] ಅಲ್ಲಿ ಹೊಯ್ಸಳರ ಅಂಕಿತದಲ್ಲಿ ಈತನು ಒಂದು ಚಿಕ್ಕ ಪ್ರದೇಶದ ಅಧಿಕಾರಿಯಾಗಿದ್ದನೆಂದು ತೋರುತ್ತದೆ. ಸಂಗಮನು ಶೂರನಾಗಿದ್ದು ಚೋಳ, ಪಾಂಡ್ಯ, ಮಹಮ್ಮದೀಯ ಮೊದಲಾದ ಹಗೆಗಳೊಡನೆ ಹೊಯ್ಸಳರು ಹೂಡಿದ ಕದನಗಳಲ್ಲಿ ಪ್ರಮುಖಭಾಗವನ್ನು ವಹಿಸಿದ್ದನು.[೩] ಸಂಗಮನು ಅಚ್ಚ ಕನ್ನಡಿಗನು.[೪]

ಸಂಗಮನ ಹೆಂಡತಿಯು ಶಾರದೆಯು.[೫] ಇವರಿಗೆ ಐವರು ಮಕ್ಕಳು: ಹರಿಹರ, ಕಂಪಣ್ಣ, ಬುಕ್ಕ, ಮಾರಪ್ಪ, ಮುದ್ದಣ್ಣ. ಇವರಲ್ಲಿ

---

೧. Heras, P. 93. ಹುಕ್ಕ (ಹರಿಹರ)–ಬುಕ್ಕರು ಕುರುಬರಾಗಿದ್ದರು ಎಂದು ಹೇಳುವ ವಾಡಿಕೆಯುಂಟು. ಇದಕ್ಕೆ ಐತಿಹಾಸಿಕ ಆಧಾರವಿಲ್ಲ. ಹೆಸರಾದ ರಾಜ್ಯಗಳ ಸ್ಥಾಪನೆಯ ಶ್ರೇಯಸ್ಸನ್ನು ಕುರುಬರ ಕೊರಳಲ್ಲಿ ಕಟ್ಟುವ ಒಂದು ಹುಚ್ಚು ಈಚೀಚೆಯ ದಕ್ಷಿಣ ಭಾರತದ ಇತಿಹಾಸದಲ್ಲಿ ಹಬ್ಬಿತ್ತು ಎಂದು ಹೆರಾಸಸಾಹೇಬರು ತೋರಿಸಿ ಕೊಟ್ಟಿರುವರು. (Heras, P. 10). ೨. Ibid p. 77. ೩. Ibid. p. 73. ೪. ದೀ. ಟಿ. ೫. ೫. ಮಾನಾಂಬಿಕೆ, ಗೌರಾಂಬಿಕೆ, ಕಾಮಾಕ್ಷಿ ಮುಂ. ಬೇರೆ ಹೆಸರುಗಳೂ ಶಾಸನಗಳಲ್ಲಿ ಉಕ್ತವಾಗಿವೆ.

ಹರಿಹರನೆ ಹಿರಿಯನು. ಇವರೆಲ್ಲರೂ ಮುಮ್ಮಡಿ ವೀರಬಲ್ಲಾಳರಾಯನ ಹೋರಾಟಗಳಲ್ಲಿ ಆತನಿಗೆ ಬಹು ಸಹಾಯಕರಾದರು. ಕಿರಿಯನಾದ ಮುದ್ದಣ್ಣನನ್ನುಳಿದು ಮಿಕ್ಕ ನಾಲ್ವರೂ ಬಲ್ಲಾಳರಾಯನಿಂದ ಬೇರೆ ಬೇರೆ ಸೀಮೆಗಳಲ್ಲಿ ಮಹಾಮಂಡಲೇಶ್ವರರಾಗಿ ನೇಮಿಸಲ್ಪಟ್ಟವರಾಗಿ-ದ್ದರು. ಇವರಲ್ಲಿ ಸಾಹಸಿಯೂ ರಾಜನೀತಿಚತುರನೂ ಆದ ಹರಿ-ಹರನು ಹಿಂದೆ ವಿವರಿಸಿದಂತೆ ವಿಜಯನಗರಸಾಮ್ರಾಜ್ಯದ ಸಂಸ್ಥಾಪಕ-ನಾದನು.ಹರಿಹರನೂ ಆತನ ಬಾಧುಗಳೂ ಇವರಲ್ಲಿ ಪರಸ್ಪರ ಸೌಹಾರ್ದ ಭಾವವು ನೆಲೆಗೊಂಡಿತ್ತು. ಸ್ವರಾಜ್ಯ ಸ್ಥಾಪನೆಯ ಕಾರ್ಯದಲ್ಲಿ ಆತನಿಗೆ ಅವರಿಂದ ತುಂಬಾ ಸಹಕಾರವು ಲಭಿಸಿತು. ಹರಿಹರನು ಹಗೆಗಳನ್ನು ಪೂರ್ಣವಾಗಿ ಸೋಲಿಸಿ ವಿಜಯೋತ್ಸವದ ನಿಮಿತ್ತವಾಗಿ ದಾನಗಳನ್ನು ನೀಡಲು ಶೃಂಗೇರಿಗೆ ಹೋದಾಗ ಆತನ ನಾಲ್ವರೂ ತಮ್ಮಂದಿರು ಆತನಿಗೆ ಜೊತೆಯಾಗಿದ್ದರು.

ಹರಿಹರನು ಬಹಳ ಸಾವಧಾನದಿಂದ ರಾಜ್ಯವಾಳಿದನು. ಆಗಿನ ಆ ವಿಲಕ್ಷಣವಾದ ಪರಿಸ್ಥಿತಿಯನ್ನು ವಿಚಾರಿಸಿದರೆ ರಾಜ್ಯವನ್ನು ನಡೆಸಿ-ಕೊಂಡು ಹೋಗುವುದು ಸಾಧಾರಣಕಾರ್ಯವಾಗಿದ್ದಿಲ್ಲ. ಅನ್ಯಾ-ಕ್ರಮಣದ ವಿಪ್ಲವದಿಂದ ರಾಷ್ಟ್ರವು ಇದೀಗ ತಲೆಯನ್ನು ಎತ್ತಿತ್ತು. ಹಗೆಗಳು ಸ್ಥಾನಭ್ರಷ್ಟರಾಗಿದ್ದರೂ ದೇಶದಲ್ಲಿಯ ಅವರ ಅಸ್ತಿತ್ವವು ಅಳಿಸಿ ಹೋಗಿದ್ದಿಲ್ಲ. ಉತ್ತರಕ್ಕೆ ತಳ್ಳಲ್ಪಟ್ಟ ಅವರು ಕಳೆದುಕೊಂಡ ಒಡೆತನವನ್ನು ಮರಳಿ ಸಂಪಾದಿಸಲು ಬಲವಾದ ಹೋರಾಟವನ್ನು ಹೂಡದೆ ಬಿಡುವವರಾಗಿದ್ದಿಲ್ಲ. ಇದು ಅಲ್ಪಕಾಲದಲ್ಲಿಯೇ ನಿದರ್ಶನಕ್ಕೆ ಬಂದಿತು. ತುಂಗಭದ್ರೆಯ ದಕ್ಷಿಣದಲ್ಲಿ ಚದರಿಸಲ್ಪಟ್ಟ ಅವರ ಶಕ್ತಿಗಳು ಉತ್ತರದಲ್ಲಿ ಏಕತ್ರವಾಗತೊಡಗಿದುವು.

ಹರಿಹರನು ವಿಜಯನಗರಸಾಮ್ರಾಜ್ಯಸ್ಥಾಪನೆಯ ವಿಜಯೋತ್ಸ-ವವನ್ನು ನೆರವೇರಿಸಿ ಒಂದು ವರ್ಷಕಾಲವು ಗತಿಸಿ ಹೋಗುವಷ್ಟರಲ್ಲಿ ಮುಹಮ್ಮದೀಯರ ಉತ್ತರದಲ್ಲಿಯ ಸಾಹಸದ ಫಲವಾಗಿ ಕಲಬುರ್ಗಿ-ಯಲ್ಲಿ ಬಹಮನೀ ರಾಜ್ಯವು ಸ್ಥಾಪನವಾಯಿತು (೧೩೪೭). ಇದರಿಂದ ಅವರ ಸಾಮರ್ಥ್ಯವು ಒಟ್ಟುಗೂಡಲು ಇನ್ನೊಂದು ಕೇಂದ್ರವು ನಿರ್ಮಾ-

ಣವಾಯಿತು. ಹೊಸತಾಗಿ ಸ್ಥಾಪಿತವಾದ ವಿಜಯನಗರ ರಾಜ್ಯಕ್ಕೆ ಪ್ರತಿಸ್ಪರ್ಧಿಯಾದ ಇನ್ನೊಂದು ರಾಜ್ಯವು ಹುಟ್ಟಿ ಬೆಳೆಯಲಾರಂಭಿಸಿತು. ಈ ರಾಜ್ಯದ ವೈರತ್ವವು ವಿಜಯನಗರರಾಜ್ಯಕ್ಕೆ ಚಿರಕಾಲ ಬಾಧಿಸಿತು. ಇದೀಗ ಕಾಲೂರಿ ನಿಂತುಕೊಂಡ ಹರಿಹರನು ಈ ಭಯದಿಂದ ತನ್ನ ನವರಾಜ್ಯವನ್ನು ಕಾಪಾಡುವುದು ಆವಶ್ಯಕವಾಗಿದ್ದಿತು.

ಇದಲ್ಲದೆ, ಎಷ್ಟಾದರೂ ಹರಿಹರನು ರಾಜ್ಯಕ್ರಾಂತಿಯಿಂದ ಮುಂದೆ ಬಂದವನು. ದಕ್ಷಿಣಭಾರತದ ರಾಜಕೀಯ ಪ್ರಪಂಚದಲ್ಲಿ ಆತನದು ಆರಸುಗೆಯ್ಯಲು ಬಂದ ಹೊಸಮುನೆತನವು. ಕಳೆದ ಅರ್ಧಶತಮಾನದ ಅನಿಯಂತ್ರಿತವಾದ ಪರಿಸ್ಥಿತಿಯಲ್ಲಿ ರಾಷ್ಟ್ರದ ರಾಜಕೀಯ, ಸಾಮಾಜಿಕ ಮುಂತಾದ ಕಟ್ಟುಗಳು ಅಸ್ತವ್ಯಸ್ತವಾಗಿ ವಿಷಮತೆಯು ಉಂಟಾಗಿತ್ತು. ಇದೆಲ್ಲವನ್ನು ಸರಿಪಡಿಸಿ ದೇಶದಲ್ಲಿ ಸುಯಂತ್ರಿತವಾದ ಆಡಳಿತವನ್ನು ನೆಲೆಗೊಳಿಸುವುದು ಹರಿಹರನ ಹಿರಿದಾದ ಹೊಣೆಯಾಗಿದ್ದಿತು. ಹರಿಹರನು ಬಹುಧೈರ್ಯದಿಂದಲೂ ಒಳ್ಳೆಯ ಕೌಶಲ್ಯದಿಂದಲೂ ರಾಜ್ಯತಂತ್ರವನ್ನು ಅಳವಡಿಸಿ ತನ್ನ ಕರ್ತವ್ಯಗಳನ್ನು ಒಹ್ವಂಶದಿಂದ ಸಾಧ್ಯಗೊಳಿಸಿದನು.

ಹರಿಹರನು ಎಚ್ಚರದಿಂದ ಉತ್ತರದ ಸೀಮೆಗಳನ್ನು ಕಾಯುತ್ತ ದೇಶವನ್ನು ವೈರಿಗಳ ದಾಳಿಯಿಂದ ಸುರಕ್ಷಿತವಾಗಿರಿಸಿದನು. ರಾಜ್ಯ ಪದ್ಧತಿ, ರಾಜ್ಯದಾಡಳಿತ ಇವುಗಳಲ್ಲಿ ಆತನು ಹೆಚ್ಚಾಗಿ ಹೊಯ್ಸಳರ ಸೂತ್ರ-ಸಂಪ್ರದಾಯಗಳನ್ನೆ ಅನುಸರಿಸುತ್ತ ಪೂರ್ವಮರ್ಯಾದೆಗಳನ್ನು ಪರಿಪಾಲಿಸಿದನು. ಹೊಯ್ಸಳರ ಅಧಿಕಾರಿಗಳನ್ನೂ ನಾಯಕರನ್ನೂ ಮಂಡಲಪತಿಗಳನ್ನೂ ತನ್ನೆಡೆಗೆ ಒಲಿಸಿಕೊಂಡು ಮೆಲ್ಲಮೆಲ್ಲನೆ ತನ್ನ ಸಾಮ್ರಾಜ್ಯವನ್ನು ವಿಸ್ತಾರಗೊಳಿಸಿದನು. ಹೊಯ್ಸಳ ಸಾಮ್ರಾಜ್ಯಕ್ಕೆ ಒಳಪಟ್ಟ ಪ್ರದೇಶವೆಲ್ಲವೂ ಬಹುಶಃ ಹರಿಹರನ ಸಾಮ್ರಾಜ್ಯದಲ್ಲಿ ಸೇರ್ಪಡೆಯಾಯಿತು. ವರಾಹರೂಪಿಯಾದ ಶ್ರೀ ವಿಷ್ಣುವಿನಂತೆ ಅರಾಜಕತೆಯ ಸಮುದ್ರದಲ್ಲಿ ಮುಳುಗಿ ಹೋದ ಮಾತೃಭೂಮಿಯನ್ನು ಉದ್ಧಾರ ಮಾಡಿದ ಹರಿಹರನಿಗೂ ಆತನ ವಿಜಯನಗರ ಸಾಮ್ರಾಜ್ಯಕ್ಕೂ ವರಾಹ ಲಾಂಛನವೆ ಸ್ಥಿರವಾದ ರಾಜಮುದ್ರೆಯಾಗಿ ಶೋಭಿಸಿತು. **ವರಾಹ**

**ಚಿಹ್ನಾಂಕಿತವೂ 'ಶ್ರೀವಿರೂಪಾಕ್ಷ' ಎಂಬ ಶುಭಾಕ್ಷರಗಳಿಂದ ಮುದ್ರಿತವೂ ಆದ ವಿಜಯನಗರದ ವೀರಶಾಸನವು** ಎಲ್ಲಕಡೆ ಯಲ್ಲಿ ತನ್ನ ಪ್ರಭಾವವನ್ನು ಬೀರತೊಡಗಿತು.

ಶತ್ರುಗಳನ್ನು ನಿರ್ದಾಲನ ಮಾಡಿದುದರಿಂದ ಹರಿಹರನಿಗೆ **'ಅರಿ ರಾಯ ವಿಭಾಡ'** ಎಂಬ ಬಿರುದು ಅನ್ವರ್ಥಕವಾಯಿತು. ಹಿಂದು ಜನಾಂಗವನ್ನು, ಹಿಂದು ಅರಸರನ್ನು ಸಂರಕ್ಷಿಸಿದ ಆತನಿಗೆ **'ಹಿಂದು ರಾಯ ಸುರತ್ರಾಣ'** (ದೇವೇಂದ್ರನಂತೆ ಹಿಂದು ಅರಸರನ್ನು ಕಾಪಿಡು-ವವನು) ಎಂಬ ಬಿರುದು ಸಾರ್ಥಕವಾಯಿತು. ತಾನು ಹೂಡಿದ ವೀರ ಸಂಕಲ್ಪವನ್ನು ಈಡೇರಿಸಿ, ಕಠೋರವಾದ ತನ್ನ ಪ್ರತಿಜ್ಞೆಯನ್ನು ಪೂರ್ಣ ಮಾಡಿ ಕೃತಾರ್ಥನಾದ ಆತನಿಗೆ **'ಭಾಷೆಗೆ-ತಪ್ಪುವ-ರಾಯರ-ಗಂಡ'** ಎಂಬ ಬಿರುದು ತಕ್ಕುದಾಯಿತು. ತುಂಗಭದ್ರೆಯ ದಕ್ಷಿಣದ ಭೂಭಾಗ-ವನ್ನೆಲ್ಲ ಸ್ಥೂಲವಾಗಿ ವಶಪಡಿಸಿಕೊಂಡ ಆತನಿಗೆ **'ಪೂರ್ವ-ಪಶ್ಚಿಮ-ದಕ್ಷಿಣ-ಸಮುದ್ರಾಧಿಪತಿ'** ಎಂಬ ಬಿರುದು ಯಥಾರ್ಥವಾಯಿತು. ಹೀಗೆ ಸರ್ವತಂತ್ರ ಸ್ವತಂತ್ರನಾದ ಚಕ್ರಾಧಿಪತಿಯಾಗಿದ್ದರೂ ಹರಿಹರನೂ ಬಳಿಕ ಆಳಿದ ಬುಕ್ಕರಾಯನೂ ಪ್ರಾಯಿಕವಾಗಿ **'ಮಹಾಮಂಡಲೇ-ಶ್ವರ'** ಎಂಬ ಬಿರುದನ್ನೆ ಧರಿಸುವುದರಲ್ಲಿ ಧನ್ಯತೆಯನ್ನು ತಿಳಿದರಾಗಿ ಕಾಣುತ್ತದೆ. ಹೊಯ್ಸಳ ವೀರಬಲ್ಲಾಳ ಒಡೆಯನ ಪ್ರೇರಣೆಯಿಂದ ಹರಿಹರ ಬಂಧುಗಳು ಸ್ವರಾಜ್ಯದ ಸ್ಫೂರ್ತಿ—ಶಕ್ತಿ—ಅಭ್ಯುದಯಗಳನ್ನು ಪಡೆದರು. ಒಮ್ಮೆ ಆತನ ಅಂಕಿತತ್ವದ ಸೂಚಕವಾದ 'ಮಹಾಮಂಡ-ಲೇಶ್ವರ' ಎಂಬ ಪದವಿಯನ್ನು ಅವರು ಮುಂದೆ ಆತನೂ ಆತನ ವಂಶವೂ ಅಳಿದು ಹೋದರೂ ಹೊಯ್ಸಳ ಸಾಮ್ರಾಜ್ಯದ ಮತ್ತು ವೀರಬಲ್ಲಾಳ-ರಾಯನ ಉಪಕಾರದ ಸ್ಮಾರಕರೂಪವಾಗಿ ಆದರದಿಂದ ಧರಿಸಿದರು. ಇದರಿಂದ ಅವರಿಗೆ ಹೀನತ್ವವಿದೆಯೆ ? ಇಲ್ಲಿ ಆ ಪದವಿಯು ಅವರಿಗೆ ಅಧೀನತ್ವಸೂಚಕವಾಗದೆ ಗೌರವಾಸ್ಪದವಾಗಿಯೆ ಒಪ್ಪಿತು. ಇದೇ ಅಭಿಪ್ರಾಯದಿಂದಲೇ ಈ ಸಂಗಮ ಮನೆತನದ ಮುಂದಿನ ಕೆಲವು ಅರ-ಸರೂ ಈ ಪದವಿಯನ್ನು ಆಗಾಗ ಧರಿಸಿದುದಾಗಿ ಕಾಣಬರುತ್ತದೆ. [೬]

---

೬. Heras, p. 113.



ವಿಜಯನಗರದ ರಾಜಮುದ್ರೆ—ವರಾಹಲಾಂಛನ.

ಇಮ್ಮಡಿ ಹರಿಹರನ ಗದುಗಿನ ತಾಮ್ರಶಾಸನ;

ಶಾಲಿವಾಹನ ಶಕ ೧೩೦೧.

(ಮೂಲದಷ್ಟು)

'ಶ್ರೀ ವಿರೂಪಾಕ್ಷ'

ಸು. ೩೫೦ ವರ್ಷಗಳ ವರೆಗೆ ವಿಜಯನಗರದ ರಾಜಶಾಸನಗಳಲ್ಲಿ ಮೊರೆದ

ವಿಜಯನಗರ ಸಾಮ್ರಾಜ್ಯದ ಅಂಕಿತವು.

ಇಮ್ಮಡಿ ಹರಿಹರನ ಗದುಗಿನ ತಾಮ್ರಶಾಸನ;

ಶಾಲಿವಾಹನ ಶಕ ೧೩೦೧.

(ಪ್ರಮಾಣ ಮೂಲದ $\frac{3}{4}$ ದಷ್ಟು)

ತುಂಗಭದ್ರೆಯ ದಕ್ಷಿಣ ತೀರದಲ್ಲಿ ನೆಲೆಸಿದ ವಿಜಯನಗರಿಯು ಹರಿಹರನ ರಾಜಧಾನಿಯ ಸ್ಥಳವಾಗಿದ್ದಿತು. ಹಿಂದಿನ 'ವಿಲಾಸ'ದಲ್ಲಿ ಸೂಚಿಸಿದಂತೆ ಇದಕ್ಕೆ ಹೊಸಪಟ್ಟಣವೆಂದೂ ವಿದ್ಯಾನಗರವೆಂದೂ ಸಹೇತುಕವಾದ ಹೆಸರುಗಳು ಬಳಕೆಯಲ್ಲಿದ್ದುವು. ಆನೇಗುಂದಿಯು ಭದ್ರವಾದ ಕೋಟೆಯು ಈ ರಾಜಧಾನಿಯ ಉತ್ತರವೋರೆಯಾಗಿದ್ದಿತು. ಇದು ಕುಂಜರಕೋಣ, ಹಸ್ತಿನಿ, ಹಸ್ತಿನಾವತಿ ಎಂಬ ಪರ್ಯಾಯ ನಾಮಗಳಿಂದ ಕರೆಯಲ್ಪಟ್ಟಿದೆ. ಶ್ರೀ ವಿರೂಪಾಕ್ಷನ ಸನ್ನಿಧಾನದಿಂದ ವಿರಾಜಿಸುವ ಹಂಪೆಯು ಈ ರಾಜಧಾನಿಯ ಒಂದು ಭಾಗವಾಗಿದ್ದಿತು. ಹೀಗಿರುವುದರಿಂದ, ಹರಿಹರನ ಮತ್ತು ಮುಂದಿನ ಕೆಲವು ಆಳಿಕೆಗಳಲ್ಲಿ ಬೇರೆ ಬೇರೆಯಾಗಿ ಈ ಎಲ್ಲ ಹೆಸರುಗಳಿಂದಲೂ ಒಮ್ಮೊಮ್ಮೆ ಹಂಪೆ-ಹಸ್ತಿನಾವತಿ, ಹೊಸ-ಹಂಪೆಯ-ಪಟ್ಟಣ ಮುಂತಾದ ಜೋಡು ಹೆಸರುಗಳಿಂದಲೂ ಈ ಸ್ಥಳವು ನಿರ್ದೇಶಿಸಲಾಗಿದೆ.[೭] ಬರಬರುತ್ತ ಈ ವಿಜಯನಗರ ಹೊಸಪಟ್ಟಣದ ಪ್ರಾಧಾನ್ಯವೂ ವೈಭವವೂ ಬೆಳೆಯುತ್ತ ಹೋಗಿ, ಈ ಹೆಸರುಗಳೆಲ್ಲ ಹಿಂದೆ ಬಿದ್ದು ವಿಜಯನಗರವೆಂಬ ಹೆಸರೆ ಸ್ಥಿರವಾಗಿ ನಿಂತುಕೊಂಡಿತು.

ಹರಿಹರನ ತಮ್ಮನಾದ ಮಹಾಮಂಡಲೇಶ್ವರ ಬುಕ್ಕರಾಯನು ಯುವರಾಜನೆನಿಸಿ ಹರಿಹರನ ಆಳಿಕೆಯಲ್ಲಿ ಆತನಿಗೆ ಪೂರ್ಣವಾಗಿ ನೆರವಾದನು. ಮಹಾಮಂಡಲೇಶ್ವರ ಕಂಪಣ್ಣನು ಆಂಧ್ರ ಸೀಮೆಯಲ್ಲಿ ಉದಯಗಿರಿರಾಜ್ಯಕ್ಕೆ (ನೆಲ್ಲೂರು, ಕಡಪಾ ಜಿಲ್ಲೆಗಳು) ಒಡೆಯನಾಗಿದ್ದನು. ಈತನಿಂದ ವಿಜಯನಗರರಾಜ್ಯವು ಪೂರ್ವಸಮುದ್ರದ ವರೆಗೆ ವಿಸ್ತಾರವಾಯಿತು. ವಿಕ್ರಮಸಿಂಹಪುರವು (ನೆಲ್ಲೂರು) ಕಂಪಣ್ಣನ ರಾಜಧಾನಿಯಾಗಿತ್ತು. ಕಂಪಣ್ಣನ ತರುವಾಯ (೧೩೫೫) ಆತನ ಮಗನಾದ (ಇಮ್ಮಡಿ) ಸಂಗಮನು ಉದಯಗಿರಿ ರಾಜ್ಯಕ್ಕೆ ಒಡೆಯನಾದನು. ಈ ಕಾಲದಲ್ಲಿ ಸಾಯಣಾಚಾರ್ಯರು ಸಂಗಮನ ಮಂತ್ರಿಗಳೂ ಪಾಲಕರೂ ಆಗಿದ್ದರು. ಯುವರಾಜನಾದ ಬುಕ್ಕನು ಹರಿಹರನ

೭. Ibid, p. 57.

ಜೊತೆಯಲ್ಲಿ ಸಮರಾಜನೆನಿಸಿ ದೋರಸಮುದ್ರದ ಸಡುನಾಡಿನಲ್ಲಿ ವಿಜಯನಗರದ ಪ್ರಭುತ್ವವನ್ನು ನೆಲೆಗೊಳಿಸಿದನು.

ಮಾರಪ್ಪನು ಪಶ್ಚಿಮದಲ್ಲಿ ಅರಗ (ಮಲೆ) ರಾಜ್ಯಕ್ಕೆ ಒಡೆಯನಾಗಿ ವಿಜಯನಗರಸಾಮ್ರಾಜ್ಯದ ಮೇರೆಯನ್ನು ಪಶ್ಚಿಮಸಮುದ್ರದ ವರೆಗೆ ಸ್ಥಿರವಾಗಿ ನಿಲ್ಲಿಸಿದನು. ಬನವಾಸಿ, ಹಯ್ವೆ (ಉತ್ತರ ಕನ್ನಡ ಜಿಲ್ಲೆ) ಮುಂತಾದ ಪ್ರದೇಶದಲ್ಲಿ ಈತನ ಅಧಿಕಾರವು ಹಬ್ಬಿತ್ತು. ಚಂದ್ರಗುಪ್ತಿ (ಚಂದ್ರಗುತ್ತಿ) ಯು ಈತನ ರಾಜಧಾನಿಯಾಗಿತ್ತು. ಸುವಿಖ್ಯಾತ ಪಂಡಿತನೂ ಸೇನಾನಿಯೂ ಆದ ಮಾದರಸ ಅಥವಾ ಚೌಂಡ ಮಾಧವನು ಈತನ ಮಂತ್ರಿಯಾಗಿದ್ದನು. ಮಾಧವನಿಗೆ **ಉಪನಿಷನ್ಮಾರ್ಗಪ್ರತಿಷ್ಠಾಗುರು** ಎಂಬ ಅನ್ವರ್ಥಕವಾದ ಬಿರುದು ಪ್ರಾಪ್ತವಾಯಿತು. ಈತನು ಉಜ್ವಲ ಶಿವಭಕ್ತನಾಗಿದ್ದನು. ಮಾರಪ್ಪನು ಬುಕ್ಕರಾಯನ ಆಳಿಕೆಯಲ್ಲಿ ೧೩೬೭ರ ವರೆಗೆ ಬಾಳಿದನು ಎಂದು ತೋರುತ್ತದೆ.[೮] ಈ ಮೂವರೂ ತಮ್ಮಂದಿರು ಹರಿಹರನ ಸಾಮ್ರಾಜ್ಯಸ್ಥಾಪನೆಯ ಗೌರವದಲ್ಲಿ ತಾವಾದರೂ ಪಾಲುಗಾರರಾಗಿರುವೆವು ಎಂದು ಸೂಚಿಸುತ್ತ, 'ಅರಿರಾಯ ವಿಭಾಡ' ಮುಂತಾದ ವಿಶಿಷ್ಟಸನ್ಮಾನಸೂಚಕವಾದ ಆತನ ಬಿರುದುಗಳನ್ನು ಆಗಾಗ ಎತ್ತಿಕೊಂಡರು. ಈ ಬಂಧುಗಳಲ್ಲದೆ ಇವರ ಮಕ್ಕಳೂ ಇತರ ಆಪ್ತೇಷ್ಟರೂ ಬೇರೆಬೇರೆ ಕಡೆಯಲ್ಲಿ ಚಿಕ್ಕ ದೊಡ್ಡ ನಾಡುಗಳ ಅಧಿಕಾರಿಗಳಾಗಿದ್ದರು.

ಕಾಳಾಮುಖರೆಂಬ ಶೈವ ಪಂಗಡಕ್ಕೆ ಸೇರಿದ ಕಾಶೀವಿಲಾಸ ಕ್ರಿಯಾಶಕ್ತಿ ಆಚಾರ್ಯರು ಹರಿಹರನಿಗೂ ಆತನ ಬಂಧುಗಳಿಗೂ ರಾಜಗುರುಗಳಾಗಿದ್ದರು. ಹರಿಹರನಿಗೂ ಆತನ ಬಂಧುಗಳಿಗೂ ಶೃಂಗೇರಿಯ ಜಗದ್ಗುರುಗಳಲ್ಲಿ ಅತಿಶಯವಾದ ಆದರವಿದ್ದಿತು. ಅವರಿಂದ ಇವರ ರಾಜ್ಯಕಾರ್ಯಕ್ಕೆ ಆಧ್ಯಾತ್ಮಿಕ ಬೆಂಬಲವಲ್ಲದೆ ಹಲವು ಬಗೆಯ ವ್ಯಾವಹಾರಿಕ ಸೌಕರ್ಯಗಳೂ ಉಂಟಾದುವು. ಈ ಕಾಲದಲ್ಲಿ ವಿದ್ಯಾತೀರ್ಥ ಮುನಿಗಳು ಶೃಂಗೇರಿಯ ಧರ್ಮಸಿಂಹಾಸನವನ್ನು ಅಲಂಕರಿಸಿದ್ದರು.

---

೮. Ibid, pp. 98-101.

ದಕ್ಷಿಣ ಭಾರತದ ದಕ್ಷಿಣದ ಕೆಲವು ಪ್ರದೇಶಗಳು ಹರಿಹರನ ಶಾಸನಕ್ಕೆ ಒಳಪಡಲಿಲ್ಲ. ಮದುರೆಯ ಮಹಮ್ಮದೀಯ ರಾಜ್ಯವು ಸ್ವತಂತ್ರವಾಗಿ ಉಳಿದುಕೊಂಡಿತು. ಚೋಳಮಂಡಲದ ಕೆಲವು ನಾಯಕರು ಹರಿಹರನ ಆಧಿಪತ್ಯವನ್ನು ಒಪ್ಪಿಕೊಳ್ಳಲಿಲ್ಲ. ಇವರನ್ನು ದಂಡಿಸಿ ದಕ್ಷಿಣ ಪ್ರಾಂತದಲ್ಲಿ ವಿಜಯನಗರಸಾಮ್ರಾಜ್ಯದ ಅಧಿಕಾರವನ್ನು ಅಳವಡಿಸುವ ಕಾರ್ಯವನ್ನು ಮುಂದೆ ಬುಕ್ಕರಾಯನು ಪೂರ್ಣಗೊಳಿಸಿದನು.

ಸುಮಾರು ಹದಿನೈದು ವರ್ಷಗಳವರೆಗೆ ಹೋರಾಡಿ ವಿಜಯನಗರಸಾಮ್ರಾಜ್ಯವನ್ನು ಸ್ಥಾಪಿಸಿ, ವಿಜಯನಗರದ ಪ್ರಥಮ ಸಮ್ರಾಜನೆಂಬ ಕೀರ್ತಿಭಾಜನನಾಗಿ, ಹತ್ತು ವರ್ಷಗಳವರೆಗೆ ಯಶಸ್ವಿಯಾಗಿ ರಾಜ್ಯಭಾರವನ್ನು ಮಾಡಿದ ಹರಿಹರನು ೧೩೫೬ರಲ್ಲಿ ಜೀವನಯಾತ್ರೆಯನ್ನು ಮುಗಿಸಿದನು. ಕಂಪಣ್ಣನು ಆತನಿಗಿಂತ ಮುಂಚೆಯೆ ಕಾಲಾಧೀನನಾಗಿದ್ದುದರಿಂದ ಆತನ ತರುವಾಯ ಬುಕ್ಕರಾಯನು ವಿಜಯನಗರಸಾಮ್ರಾಜ್ಯಕ್ಕೆ ಒಡೆಯನಾದನು.

---

## ೨. ಬುಕ್ಕರಾಯ (೧೩೫೬-೭೭)

ಮೊದಲಿನಿಂದಲೂ ಅಣ್ಣ ಹರಿಹರರಾಯನ ಸ್ವರಾಜ್ಯಸ್ಥಾಪನೆಯಲ್ಲಿಯೂ ರಾಜ್ಯಶಾಸನದಲ್ಲಿಯೂ ಸರಿಸಮಾನತೆಯಿಂದ ಸಹಾಯಕನಾಗಿದ್ದ ವೀರಪುಂಗವನಾದ ಬುಕ್ಕರಾಯನು ರಾಜ್ಯಸೂತ್ರಗಳನ್ನು ಕೈಕೊಳ್ಳಲು ವಿಜಯನಗರಸಾಮ್ರಾಜ್ಯರಥವು ಶೀಘ್ರಗತಿಯಿಂದ ಮುಂದುವರಿಯಿತು. ರಾಜಕೀಯ ದೃಷ್ಟಿಯಿಂದ ಆಯಕಟ್ಟಿನ ಸ್ಥಳವಾಗಿದ್ದ ವಿಜಯನಗರವನ್ನು ಬುಕ್ಕರಾಯನು ತನ್ನ ಸ್ಥಿರವಾದ ರಾಜಧಾನಿಯನ್ನು ಮಾಡಿಕೊಂಡು ರತ್ನಸಿಂಹಾಸನಾರೂಢನಾಗಿ ಆಳತೊಡಗಿದನು.[೯] ರಾಯನು ಮೊದಲಿನ ಮೂರು ನಾಲ್ಕು ವರ್ಷಗಳಲ್ಲಿ ಹೊಸ

---

೯. E. C. XII, Pavagada, 74.

ಸಾಮ್ರಾಜ್ಯಕ್ಕೆ ಸಹಜವಾದ ಅಲ್ಪ ಸ್ವಲ್ಪ ತೊಂದರೆತಿಕ್ಕಾಟಗಳನ್ನು ನಂದಿಸಿ ಸಾಮ್ರಾಜ್ಯದ ಎಲ್ಲ ಭಾಗಗಳಲ್ಲಿ ತನ್ನ ಅಧಿಕಾರವನ್ನು ಸ್ಥಿರವಾಗಿ ನೆಲೆಗೊಳಿಸಿದನು. ಅಲ್ಲಲ್ಲಿ ಯೋಗ್ಯರಾದ ಚಿಕ್ಕದೊಡ್ಡ ಮಾಂಡಲಿಕ ಅರಸರನ್ನೂ ಅಧಿಕಾರಿಗಳನ್ನೂ ನೇಮಿಸಿ ಸುಯಂತ್ರಿತವಾದ ರಾಜ್ಯವ್ಯವಸ್ಥೆಯನ್ನು ಪ್ರಸ್ಥಾಪಿಸಿದನು. ಬಹಮನೀರಾಜ್ಯದ ಮೂಲಕ ಕೃಷ್ಣೆಯ ಉತ್ತರಕ್ಕೆ ಮಾತ್ರ ಹೆಚ್ಚಾಗಿ ರಾಜ್ಯವನ್ನು ವಿಸ್ತಾರವಾಡಲು ಆಸುವಿರಲಿಲ್ಲ.

ಬಳಿಕ ಬಲಗೊಂಡ ಬುಕ್ಕರಾಯನು ವರಂಗಲ್ಲಿನ ವಿನಾಯುಕ ದೇವನನ್ನು ಕೂಡಿಕೊಂಡು ಕಲಬುರ್ಗಿಯ ಸುಲ್ತಾನ ಮುಹಮ್ಮದ ಶಹನಿಗೆ ಆತನು ಆಕ್ರಮಿಸಿಕೊಂಡ ಕೆಲ ಪ್ರದೇಶಗಳನ್ನು ಬಿಟ್ಟುಬಿಡುವುದಾಗಿ ಕೇಳಿದನು (೧೩೫೮). ಶಹನು ಅದಕ್ಕೆ ಒಪ್ಪಲಿಲ್ಲ. ಸಂಗ್ರಾಮವು ಆರಂಭವಾಯಿತು. ಶಹನು ವರಂಗಲ್ಲ ಮೇಲೆ ಏರಾಡಿ ಸುಲಿಗೆಯನ್ನು ಆರಂಭಿಸಿದನು. ವಿನಾಯುಕದೇವನು ತಪ್ಪುದಂಡವನ್ನು ತೆರಲು, ಶಹನು ಹಿಂದಕ್ಕೆ ತಿರುಗಿದನು. ಮುಂದೆ ಕೆಲ ದಿವಸಗಳಲ್ಲಿಯೆ ವಿನಾಯುಕ ದೇವನು ತನಗೆ ಅಪಮಾನವನ್ನು ಮಾಡಿದನು,ಎಂಬ ನೆವವನ್ನು ಮುಂದು ಮಾಡಿ ಮುಹಮ್ಮದಶಹನು ಮತ್ತೆ ವರಂಗಲ್ಲ ಮೇಲೆ ನುಗ್ಗಿದನು. ರಣಾಂಗಣದಲ್ಲಿ ವಿನಾಯುಕದೇವನು ಮಡಿದನು. ಆದರೂ ವರಂಗಲ್ ಸೈನ್ಯವು ಎದೆಗುಂದದೆ ರೊಚ್ಚಿಗೆದ್ದು ಶಹನ ದಂಡಿನ ಮೇಲೆ ಮುಗಿಬಿದ್ದು ಹಗೆಯನ್ನು ಬೆನ್ನಟ್ಟಿತು. ಬಹು ಜನರು ಸತ್ತರು.ಅದರ ಹಣಿತಕ್ಕೆ ಶಹನ ಸೈನ್ಯವು ಜರ್ಜರಿತವಾಗಿ ಶಹನಿಗೆ ಗಾಯುವಾಯಿತು.

ಹಿಂದುಗಳ ಈ ವಿಜಯದಿಂದ ಉತ್ಸಾಹಿತನಾದ ಬುಕ್ಕರಾಯನು ವರಂಗಲ್ ರಾಜಪುತ್ರನೊಂದಿಗೆ ದಿಲ್ಲಿಯ ಸಮ್ರಾಜನಾದ ಫಿರೋಜಶಹನಲ್ಲಿಗೆ ರಾಯಭಾರಿಯನ್ನು ಕಳುಹಿ, ಕಲಬುರ್ಗಿಯ 'ಸುಲ್ತಾನನನ್ನು ಸದೆಯಲು ತಮಗೆ ಬೆಂಬಲವಾಗಬೇಕೆಂದು ಕೇಳಿದನು. ತನ್ನ ತೊಡಕುಗಳಲ್ಲಿಯೆ ತೊಳಲಾಡುತ್ತಿರುವ ಫಿರೋಜಶಹನಿಂದ ಯಾವ ನೆರವೂ ದೊರೆಯಲಿಲ್ಲ. ಇಷ್ಟರಲ್ಲಿ ಚೇತರಿಸಿಕೊಂಡ ಮುಹಮ್ಮದಶಹನು

ಮತ್ತೆ ಗೋವಳಕೊಂಡ, ವರಂಗಲ್ಲುಗಳ ಮೇಲೆ ದಂಡಯಾತ್ರೆಯನ್ನು ಮಾಡಿದನು. ಗೋವಳಕೊಂಡವು ಆತನಿಗೆ ಸ್ವಾಧೀನವಾಯಿತು.

ಗೋವಳಕೊಂಡದ ವಿಜಯದಿಂದ ಹುರಿದುಂಬಿದ ಮುಹಮ್ಮದ ಶಹನು ಮುಂದೆ ನುಗ್ಗುತ್ತ ವಿಜಯನಗರದೊಡನೆ ಸಮರವನ್ನು ಹೂಡಿದನು (೧೩೬೬). ಶಹನು ವಿಜಯನಗರವನ್ನು ಕೆಣಕಿದುದು ಹೀಗೆ: ಒಂದು ದಿನ ವಿಲಾಸದಲ್ಲಿ ಕಾಲಕಳೆಯುತ್ತಿರುವ ಶಹನು ಸಂಗೀತವನ್ನು ಕೇಳಿ ಬಹು ಸಂತೋಷದಿಂದ ಮೈಮರೆತು ಮೇಳದವರಿಗೆ ಸಂಭಾವನೆಯಾಗಿ ವಿಜಯನಗರದ ಬೊಕ್ಕಸದ ಮೇಲೆ ಅಧಿಕಾರಪತ್ರವನ್ನು (ಹುಂಡಿಯನ್ನು) ಕಳುಹಿದನು. ಬುಕ್ಕರಾಯನು ಈ ಓಲೆತಂದವನನ್ನು ಅವಮಾನಗೊಳಿಸಿ ಕತ್ತೆಯ ಮೇಲೆ ಮೆರೆಸಿ ತಿರುಗಿ ಕಳುಹಿದನು. ಹೀಗೆ ಮದಾಂಧನಾಗಿ ವಿಜಯನಗರವನ್ನು ಅಪಮಾನಗೊಳಿಸಿದ ಶಹನ ಕೊಬ್ಬನ್ನು ಅಡಗಿಸಲು ಬುಕ್ಕರಾಯನು ದೊಡ್ಡ ಸೈನ್ಯವನ್ನು ಸಜ್ಜುಗೊಳಿಸಿದನು. ಆದವಾನಿಕೋಟೆಯತ್ತ ಪಯಣಮಾಡಿ ವೈರಿಗಳ ಪ್ರದೇಶವನ್ನು ಉಧ್ವಸ್ತಮಾಡತೊಡಗಿದನು. ಮುದಗಲ್‌ಕೋಟೆಯನ್ನು ಕಸಿದು ಶತ್ರುಪಕ್ಷದವರನ್ನೆಲ್ಲ ತುಂಡರಿಸಿದನು. ಒಬ್ಬಾನೊಬ್ಬ ದಂಡಾಳು ಜೀವದಿಂದ ಪಾರಾಗಿ ಈ ಸುದ್ದಿಯನ್ನು ಕಲಬುರ್ಗಿಗೆ ಮುಟ್ಟಿಸಿದನು. ಸಂತಪ್ತನಾದ ಶಹನು ವಿಜಯನಗರದ ಮೇಲೆ ಹಲ್ಲು ಕಟೆಯುತ್ತ ಕೈಗೆ ಸಿಕ್ಕವರನ್ನು ಕೊಲ್ಲುತ್ತ ರಾಜಧಾನಿಯ ಮೇಲೆ ಏರಿ ಬಂದನು.

ಬುಕ್ಕರಾಯನು ಆದವಾನಿಯ ಸಂರಕ್ಷಣೆಗೆ ತನ್ನ ಅಳಿಯನನ್ನು ನೇಮಿಸಿ ರಾಜಧಾನಿಯತ್ತ ತೆರಳಿದನು. ಒಂದು ತಿಂಗಳ ಪರೆಗೆ ವಿಜಯನಗರಕ್ಕೆ ಮುತ್ತಿಗೆ ಬಿದ್ದಿತು. ಶಹನು ವಿಜಯನಗರದ ಇದಿರುಹೊಡೆತಗಳನ್ನು ತಾಳಲಾರದೆ ಮುತ್ತಿಗೆಯನ್ನು ಕಿತ್ತುಕೊಂಡು ಪ್ರಯಾಣದ ನಟನೆಯನ್ನು ಮಾಡಿದನು. ರಾತ್ರಿಯಲ್ಲಿ ವಿಜಯನಗರದವರು ಎಚ್ಚರಗೇಡಿಗಳಾಗಿರುವುದನ್ನು ಕಂಡು ಅವರ ಮೇಲೆ ಬಂದೆರಗಿ ಕೊಲೆಯ ಕೋಲಾಹಲವನ್ನೆಬ್ಬಿಸಿದನು. ಒಟ್ಟಾರೆ ಈ ಎಲ್ಲ ಕಡಿದಾಟಗಳಲ್ಲಿ ಅಪರಿಮಿತವಾಗಿ ಪ್ರಾಣಹತ್ಯೆಯಾಯಿತು. ಶಹನ ಜನರು ಯುದ್ಧದಲ್ಲಿ

ಸೇರದ ಸಾಮಾನ್ಯ ಪ್ರಜಾಜನರನ್ನೂ ಹೆಂಗಸರುಕೂಸುಗಳನ್ನೂ ಕ್ರೂರತನದಿಂದ ಸಂಹರಿಸಿದರು. ಇದನ್ನು ಕಂಡು ಬುಕ್ಕರಾಯನು ಮರಮರನೆ ಮರುಗಿ ಇನ್ನು ಮುಂದೆ ನಿರಪರಾಧಿಗಳೂ ಅಶಸ್ತ್ರಧಾರಿಗಳೂ ಆದ ಜನರನ್ನು ಹಾಗೂ ಸೆರೆಯಾಳುಗಳನ್ನು ಕೊಲ್ಲಲಾಗದು ಎಂದು ಶಹನಿಗೆ ಪ್ರಾರ್ಥಿಸಿದನು. ಶಹನು ಅದನ್ನು ಒಪ್ಪಿಕೊಂಡನು. ಮುಹಮ್ಮದಶಹನು ೧೩೭೫ರಲ್ಲಿ ಮಡಿದುದರಿಂದ ಈ ಸಮರಕ್ಕೆ ಕೆಲ ಕಾಲ ವಿರಾಮವು ಉಂಟಾಯಿತು.

ಮುಹಮ್ಮದಶಹನ ತರುವಾಯ ಬಹಮನೀರಾಜ್ಯಕ್ಕೆ ಒಡೆಯನಾದ ಮುಜಾಹಿದಶಹನು ವಿಜಯನಗರದೊಡನೆ ಜಗಳಕ್ಕೆ ಕಾಲಕೆದರಿದನು. ಕೃಷ್ಣಾ-ತುಂಗಭದ್ರೆಯ ನಡುವಣ ಪ್ರದೇಶದಲ್ಲಿ ಬಹಮನೀರಾಜ್ಯದ ಮತ್ತು ವಿಜಯನಗರದ ಗಡಿಗಳು ಚಾಚಿದ್ದುವು. ಪಶ್ಚಿಮ ಸಮುದ್ರದ ದಂಡೆಯಿಂದ ವಿಜಯನಗರಕ್ಕೆ ಬರುವ ಮಾರ್ಗದಲ್ಲಿ ಬಂಕಾಪುರವು ಆಯಕಟ್ಟಿನ ಸ್ಥಳವಾಗಿದ್ದಿತು. ಇದು ವಿಜಯನಗರದ ವಶದಲ್ಲಿದ್ದು ಇದರಿಂದ ವಿಜಯನಗರದ ವ್ಯಾಪಾರಕ್ಕೆ ಸಂರಕ್ಷಣೆಯಾಗುತ್ತಿತ್ತು. ಮುಜಾಹಿದನು ಬಂಕಾಪುರದ ಮೇಲೆ ಕಣ್ಣಿಟ್ಟಿದ್ದನು. 'ಬಂಕಾಪುರವನ್ನು ನನಗೆ ಒಪ್ಪಿಸಬೇಕು, ತುಂಗಭದ್ರೆಯ ಉತ್ತರ ಪ್ರದೇಶಕ್ಕೆ ನಿಮ್ಮ ಅಧಿಕಾರವನ್ನು ಹೇಳಕೂಡದು,' ಎಂದು ಆತನು ಬುಕ್ಕರಾಯನಿಗೆ ತಿಳುಹಿದನು. 'ರಾಯಚೂರು ಮುದಗಲ್ ಕೋಟೆಗಳು ಎಂದಿನಿಂದಲೂ ಆನೆಗುಂದಿಯ ಅರಸರವು; ಕೃಷ್ಣಾ-ತುಂಗಭದ್ರೆಗಳ ನಡುವಣ ರಾಯಚೂರು ಪ್ರಾಂತದ ಮೇಲೆ ನಿಮ್ಮ ಅಧಿಕಾರವಿಲ್ಲ; ಆದುದರಿಂದ ನೀವು ಅದನ್ನು ಬಿಟ್ಟು ತೆರಳಬೇಕು; ಕೃಷ್ಣೆಯ ದಕ್ಷಿಣಕ್ಕೆ ಕಾಲಿಡಕೂಡದು,' ಎಂದು ಬುಕ್ಕರಾಯನು ಶಹನಿಗೆ ಪ್ರತ್ಯುತ್ತರವನ್ನು ಕಳುಹಿದನು.

ಮುಜಾಹಿದಶಹನು ಯುದ್ಧವನ್ನು ಸಾರಿ ಆದವಾನಿಯನ್ನು ಮುತ್ತಿ ವಿಜಯನಗರದ ಮೇಲೆ ದಂಡೆತ್ತಿ ಬಂದನು. ಬುಕ್ಕರಾಯನು ಆತನನ್ನು ಇದಿರಿಸದೆ ಸೊಂಡೂರು ಗುಡ್ಡದತ್ತ ಸರಿದನು. ಉಬ್ಬಿನಿಂದ

ವ್ಮೈಮುರೆತ ಶಹನು ವಿಜಯನಗರದ ಕೋಟೆಯ ಮೇಲೆ ಅಪ್ಪಳಿಸಿದನು. ಅಷ್ಟರಲ್ಲಿ ಬುಕ್ಕರಾಯನು ಮರಳಿ ಬಂದು ಗಿಡಗದಂತೆ ಅವನ ಮೇಲೆ ಎರಗಿದನು. ಈ ಹೊತ್ತಿಗೆ ಮಾರಪ್ಪನ ದಂಡೂ ವಿಜಯನಗರದ ಸಹಾಯಕ್ಕೆ ಬಂದು ಕೂಡಿತು. ಪ್ರಾಣವುಳಿಸಿಕೊಂಡು ಪಾರಾಗುವುದರಲ್ಲಿ ಶಹನಿಗೆ ಸಾಕುಸಾಕಾಯಿತು. ಆತನು ಹಿಂದೆಗೆಯುತ್ತ ಆದವಾನಿಕೋಟೆಯನ್ನು ಮುತ್ತಿದನು. ಒಂಬತ್ತು ತಿಂಗಳುಗಳ ವರೆಗೆ ಹೆಣಗಾಡಿದರೂ ಆದವಾನಿಕೋಟೆಯು ಶಹನಿಗೆ ವಶವಾಗಲಿಲ್ಲ. ಕೊನೆಗೆ ಶಹನು ತನ್ನ ರಾಜ್ಯಕ್ಕೆ ತೆರಳಿದನು. ಈ ರೀತಿಯಾಗಿ ಈ ಸಂಗ್ರಾಮವು ಒಂಬತ್ತು ವರ್ಷಗಳವರೆಗೆ (೧೩೬೬-೧೩೭೫) ನಡೆಯಿತು. ಇದರಲ್ಲಿ ಬಹಮನಿಯವರು ಚೆನ್ನಾಗಿ ಹೊಡೆತವನ್ನು ತಿಂದರು. ಮುಂದೆ ಇಪ್ಪತ್ತೊಂದು ವರ್ಷಗಳ ವರೆಗೆ ಅವರು ವಿಜಯನಗರದ ಗೊಡವೆಗೆ ಬರಲಿಲ್ಲ.[೧೦]

ಹೀಗೆ ಹೊರಹಗೆಯೊಡನೆ ಹೋರಾಟವು ನಡೆದಿರುವಾಗ ಬುಕ್ಕರಾಯನು ಒಬ್ಬ ಒಳಹಗೆಯ ಕಡೆಗೆ ಲಕ್ಷ್ಯವನ್ನು ಪೂರಯಿಸಬೇಕಾಯಿತು. ಸಂಭವರಾಯನೆಂಬಾತನು ಕಂಚೀಪ್ರದೇಶದಲ್ಲಿ ಭದ್ರವಾದ ರಾಜಗಂಭೀರ (ಪಡವೀಡು) ದುರ್ಗವನ್ನು ಆಶ್ರಯಿಸಿ ವಿಜಯನಗರಕ್ಕೆ ವಿರೋಧವಾಗಿ ವರ್ತಿಸುತ್ತಿದ್ದನು. (ಇಮ್ಮಡಿ) ಸಂಗಮನ ಪಾಲಕರಾದ ಸಾಯಣಾಚಾರ್ಯರು ಹಿಂದೊಮ್ಮೆ ಆತನನ್ನು ದಂಡಿಸಿದ್ದರು. ರಾಜಕುಮಾರ ಕಂಪಣ್ಣನು ಈ ಸಲ ಆತನ ಮೇಲೆ ದಂಡೆತ್ತಿ ಹೊರಟನು. ಈ ದಂಡಯಾತ್ರೆಯ ವೃತ್ತಾಂತವನ್ನು ಕಂಪಣ್ಣನ ಅರ್ಧಾಂಗಿಯಾದ ಗಂಗಾದೇವಿಯು 'ವೀರಕಂಪರಾಯ ಚರಿತಂ' ಎಂಬ ಸಂಸ್ಕೃತ ಕಾವ್ಯದಲ್ಲಿ ಬಣ್ಣಿಸಿರುವಳು. ಮೊದಲು ಈ ಚಂಪರಾಯ (ಸಂಭವರಾಯ) ನನ್ನು ಶಿಕ್ಷಿಸಿ ಮುಂದೆ ಮನ್ಯರಾಜರನ್ನು ಗೆದ್ದು ಅಲ್ಲಿಂದ ಮದುರೆಯ ರಾಜ್ಯವನ್ನು ಆಕ್ರಮಿಸಿದ ಯವನರನ್ನು ಇಕ್ಕಿ, ಅವರನ್ನು ದೇಶದಿಂದ ಚಿಮ್ಮಬೇಕೆಂದು ಬುಕ್ಕರಾಯನು ಕಂಪಣ್ಣನಿಗೆ ಆಣತಿಯಿ

---

೧೦. ದೀ. ಟಿ. ೬.

ತ್ತನು. ವಿಜಯನಗರದ ಸೈನ್ಯವು ಕಂಚೀರಾಜ್ಯವನ್ನು ಅಡರಿತು. ಘೀಕರವಾದ ಕದನವು ನಡೆದು ರಾಜಗಂಭೀರಕೋಟೆಯೂ ಕಂಚೀ ರಾಜಧಾನಿಯೂ ಕಂಪಣ್ಣನಿಗೆ ವಶವಾದುವು. ಕಂಚೀಪ್ರದೇಶವೆಲ್ಲ ವಿಜಯನಗರಕ್ಕೆ ಅಂಕಿತವಾಯಿತು. ಸಂಭವರಾಯನು ವಿಜಯನಗರದ ಮಾಂಡಲಿಕನಾಗಿ ಕಂಚೀರಾಜ್ಯದಲ್ಲಿ ಸ್ಥಾಪಿತನಾದನು (೧೩೬೦-೬೧).[೧೧]

ಇತ್ತ ಕಂಪಣ್ಣನು ಕಂಚಿಯ ರಾಜಕಾರಣದಲ್ಲಿ ಮಗ್ನನಾಗಿರುವಾಗ, ಅತ್ತ ಚಿದಂಬರಂ, ಶ್ರೀರಂಗಂ, ಮದುರೆ ಮುಂತಾದ ಪ್ರದೇಶಗಳಲ್ಲಿ ಮಹಮ್ಮದೀಯರು ನಡೆಸಿರುವ ದಾರುಣ ಅತ್ಯಾಚಾರದ ವರ್ತಮಾನಗಳು ಹೆಚ್ಚು ಹೆಚ್ಚಾಗಿ ಕಂಪಣ್ಣನ ಕಿವಿಗೆ ಬಂದು ತಲುಪಿದುವು. ಈ ವೈರಿಗಳ ಪುಂಡನ್ನು ಮುರಿಬಡಿಯಲು ಕಂಪಣ್ಣನು ಅತ್ತ ಹೊರಳಿದನು. ಶ್ರೀರಂಗಂದ ಮುಸಲ್ಮಾನ ಮೇಲಧಿಕಾರಿಯ ಸಮಾಚಾರವನ್ನು ತೆಗೆದುಕೊಳ್ಳಲಿಕ್ಕೆ ಕಂಪಣ್ಣನ ಕೆಚ್ಚೆದೆಯ ದಂಡನಾಯಕನಾದ ಗೋಪಣಾರ್ಯನು ಮುಂದುವರಿದನು. ಶತ್ರುಗಳು ಶ್ರೀರಂಗಂದಿಂದ ಸೋತು ಓಡಿಹೋದರು. ಬಹುಕಾಲದಿಂದ ಸ್ಥಾನಭ್ರಷ್ಟನಾಗಿ ಅಲೆದಲೆದು ತಿರುಪತಿಯಲ್ಲಿ ಅಜ್ಞಾತವಾಸವನ್ನು ಕಳೆಯುತ್ತಿದ್ದ ಶ್ರೀರಂಗನಾಥನ ಮೂರ್ತಿಯನ್ನು ಮರಳಿ ತಂದು ಶ್ರೀರಂಗಂದಲ್ಲಿ ಪ್ರತಿಷ್ಠಾಪನೆ ಮಾಡಿದರು. ಮುಂದೆ ಕಂಪಣ್ಣನು ಮದುರೆಯ ಮೇಲೆ ಏರಾಡಿ ಅದನ್ನು ವಶಪಡಿಸಿದನು (೧೩೭೧).[೧೨] ಈ ಹೊತ್ತಿನಿಂದ ಮದುರೆಯಲ್ಲಿ ಸುಮಾರು ಅರವತ್ತು ವರ್ಷಗಳ ವರೆಗೆ ಬಾಳಿದ ಸುಲ್ತಾನರ ಆಳಿಕೆಯು ಸಮಾಪ್ತಿಹೊಂದಿ, ವಿಜಯನಗರದ ಅಧಿಕಾರವು ಆರಂಭವಾಯಿತು.

ಈ ನಡುವೆ ಬೇರೊಂದು ಬಗೆಯ ಗಲಭೆಯು ವಿಜಯನಗರದ ಪ್ರಜಾಜನರಲ್ಲಿ ಉಂಟಾಗಿ ಬುಕ್ಕರಾಯನ ಸತ್ವಪರೀಕ್ಷೆಯ ಸಮಯವು ಒದಗಿತು. ವಿಜಯನಗರ ಸಾಮ್ರಾಜ್ಯದಲ್ಲಿ ಅನೇಕ ಜಾತಿ-ಮತ-ಪಂಗಡಗಳಿಗೆ ಸೇರಿದ ಜನರು ನೆಲೆಸಿದ್ದರು. ಅವರಲ್ಲಿ ಈ ಕಾಲಕ್ಕೆ ಜೈನ-

೧೧. M. V. Intr. p. 19. ೧೨. Ibid, p. 29.

ಮತ್ತು ರಾಮಾನುಜ ಈ ಮತೀಯರಲ್ಲಿ ಕಲಹವು ಉಂಟಾಗಿ ವಿಕೋಪಕ್ಕೆ ಹೋಯಿತು. ಬಲಿಷ್ಠರಾದ ರಾಮಾನುಜರಿಂದ ದುರ್ಬಲರಾದ ಜೈನರಿಗೆ ಹೆಚ್ಚು ಹೆಚ್ಚು ಹಿಂಸೆಯು ಆಗಲಾರಂಭಿಸಿತು. ಜೈನರು ಬುಕ್ಕರಾಯನಲ್ಲಿಗೆ ದೂರನ್ನೊಯ್ದರು. ರಾಯನು ಉಭಯಮತದ ಮುಂದಾಳುಗಳನ್ನು ಓಲಗಕ್ಕೆ ಕರೆಸಿದನು. ಈ ಸಭೆಗೆ ಅಂತ್ಯಜವರ್ಗಕ್ಕೆ ಸೇರಿದ ತಿರುಕುಲ, ಜಾಂಬವಕುಲ ಮೊದಲ್ಗೊಂಡು ಎಲ್ಲ ಬಗೆಯ ರಾಮಾನುಜ ಪಂಗಡದ ಪ್ರತಿನಿಧಿಗಳೂ ಪ್ರಮುಖ ಶ್ರೀವೈಷ್ಣವಾಚಾರ್ಯರೂ ಬಂದಿದ್ದರು.

ಆಗ ರಾಯನು ಜೈನರ ಕೈಯನ್ನು ಶ್ರೀವೈಷ್ಣವರ ಕೈಯಲ್ಲಿ ಕೊಟ್ಟು ಗದ್ಗದಕಂಠದಿಂದ **"ವೈಷ್ಣವದರ್ಶನಕ್ಕೆಯೂ ಜೈನದರ್ಶನಕ್ಕೆಯೂ ಭೇದವಿಲ್ಲ........ವೈಷ್ಣವರೂ ಜೈನರೂ ಒಂದು. ಭೇದವಾಗಿ ಕಾಣಲಾಗದು."** ಎಂದು ನುಡಿದು, ಜೈನರು ಎಂದಿನಂತೆ ಪಂಚಮಹಾವಾದ್ಯ, ಕಳಸ ಮುಂತಾದ ಧಾರ್ಮಿಕ ಮರ್ಯಾದೆಗಳಿಗೆ ಬಾಧ್ಯಸ್ಥರು; ಜೈನಮತದ ಹಾನಿವೃದ್ಧಿಯೆಂದರೆ, ಶ್ರೀವೈಷ್ಣವಮತದ ಹಾನಿವೃದ್ಧಿಯೆಂದು ಶ್ರೀವೈಷ್ಣವರು ಭಾವಿಸಿ, ರಾಜ್ಯದೊಳಗಿನ ಎಲ್ಲ ಜೈನಬಸದಿಗಳಲ್ಲಿ ಇದರಂತೆ ಶಾಸನಗಳನ್ನು ನಿಲ್ಲಿಸಬೇಕು; ಚಂದ್ರಸೂರ್ಯರಿರುವ ವರೆಗೆ ಜೈನಮತವನ್ನು ಸಂರಕ್ಷಿಸುವ ಹೊಣೆಯು ಶ್ರೀವೈಷ್ಣವರ ಮೇಲೆ; ಶ್ರೀವೈಷ್ಣವರೂ ಜೈನರೂ ಭಿನ್ನರಲ್ಲ, ಇಬ್ಬರ ದೇಹವೂ ಒಂದೇ; ತಿರುಪತಿಯ ಶ್ರೀವೈಷ್ಣವಾಚಾರ್ಯರು ಜೈನರ ಕರಭಾರದಿಂದ ಶ್ರವಣಬೆಳಗುಳಕ್ಷೇತ್ರದಲ್ಲಿ ಕಾವಲನ್ನಿರಿಸಿ ಜೈನಬಸದಿಗಳನ್ನು ಜೀರ್ಣೋದ್ಧಾರ ಮಾಡಬೇಕು ಮುಂತಾಗಿ ತೀರ್ಮಾನಿಸಿದನು (೧೩೬೮).[೧೩] ದಕ್ಷಿಣಭಾರತದ ಧಾರ್ಮಿಕ ಇತಿಹಾಸದಲ್ಲಿ ಅಜರಾಮರವಾದ **ಈ ಜೈನ ರಾಮಾನುಜೀಯ ಒಡಂಬಡಿಕೆಯು** ವಿಜಯನಗರದ ಅರಸರು ತಮ್ಮ ಸಾಮ್ರಾಜ್ಯದೊಳಗಿನ ಎಲ್ಲ ಧರ್ಮಮತದವರಿಗೆ ಅರ್ಪಿಸಿದ ಹಿರಿದಾದ ಅಧಿಕಾರಪತ್ರವೆ (Magna Charta) ಆಗಿದೆ.

---

೧೩. E. C. II, S. B. New Edn. No. 344.

ಅಲ್ಲದೆ ಅದೊಂದು ಉನ್ನತ ರಾಜನೀತಿಯು ಚಿರಕಾಲಿಕವಾದ ಆದರ್ಶ ವಾಗಿದೆಯೆಂದೂ ಹೇಳಬಹುದಲ್ಲವೆ ?

ಬುಕ್ಕರಾಯನ ಆಳಿಕೆಯಲ್ಲಿ ಕೃಷ್ಣೆಯಿಂದ ರಾಮೇಶ್ವರದ ವರೆಗಿನ ದಕ್ಷಿಣಭಾರತವೆಲ್ಲ ವಿಜಯನಗರ ಸಾಮ್ರಾಜ್ಯಕ್ಕೆ ಒಳಪಟ್ಟಿತು ಬುಕ್ಕ ರಾಯನು ಮದುರೆಯ ಪ್ರಾಂತದಲ್ಲಿ ಬೀಡುಬಿಟ್ಟಿದ್ದ ಮುಹಮ್ಮದೀಯ ರನ್ನು ಬಡಿದೋಡಿಸಿ ರಾಷ್ಟ್ರವನ್ನು ಪೂರ್ಣ ನಿರ್ಭಯವಾಗಿ ಮಾಡಿ ದನು. ಐವತ್ತು ಅರವತ್ತು ವರ್ಷಗಳ ಹಿಂದೆ ಅರಿಗಳ ಉಪಟಳದಿಂದ ದೇಶದಲ್ಲಿ ಅನೇಕ ದೇವಾಲಯಗಳು ಉಧ್ವಸ್ತವಾಗಿದ್ದುವು. ಎಷ್ಟೋ ಕಡೆಯಲ್ಲಿ ಧಾರ್ಮಿಕಸಮಾರಂಭಗಳು ನಿಂತುಹೋಗಿದ್ದುವು ಅವುಗಳು ಈಗ ಮತ್ತೆ ಪುನರುಜ್ಜೀವನ ಹೊಂದಿದುವು. ಹೀಗೆ ಹಿಂದು ಸಂಸ್ಕೃತಿ ಯನ್ನು ಉಳಿಸಿ ಬೆಳೆಸಿದ ಬುಕ್ಕರಾಯನಿಗೆ **'ಹಿಂದುರಾಯ ಸುರ ತ್ರಾಣ'** ಎಂಬ ಬಿರುದು ಹೆಚ್ಚು ಅನುರೂಪವಾಗಿ ವಿರಾಜಿಸಿತು

ಅಖಿಲ ದಕ್ಷಿಣಭಾರತದ ಚಕ್ರಾಧಿಪತಿಯಾದ ಬುಕ್ಕರಾಯನು ಅಣ್ಣ ಹರಿಹರರಾಯನ ಉದಾಹರಣೆಯನ್ನು ಅನುಕರಿಸಿ, ಅಪವಾದಾ- ತ್ಮಕವಾಗಿ 'ಮಹಾರಾಜಾಧಿರಾಜ' ಎಂಬ ಪದವಿಯನ್ನು ಒಂದುಬಾರಿ ಧರಿಸಿ, ಪ್ರಾಮುಖ್ಯವಾಗಿ 'ಮಹಾಮಂಡಲೇಶ್ವರ' ಎಂದೆನಿಸಿಕೊಳ್ಳುವು ದರಲ್ಲಿಯೇ ತೃಪ್ತಿಪಡೆದನು.

ಬುಕ್ಕರಾಯನ ಪ್ರಭಾವದಿಂದ ವಿಜಯನಗರಸಾಮ್ರಾಜ್ಯವು ಅಲ್ಪಾವಧಿಯಲ್ಲಿ ಘನತೆಯನ್ನು ಪಡೆದಿತು. ಈಗ ವಿಜಯನಗರವನ್ನು ಸರಿಗಟ್ಟುವ ಸಾಮ್ರಾಜ್ಯವು ಇನ್ನೊಂದು ಇರಲಿಲ್ಲ. 'ಸಾಮ್ರಾಜ್ಯದ ಬಲ, ವಿಸ್ತಾರ, ಐಶ್ವರ್ಯ ಇವುಗಳಲ್ಲಿ ಬಹಮನೀರಾಜ್ಯಕ್ಕಿಂತ ವಿಜಯ ನಗರವು ಎಷ್ಟೋ ಮಿಗಿಲಾಗಿತ್ತು. ಗೋವಾಬಂದರವು, ಬೆಳಗಾವಿಯ ಕೋಟೆಯು, ತಳಘಾಟ (ತುಳುನಾಡು) ಮೊದಲಾದ ಪಶ್ಚಿಮಸಮುದ್ರ ತೀರಪ್ರದೇಶವು ವಿಜಯನಗರದ ವಶದಲ್ಲಿ ಇದ್ದುವು. ದೇಶವು ಜನ ಸಮೃದ್ಧವಾಗಿದ್ದಿತು. ಪ್ರಜಾಜನರು ರಾಜನಿಷ್ಠರಾಗಿದ್ದರು. ಮಲ ಬಾರ, ಲಂಕೆ ಮೊದಲಾದ ದ್ವೀಪಗಳ ಅರಸರು ವಿಜಯನಗರದಲ್ಲಿ ತಮ್ಮ

ತಮ್ಮ ರಾಯಭಾರಿಗಳನ್ನು ಇರಿಸಿದ್ದರು; ಪ್ರತಿವರ್ಷ ಹೇರಳವಾದ ಕಾಣಿಕೆಗಳನ್ನು ಕಳುಹಿಸುತ್ತಿದ್ದರು' ಎಂದು ಫಿರಿಷ್ತನು ಹೇಳುವನು.[೧೪] ದೇಶವು ಸುರಕ್ಷಿತವಾದುದರಿಂದ ವ್ಯಾಪಾರಕ್ಕೆ ಉತ್ತೇಜನವು ದೊರೆತು ಉದ್ಯಮಶೀಲರಾದ ವರ್ತಕರ ಚಟುವಟಿಕೆಗಳು ಭರದಿಂದ ಮುಂದು ವರಿದುವು.

ರಾಯನು ವಿಜಯನಗರ ರಾಜಧಾನಿಯನ್ನು ಬಹು ವಿಸ್ತಾರಗೊಳಿಸಿದನು. ಕೋಟೆ-ಕೊತ್ತಳಗಳನ್ನು ಕಟ್ಟಿಸಿ ಅದನ್ನು ಹೆಚ್ಚಾಗಿ ಭದ್ರಪಡಿಸಿದನು. ಹೊಸತಾಗಿ ಏರ್ಪಡಿಸಿದ ಈ ನಗರಸುಧಾರಣೆಯಿಂದ ರಾಜಧಾನಿಗೆ ನೂತನವಾದ ಕಾಂತಿಯು ಉಂಟಾಯಿತು.

ಕಾಶೀವಿಲಾಸ ಕ್ರಿಯಾಶಕ್ತಿಗಳು ಬುಕ್ಕರಾಯನ ರಾಜಗುರುಗಳಾಗಿದ್ದರು. ಶೃಂಗೇರಿಯ ವಿದ್ಯಾತೀರ್ಥಯತಿಗಳು ರಾಯನ ಅಭಿಮಾನಾದರಗಳ ನಿಧಾನವಾಗಿದ್ದರು. ರಾಯನ ರಾಜಕೀಯ ಕಾರ್ಯಕಲಾಪಗಳಲ್ಲಿ ಇವರಿಂದ ಬಹಳ ಸಹಾಯವು ಲಭಿಸಿತು. ಇವರ ಅನುಗ್ರಹದಿಂದ ರಾಯನು ಊರ್ಜಿತನಾದನು. ಇವರ ಅನುಮತಿಯಂತೆ ರಾಯನು ವಿದ್ಯಾರಣ್ಯರನ್ನು ಕಾಶಿಯಿಂದ ಬರಮಾಡಿಕೊಂಡನು (೧೩೫೬). ಮಾಧವಾಚಾರ್ಯರು ರಾಯನ ಕುಲಗುರುವೂ ಮಂತ್ರಿಯೂ ಆಗಿದ್ದರು. ಮಾಧವಾಚಾರ್ಯರ ಅಣ್ಣಂದಿರಾದ ಸಾಯಣಾಚಾರ್ಯರು ಇಮ್ಮಡಿ ಸಂಗಮನ (ಕಂಪಣ್ಣನ ಮಗ) ಆಸ್ಥಾನದಿಂದ ಬುಕ್ಕರಾಯನ ಆಸ್ಥಾನಕ್ಕೆ ಬಂದು ಗೌರವವನ್ನು ಪಡೆದರು. ಇವರಲ್ಲದೆ ಮಾರಪ್ಪನ ಮಂತ್ರಿಯಾದ ಮಾದರಸನು, ಮುದ್ದ ದಂಡನಾಥ ಮೊದಲಾದವರು ರಾಯನ ರಾಜಕೀಯ ಮಂತ್ರಿಗಳಾಗಿದ್ದರು.

ವೇದಶಾಸ್ತ್ರಾಗಮವಿಶಾರದರೂ, ಅನೇಕ ಗ್ರಂಥಗಳ ಕರ್ತರೂ ಆದ **ಸಾಯಣಾಚಾರ್ಯ-ಮಾಧವಾಚಾರ್ಯರು** ರಾಯನ ಪ್ರೇರಣೆಯಂತೆ ನಾಲ್ಕೂ ವೇದಗಳಿಗೆ ಭಾಷ್ಯವನ್ನು ರಚಿಸುವ ಮಹಾಕಾರ್ಯವನ್ನು ಕೈಕೊಂಡರು (ಸು. ೧೩೬೦). ಈ ಕಾರ್ಯವು ಮುಂದೆ ಸುಮಾರು

೧೪. Sewell, p. 45.

ಇಪ್ಪತ್ತು ವರ್ಷಗಳ ವರೆಗೆ ನಡೆದು ಮುಂದಿನ ಆಳಿಕೆಯಲ್ಲಿ ಮುಗಿಯಿತು. ಈ ಕೆಲಸವನ್ನು ನೆರವೇರಿಸಿದವರು ಪ್ರಾಮುಖ್ಯವಾಗಿ ಸಾಯಣಾಚಾರ್ಯರೆ ಆಗಿದ್ದರೂ, ಇದಕ್ಕೆ ಪ್ರೇರಕರೂ ಸಹಾಯಕರೂ ಕೆಲಭಾಗದ ಲೇಖಕರೂ ಮಾಧವಾಚಾರ್ಯರು ಆಗಿದ್ದುದರಿಂದ ಈ ಗ್ರಂಥವು **ಮಾಧವೀಯ ವೇದಾರ್ಥಪ್ರಕಾಶ**ವೆಂದು ಉಚಿತವಾಗಿ ಹೆಸರು ಪಡೆದಿದೆ. ಇವರಲ್ಲದೆ ಬೇರೆ ಪಂಡಿತರೂ ಈ ಕಾರ್ಯಕ್ಕೆ ಆಗಾಗ ನೆರವಾದರು. ಘನವಾದ ಈ ಕಾರ್ಯದಿಂದ ಪ್ರಪಂಚದ ಸಾಹಿತ್ಯದಲ್ಲಿ ಅಜರಾಮರವಾದ ಕೀರ್ತಿಯನ್ನು ಗಳಿಸಿದ ರಾಯನಿಗೆ ಇದರ ಮೂಲಕವಾಗಿ **ವೈದಿಕಮಾರ್ಗಪ್ರವರ್ತಕ** ಎಂಬ ಪದವಿಯು ಪ್ರಾಪ್ತವಾಯಿತು.

ರಾಯನು ವಿದ್ಯಾಪಕ್ಷಪಾತಿಯಾಗಿದ್ದನು. ಕವಿಗಳಿಗೂ ಪಂಡಿತರಿಗೂ ಆಶ್ರಯವನ್ನು ಕೊಟ್ಟನು. ವೇದಭಾಷ್ಯವಲ್ಲದೆ, ಧಾತುವೃತ್ತಿ, ಅಲಂಕಾರ ಸುಧಾನಿಧಿ, ಪರಾಶರ ಮಾಧವೀಯ ಮೊದಲಾದ ವಿವಿಧ ವಿಷಯದ ಉದ್ಗ್ರಂಥಗಳು ಈ ಕಾಲದಲ್ಲಿ ಹುಟ್ಟಿದುವು. ಬುಕ್ಕರಾಯನ ಸೊಸೆಯಾದ ಗಂಗಾದೇವಿಯು ಬರೆದ 'ವೀರಕಂಪರಾಯ ಚರಿತ'ವು ಈ ಕಾಲದ ಅತ್ಯುತ್ತಮವಾದ ಕಾವ್ಯಕೃತಿಯಾಗಿದೆ. ಈ ಕಾಲದಲ್ಲಿ ಅನೇಕ ವೀರಶೈವ, ಜೈನ, ಬ್ರಾಹ್ಮಣ ಲೇಖಕರು ಕನ್ನಡದಲ್ಲಿ ಗ್ರಂಥಗಳನ್ನು ಬರೆದರು. ವೀರಶೈವ ಮತಪ್ರಸಾರಕ ಗ್ರಂಥಗಳು ಹೆಚ್ಚಾಗಿ ಹುಟ್ಟತೊಡಗಿದುವು. ಭೀಮಕವಿಯು ಬಸವಪುರಾಣವನ್ನು ಬರೆದನು. ಜೈನಕವಿಗಳಲ್ಲಿ ಪ್ರಮುಖನಾದ ಬಾಹುಬಲಿ ಪಂಡಿತನು (೧೩೫೨) ಧರ್ಮನಾಥಪುರಾಣವನ್ನು ಬರೆದನು. ಮಂಗರಾಜನು ಖಗೇಂದ್ರಮಣಿದರ್ಪಣವನ್ನು ರಚಿಸಿದನು.

ರಾಯನು ಉಜ್ವಲ ಶಿವಭಕ್ತನಾಗಿದ್ದನು. ರಾಯನಿಗೆ ಹಲವರು ಹೆಂಡಂದಿರಿದ್ದರು. ಅವರಲ್ಲಿ ಹೊನ್ನಾಯಿಯೆಂಬಾಕೆಯು ಹಿರಿಯಳು. ಈಕೆಯು ವಿದ್ಯಾವತಿಯೂ ಚತುರೆಯೂ ಆಗಿದ್ದಳು. ರಾಯನಿಗೆ ಹನ್ನೊಂದು ಮಕ್ಕಳು ಇದ್ದರು. ಇವರಲ್ಲಿ ಇಬ್ಬರು ಹೆಣ್ಣುಮಕ್ಕಳು. ರಾಯನ ಮಕ್ಕಳೂ ಅಣ್ಣನ ಮಕ್ಕಳೂ ಇತರ ಆಪ್ತರೂ ರಾಜ್ಯದ ಬೇರೆ

ಬೇರೆ ಭಾಗಗಳಲ್ಲಿ ಅಧಿಕಾರಿಗಳಾಗಿ ರಾಜ್ಯಕಾರ್ಯದಲ್ಲಿ ನೆರವಾದರು. ಇವರಲ್ಲಿ ಕುಮಾರ ತಿಪ್ಪಣ್ಣೊಡೆಯನು ದೋರಸಮುದ್ರಕ್ಕೆ, ವಿರೂಪಣ್ಣನು (ವಿರೂಪಾಕ್ಷ ೧) ಮಲೆರಾಜ್ಯಕ್ಕೆ, ಹಿರಿಯ ಕಂಪಣ್ಣನು (ಕಂಪಣ್ಣ ೨) ಮುಳಬಾಗಲ್‌ರಾಜ್ಯಕ್ಕೆ ಮಂತಾಗಿ ಅಧಿಕಾರಿಗಳಾಗಿ ಆಳುತ್ತಿದ್ದರು.

ಬುಕ್ಕರಾಯನು ೧೩೭೬ರಲ್ಲಿ ಕಾಲವಶನಾದನು. ಬಳಿಕ ಆತನ ಉಳಿದ ಮಕ್ಕಳಲ್ಲಿ ಹಿರಿಯನಾದ ಇಮ್ಮಡಿ ಹರಿಹರನು ವಿಜಯನಗರದ ಸಿಂಹಾಸನವನ್ನು ಏರಿದನು.

---

## ಆರನೆಯ ವಿಲಾಸ

## ೩. ಇಮ್ಮಡಿ ಹರಿಹರರಾಯ (೧೩೭೬–೧೪೦೪)

**'ಮಹಾರಾಜಾಧಿರಾಜ ರಾಜಪರಮೇಶ್ವರ'** ಮೊದಲಾದ ಗೌರವಪೂರ್ಣವಾದ ಬಿರುದುಗಳನ್ನು ಧರಿಸಿ ಹರಿಹರರಾಯನು ಸಾಮ್ರಾಜ್ಯವನ್ನು ಆಳತೊಡಗಿದನು. **ಪ್ರಮುಖ್ಯವಾಗಿ ಈ ಬಿರುದುಗಳನ್ನು ಪ್ರದರ್ಶಿಸಿದ ವಿಜಯನಗರದ ಸಮ್ರಾಜರಲ್ಲಿ ಈತನೇ ಮೊದಲಿಗನು.**

ಸ್ಥಿರವಾದ ತಂದೆಯ ರಾಜ್ಯಕ್ಕೆ ಒಡೆಯನಾದರೂ ಇಮ್ಮಡಿ ಹರಿಹರರಾಯನ ಆಳಿಕೆಯು ಉಪದ್ರವರಹಿತವಾಗಲಿಲ್ಲ. ಬುಕ್ಕರಾಯನ ಪ್ರತಾಪದಿಂದ ಜರ್ಜರಿತರಾದ ಒಳಹೊರ ಹಗೆಗಳು ಈತನ ಕಾಲದಲ್ಲಿ ಮತ್ತೆ ತಲೆಯೆತ್ತಿ ತಮ್ಮ ಕಸುವನ್ನು ತೂಗಿನೋಡಿಕೊಂಡರು. ಹರಿಹರರಾಯನು ದಕ್ಷತೆಯಿಂದಲೂ ಪರಾಕ್ರಮದಿಂದಲೂ ಇವರೆಲ್ಲರನ್ನು ಹಣಿದಿಕ್ಕಿ ವಿಜಯನಗರಸಾಮ್ರಾಜ್ಯದ ಸಾಮರ್ಥ್ಯವನ್ನೂ ವೈಭವವನ್ನೂ ಹೆಚ್ಚಿಸಿದನು.

ಸ್ವಲ್ಪ ವರ್ಷಗಳು ಕಳೆದುಹೋಗುವಷ್ಟರಲ್ಲಿ ಕೊಂಕಣನಾಡಿನಲ್ಲಿ ತೊಂದರೆಯುಂಟಾಯಿತು ವಿಜಯನಗರಸಾಮ್ರಾಜ್ಯಸ್ಥಾಪಕನಾದ ಮೊದಲನೆಯ ಹರಿಹರನು ಸಮುದ್ರದ ಸ್ವಾಮಿತ್ವವನ್ನು ಬೀರುವ ಕೊಂಕಣಪ್ರದೇಶದ ಮಹತ್ವವನ್ನು ಅರಿತು, ತುಳುನಾಡಿನ ಒಡೆಯರಾದ ಭೈರಸು ಒಡೆಯರನ್ನು ತನ್ನ ಅಂಕೆಯಲ್ಲಿ ತಂದು ಆ ನಾಡಿನ ರಾಜಧಾನಿಯಾದ ಬಾರಕೂರಲ್ಲಿ ಕೋಟೆಯನ್ನು ಕಟ್ಟಿಸಿದ್ದನು. ಮುಂದೆ ಬುಕ್ಕರಾಯನ ಆಳಿಕೆಯಲ್ಲಿ ಈ ನಾಡಿನಲ್ಲಿ ದೊಂಬಿಯು ಎದ್ದಿತ್ತು. ಅದನ್ನು ಆತನು ನಂದಿಸಿದ್ದನು. ಈ ಆಳಿಕೆಯಲ್ಲಿ ಅಲ್ಲಿ ಮತ್ತೆ ಗಲಭೆಯುಂಟಾಯಿತು. ರಾಜಕುಮಾರನಾದ ಬುಕ್ಕರಾಯನು ಈ ಅಂಗನಾಡಿಗೆ ಒಡೆಯನಾಗಿದ್ದನು. ಆತನ ಮಂತ್ರಿಯಾದ ವಸಂತಮಾಧವರಾಯನ ವಿರುದ್ಧವಾಗಿ ಕೆಲವು ಪುಂಡರು ಬಂಡಾಯವನ್ನು ಹೂಡಿ ಸಾಮ್ರಾಜ್ಯದ ಅಧಿಕಾರವನ್ನು ಕಿತ್ತೊಗೆಯಲು ಹವಣಿಸಿದರು. ಮಾಧವರಾಯನು ಅವರ ಪುಂಡವನ್ನು ಅಡಗಿಸಿ ಕೊಂಕಣವನ್ನು ಮತ್ತೆ ವಿಜಯನಗರದ ಒಡೆತನಕ್ಕೆ ಒಳಪಡಿಸಿದನು (೧೩೮೦).

ಬುಕ್ಕರಾಯನ ಆಳಿಕೆಯಲ್ಲಿ ಹಿಂದೆ ವಿವರಿಸಿದಂತೆ ತುಂಡೀರ, ಚೋಳ, ಪಾಂಡ್ಯನಾಡುಗಳನ್ನು (ಕಂಚಿ ಮೊದಲಾದ ಪ್ರದೇಶವನ್ನು) ದಿಗ್ವಿಜಯ ಮಾಡಿದ ವೀರಕಂಪಣ್ಣರಾಯನು, ಆ ನಾಡುಗಳನ್ನು ಆಳುತ್ತಿದ್ದನು. ಆತನು ೧೩೭೪ರಲ್ಲಿ ಮರಣ ಹೊಂದಿದ ಬಳಿಕ, ಅಲ್ಲಿ ಮತ್ತೆ ಅಶಾಂತಿಯು ತಲೆದೋರಿತು. ರಾಯನ ಮಗನಾದ ಇಮ್ಮಡಿ ವಿರೂಪಾಕ್ಷನು ಇದನ್ನು ನಂದಿಸಿ ಆ ಪ್ರಾಂತದ ಅಧಿಕಾರವನ್ನು ಪಡೆದನು (೧೩೮೫). ಕುಮಾರ ವಿರೂಪಾಕ್ಷನು ಮುಂದೆ ಲಂಕೆಯ ಮೇಲೆ ದಂಡಯಾತ್ರೆಯನ್ನು ಮಾಡಿ ಅಲ್ಲಿಯ ಅರಸನಾದ ಐವಡಿ ಭುವನೈಕ ಬಾಹುವಿನಿಂದ ಬೆಲೆಯುಳ್ಳ ಕಾಣಿಕೆಗಳನ್ನು ಸೆಳೆದುಕೊಂಡು ತಂದು ತಂದೆಗೆ ಅರ್ಪಿಸಿದನು (೧೩೮೫).

ಬುಕ್ಕರಾಯನಿಂದ ಬಲವಾದ ಪೆಟ್ಟನ್ನು ತಿಂದ ಬಹಮನಿಯವರು ಕೆಲಕಾಲ ವಿಜಯನಗರವನ್ನು ಕೆಣಕುವ ಸಾಹಸವನ್ನು ಮಾಡಲಿಲ್ಲವಾದರೂ ಆಗಾಗ ಅಲ್ಲಲ್ಲಿ ಕಿರುಕುಳಗಳು ನಡೆದೇ ಇದ್ದುವು. ಸುಲ್ತಾನ

ಮಹಮ್ಮೂದಶಹನು ವಿಜಯನಗರದ ವಶದಲ್ಲಿದ್ದ ಆದವಾನಿಕೋಟೆ ಯನ್ನು ಕೊಸರಿಕೊಂಡನು. ಆದವಾನಿಯ ದುರ್ಗಪಾಲನೂ ರಾಯನ ತಮ್ಮನ ಮಗನೂ ಆದ ವೀರ ಚೆನ್ನಪ್ಪನು ವೈರಿಗಳ ಈ ಅತಿಕ್ರಮವನ್ನು ಸಹಿಸಲಿಲ್ಲ. ಆತನು ಕಲಿತನದಿಂದ ಕಾದಿ, ಶೌರ್ಯವನ್ನು ಮೆರೆಸಿ ಆದವಾನಿಯನ್ನು ಮರಳಿ ವಶಪಡಿಸಿದನು (೧೩೮೦). ಮುಂದೆ ಸ್ವಲ್ಪ ವರ್ಷಗಳಲ್ಲಿ ಅತ್ತ ವರಂಗಲ್ ಪ್ರದೇಶದಲ್ಲಿ ವಿಜಯನಗರದ ಮೇಲೆ ಇನ್ನೊಂದು ಏರಾಟವೂ ನಡೆಯಿತು (೧೩೮೪). ಮಹಮ್ಮದೀಯರು ಕೊಟ್ಟಕೊಂಡ[೧] ಕೋಟೆಯನ್ನು ಆಕ್ರಮಿಸಿದರು. ಆದರೆ ಈ ಗೆಲವಾದರೂ ಅವರಿಗೆ ಬಹುಕಾಲ ದಕ್ಕಲಿಲ್ಲ.

ಈ ಎಲ್ಲ ವಿಜಯಗಳಿಗಿಂತ ರಾಯನು ಗೋವೆಯನ್ನು ಗಳಿಸಿದುದು ಹೆಚ್ಚು ಮಹತ್ವವುಳ್ಳುದು ಆಗಿದೆ. ಪಶ್ಚಿಮ ಕರಾವಳಿಯಲ್ಲಿ ಪ್ರಮುಖ ಬಂದರವಾದ ಗೋವೆಯು ಮಹಮ್ಮದೀಯರಿಂದ ಆಕ್ರಮಿಸಲ್ಪಟ್ಟಿದ್ದು, ಇದುವರೆಗೆ ವಿಜಯನಗರಕ್ಕೆ ವಶವಾಗಿರಲಿಲ್ಲ. ರಾಯನು ಪರಾಕ್ರಮ ದಿಂದ ಗೋವೆಯನ್ನು ಸೆಳೆದುಕೊಂಡು ವೈರಿಯನ್ನು ಅಲ್ಲಿಂದ ಉಚ್ಚಾ ಟನ ಮಾಡಿದನು (೧೩೯೧) ಹೀಗೆ ಬಡಿದೋಡಿಸಿದ ಹಗೆಗಳು ಸುಮ್ಮನೆ ಕುಳ್ಳಿರಲಿಲ್ಲ. ಅವರು ತಮ್ಮ ಬಲವನ್ನು ಒಂದುಗೂಡಿಸಿ ಪಶ್ಚಿಮ ಪ್ರದೇಶದಲ್ಲಿ 'ರಂಗಿನಿ'[೨] ಎಂಬ ವಿಜಯನಗರದ ಕೋಟೆಯನ್ನು ಬಲ ವಾಗಿ ಹಿಡಿದುಕೊಂಡರು. ಈ ಕೋಟೆಯನ್ನು ಮರಳಿ ಕಸಿಯಲು ವಿಜಯನಗರದವರು ಏರಿ ಹೋದರು. ಘೋರವಾದ ಸಂಗ್ರಾಮವು ನಡೆಯಿತು. ಮಾನವರುಧಿರವು ಹೊನಹೊನಲಾಗಿ ಹರಿಯಿತು. ಕೊನೆಗೆ ವಿಜಯನಗರಕ್ಕೆ ವಿಜಯವು ದೊರೆತು, ಶತ್ರುಗಳು ಸೋತು ಓಡಿ ಹೋದರು (೧೩೯೫).[೩]

ಕೊಂಕಣ, ಗೋವೆ, ರಂಗಿನಿ ಈ ಮೂರು ಕಾಳೆಗಗಳಲ್ಲಿ ವೀರ ಮಂತ್ರಿಯಾದ ವಸಂತಮಾಧವರಾಯನೂ, ಆತನ ಮಗನಾದ

---

೧; ೨. ಇವು ಯಾವ ಸ್ಥಳಗಳು ಎಂಬುದು ತಿಳಿದಿಲ್ಲ.

೩. ದೀ. ಟಿ. ೭.

ಬೈಚಪ್ಪನೂ ಅಗ್ರೇಸರರಾಗಿ, ಬಹು ಪ್ರತಾಪವನ್ನು ಜೀರಿ ವಿಜಯ ನಗರದ ಕೀರ್ತಿಯನ್ನು ಮೆರೆದಾಡಿಸಿದರು. ಹೀಗೆ ಸಾಮ್ರಾಜ್ಯಸೇವೆ ಯನ್ನು ಮಾಡಿದ ಇವರಿಗೆ 'ಸಪ್ತ ಕೊಂಕಣ ಧೂಲಿಪಟ್ಟ,' 'ಗೋವಾ ಪುರವರಾಧೀಶ್ವರ,' 'ತುರಕ ದಳ ವಿಭಾಡ,' 'ರಂಗಿನೀಪ್ರತಾಪ' ಮೊದಲಾದಗೌರವದ ಬಿರುದುಗಳೂ' ಗೋವೆ, ಬನವಾಸಿ ಮೊದಲಾದ ನಾಡಿನ ಅಧಿಕಾರವೂ ಪ್ರಾಪ್ತವಾದುವು.

ಈ ರೀತಿಯಾಗಿ ವಿಜಯಗಳನ್ನು ಸಂಪಾದಿಸಿದ ವಿಜಯನಗರದ ಬೆಳೆವ ಶಕ್ತಿಯನ್ನು ಸಹಿಸದಾದ ಬಹಮನಿಯ ಅಧಿಕಾರಿಗಳು ರಾಯನನ್ನು ಬಲವಾಗಿ ವಿರೋಧಿಸಬೇಕೆಂದು ಬಗೆದರು. ಮಹಮೂದಶಹನು ಅಲ್ಲಲ್ಲಿ ವಿಜಯನಗರಕ್ಕೆ ಉಪದ್ರವಗಳನ್ನು ಉಂಟುಮಾಡಲು ಹೆಣಗಾಡಿ ಭಂಗ ಪಟ್ಟನು. ಆತನು ೧೩೯೭ರಲ್ಲಿ ಮಡಿಯಲು, ಆತನ ತರುವಾಯ ಪಟ್ಟಕ್ಕೆ ಬಂದ ಫಿರೋಜಶಹನು ವಿಜಯನಗರದೊಡನೆ ವಿರೋಧವೃತ್ತಿಯನ್ನು ಬೆಳೆಸಿದನು. ಇದನ್ನು ಕಂಡು ರಾಯನು ಶಹನ ಅಧಿಕಾರಕ್ಕೆ ಒಳಪಟ್ಟ ರಾಯಚೂರು ಮುದಗಲ್ ಕೋಟೆಗಳನ್ನು ಸೆಳೆಯಬೇಕೆಂದು ಸಂಕಲ್ಪಿಸಿ ದೊಡ್ಡ ದಂಡಿನೊಡನೆ ಪಯಣ ಬೆಳೆಸಿದನು. ಕೃಷ್ಣೆಗೆ ಮಹಾಪೂರವು ಬಂದು ಸೂಸಿ ಹರಿಯುತ್ತಿತ್ತು. ರಾಯನು ಹೊಳೆಯನ್ನು ದಾಟಲಿಲ್ಲ. ಶಹನ ದಂಡಿನ ಕೆಲವು ಜನರು ಹೊಳೆಯನ್ನು ಇಳಿದು ಬಂದು ಸಂಗೀತ ಮೇಳದವರ ವೇಷವನ್ನು ಧರಿಸಿ, ಮೋಸದಿಂದ ವಿಜಯ ನಗರದ ಪಾಳ್ಯದಲ್ಲಿ ಗಲಭೆಯನ್ನು ಎಬ್ಬಿಸಲು ಹವಣಿಸಿದರು. ಅಷ್ಟರಲ್ಲಿ ಅವರ ಮುಖ್ಯಸೈನ್ಯವು ಕೃಷ್ಣೆಯನ್ನು ದಾಟಿ ವಿಜಯ ನಗರಸೈನ್ಯದ ಮೇಲೆ ಬಂದು ತಾಗಿತು. ಘೋರವಾದ ಕದನವು ನಡೆಯಿತು. ಸೋಲು ಗೆಲವುಗಳು ಅನಿಶ್ಚಿತವಾದುವು. ಈ ಕೋಲಾ ಹಲದಲ್ಲಿ ದಂಡಾಳುಗಳು ಹತರಾದವರೆಷ್ಟೋ, ಸೆರೆಯಾದವರೆಷ್ಟೋ ! ಕೊನೆಗೆ ಒಡಂಬಡಿಕೆಯಾಗಿ ಎರಡೂ ರಾಜ್ಯಗಳ ಎಲ್ಲೆಗಳು ಮೊದಲಿದ್ದಂತೆಯೇ ಇರಬೇಕು; ಇನ್ನೊಬ್ಬರ ಪ್ರಜಾಜನರಿಗೆ ಹಿಂಸೆಯಾಗದಂತೆ ಇಬ್ಬರೂ ಎಚ್ಚರಪಡಬೇಕು; ಎಂದು ಗೊತ್ತಾಯಿತು (೧೩೯೮). ಈ ಕಾಳೆಗದಲ್ಲಿ ಗುಂಡ ದಂಡನಾಥನು ಬಹು ಶೌರ್ಯವನ್ನು ಮೆರೆಸಿದನು.

ಹರಿಹರನಿಗೆ ಪಂಪಾದೇವಿ, ಮಲ್ಲಾದೇವಿ, ಎಂಬ ಇಬ್ಬರು ಹೆಂಡಂದಿರಿದ್ದರು. ಪಂಪಾದೇವಿಗೆ (ಇಮ್ಮಡಿ) ಬುಕ್ಕನೆಂಬ ಮಗನು ಇದ್ದನು. ಮಲ್ಲಾದೇವಿಯು ಸೇವುಣ (ಯಾದವ) ವಂಶದ ರಾಮದೇವ ರಾಯನ ಮೊಮ್ಮಗಳು. ಆಕೆಗೆ ದೇವರಾಯ, (ಇಮ್ಮಡಿ) ವಿರೂಪಾಕ್ಷ, ಚಿಕ್ಕರಾಯ ಎಂಬ ಮೂವರು ಮಕ್ಕಳು ಇದ್ದರು. ಇವರಲ್ಲಿ ಬುಕ್ಕನೆ ಹಿರಿಯನು. ಈತನು ರಾಜಕಾರ್ಯಧುರಂಧರನಾಗಿ ರಾಜ್ಯದಾಡಳಿತ ದಲ್ಲಿ ತಂದೆಗೆ ನೆರವಾಗುತ್ತಿದ್ದನು. ಈತನು ಕೆಲಕಾಲ ಮುಳಬಾಗಲ್ ಪ್ರಾಂತಕ್ಕೆ, ಆ ಮೇಲೆ ಪೆನುಗೊಂಡ ಪ್ರಾಂತಕ್ಕೆ ದೊರೆಯಾಗಿದ್ದನು. ವಿರೂಪಾಕ್ಷನು ತೊಂಡಮಂಡಲ, ಚೋಳ, ಪಾಂಡ್ಯ ಈ ಪ್ರಾಂತಕ್ಕೆ ಒಡೆಯನಾಗಿದ್ದನು. ದೇವರಾಯನು ಉದಯಗಿರಿಗೆ, ಚಿಕ್ಕರಾಯನು ಅರಗರಾಜ್ಯಕ್ಕೆ ಅಧಿಕಾರಿಯಾಗಿದ್ದನು.

ಕಾಶೀವಿಲಾಸ ಕ್ರಿಯಾಶಕ್ತಿಗಳು ರಾಯನ ಕುಲಗುರುಗಳೂ ರಾಜಗುರುಗಳೂ ಆಗಿದ್ದರು. ಶೃಂಗೇರಿಯ ಪೀಠಾಧಿಷ್ಠಿತರಾದ ವಿದ್ಯಾ ರಣ್ಯರಲ್ಲಿ ರಾಯನಿಗೆ ಅತಿಶಯವಾದ ಭಕ್ತಿವಿಶ್ವಾಸಗಳಿದ್ದುವು. ರಾಯನ ರಾಜ್ಯಕಾರ್ಯದಲ್ಲಿ ವಿದ್ಯಾರಣ್ಯರ ಮಂತ್ರಾಲೋಚನೆಯಿಂದ ಬಹಳ ಸಹಾಯವಾಗುತ್ತಿತ್ತು. ರಾಯನು ವಿದ್ಯಾರಣ್ಯ ಮುನಿಗಳ ಅನುಗ್ರಹ ದಿಂದ ಅನ್ಯ ಅರಸರಿಗೆ ಅಸಾಧ್ಯವಾದ ಜ್ಞಾನ ಸಾಮ್ರಾಜ್ಯವನ್ನು ಸಂಪಾದಿಸಿದನು. ವಿದ್ಯಾರಣ್ಯರು ಸುಮಾರು ಹನ್ನೆರಡು ವರ್ಷಗಳ ವರೆಗೆ (೧೩೭೫-೮೬) ಶೃಂಗೇರೀಮಠದ ಧರ್ಮಸಾಮ್ರಾಜ್ಯವನ್ನು ಆಳಿ ಸಮಾಧಿಸ್ಥರಾದರು.[೪]

ರಾಜನೀತಿಚತುರನಾದ ಮುದ್ದದಂಡನಾಥನು ರಾಯನ ವಿಶ್ವಾಸದ ಮಂತ್ರಿಯಾಗಿದ್ದನು. ಈತನು ಅನೇಕ <u>ಅಗ್ರಹಾರ</u>ಗಳನ್ನು ಸ್ಥಾಪಿಸಿದನು, ಕೆರೆಗಳನ್ನು ಕಟ್ಟಿಸಿದನು, ಪ್ರಜರನ್ನು ಮಕ್ಕಳಂತೆ ಪಾಲಿಸಿದನು. ಈತನ ಪೋಷಣೆಯಿಂದ ವ್ಯಾಪಾರಕ್ಕೆ ಉತ್ತೇಜನವು

೪. A. H. J. April, 1935, pp. 41, 42.

ದೊರೆತಿತು. ಈತನು ಬಹು ಲೋಕಪ್ರಿಯನಾಗಿದ್ದನು. ವಿಜಯನಗರ ಮೊದಲಾದ ಇಪ್ಪತ್ತಾರು ಪಟ್ಟಣಗಳ ಪ್ರಮುಖ ವರ್ತಕರು, ಒಕ್ಕಲಿಗರು, ಕೂಲಿಕಾರರು, ಹೊಲೆಯರು ಮೊದಲಾದವರು ಈತನನ್ನು ಸಾರ್ವಜನಿಕವಾಗಿ ಸನ್ಮಾನಿಸಿ ಪೃಥ್ವೀಸೆಟ್ಟಿ ಎಂಬ ಗೌರವದ ಬಿರುದನ್ನು ಅರ್ಪಿಸಿದರು. ಜೈನಧರ್ಮಿಯಾದ ಬೈಚನೆಂಬಾತನು ರಾಯನ ಇನ್ನೊಬ್ಬ ಮಂತ್ರಿಯಾಗಿದ್ದನು. ಇವರಲ್ಲದೆ ಬೇರೆ ಮಂತ್ರಿಗಳೂ ಇದ್ದರು.

ಬುಕ್ಕರಾಯನ ಆಳಿಕೆಯಲ್ಲಿ ಆರಂಭವಾದ ವೇದಭಾಷ್ಯದ ಪ್ರಚಂಡಕಾರ್ಯವು ಸುಮಾರು ಇಪ್ಪತ್ತು ವರ್ಷಗಳವರೆಗೆ ನಡೆದು (೧೩೬೦-೮೦) ಈ ಆಳಿಕೆಯಲ್ಲಿ ಪರಿಸಮಾಪ್ತಿಗೊಂಡಿತು.[೫] ಈ ಮೊದಲಾದ ಸಾಂಸ್ಕೃತಿಕ ಕಾರ್ಯಗಳನ್ನು ನೆರವೇರಿಸಿ ವೈದಿಕ ಧರ್ಮವನ್ನು ಪುರಸ್ಕಾರಗೊಳಿಸಿದ ರಾಯನಿಗೆ **ವೈದಿಕಮಾರ್ಗಸ್ಥಾಪನಾಚಾರ್ಯ** ಎಂಬ ಬಿರುದು ಉಂಟಾಯಿತು.

ರಾಯನು ಉಜ್ವಲ ಶಿವಭಕ್ತನಾಗಿದ್ದನು. ಆದರೂ ಆತನು ತನ್ನ ತಂದೆಯಂತೆ ಅನ್ಯಧರ್ಮಸಹಿಷ್ಣುವೂ, ಸರ್ವಮತಗಳಲ್ಲಿ ಸಮಭಾವನೆಯುಳ್ಳವನೂ ಆಗಿದ್ದನು. ಆತನ ಅಧಿಕಾರಿಗಳಲ್ಲಿ ಜೈನರೂ ವೀರಶೈವರೂ ಇದ್ದರು. ಆತನು ಶೃಂಗೇರೀ ಮಠಕ್ಕೂ, ಬ್ರಾಹ್ಮಣರಿಗೂ ಹೇರಳವಾಗಿ ದತ್ತಿಗಳನು ಬಿಟ್ಟನು; ಅನೇಕ ಅಗ್ರಹಾರಗಳನ್ನು ಸ್ಥಾಪಿಸಿದನು; ಪುಣ್ಯಕ್ಷೇತ್ರಗಳಲ್ಲಿ ಹದಿನಾರು ಮಹಾದಾನಗಳನ್ನು ಮಾಡಿದನು. ರಾಯನು ಪಂಡಿತರಿಗೂ ಕವಿಗಳಿಗೂ ಉದಾರಾಶ್ರಯವನ್ನು ನೀಡಿದನು; ವಿದ್ಯೆಗಳನ್ನು ಪುರಸ್ಕರಿಸಿದನು. ವೇದ, ಶಾಸ್ತ್ರ, ಕಾವ್ಯ, ಪುರಾಣ ಮೊದಲಾದ ವೈದಿಕ–ಲೌಕಿಕ ವಿದ್ಯೆಗಳು ಈತನಿಂದ ಪ್ರೋತ್ಸಾಹವನ್ನು ಪಡೆದುವು.

ರಾಯನು ಕನ್ನಡ ಸಾಹಿತ್ಯವನ್ನೂ ಪೋಷಿಸಿದನು. ರಾಯನ ಕನ್ನಡ ಪ್ರೇಮದ ಸೂಚಕವಾಗಿ ಆತನಿಗೆ **ಕರ್ನಾಟಕ ವಿದ್ಯಾವಿಲಾಸ**

[೫] ವಿ. ವಿ. ವ. ೬೩. ಪು. ೩೨೫.

ಎಂಬ ಬಿರುದು ಪ್ರಾಪ್ತವಾಯಿತು. ಈ ಕಾಲದಲ್ಲಿ ಜೈನರೂ ವೀರಶೈವರೂ ಆದ ಅನೇಕ ಕನ್ನಡ ಕವಿಗಳು ಉದಯಿಸಿದರು. ಮಧುರನೆಂಬ ಜೈನಕವಿಯು ಧರ್ಮನಾಥಪುರಾಣವನ್ನು ಬರೆದನು. ಮುದ್ದಣ್ಣ ಮಂತ್ರಿಯು ಈತನ ಪೋಷಕನಾಗಿದ್ದನು. ವೀರಶೈವ ಕವಿಯಾದ ಪದ್ಮಣಾಂಕನು ಪದ್ಮರಾಜಪುರಾಣವನ್ನು ರಚಿಸಿದನು. ನೀಲಕಂಠ ಶಿವಾಚಾರ್ಯನು ಬ್ರಹ್ಮಸೂತ್ರಕ್ಕೆ ವ್ಯಾಖ್ಯಾನರೂಪವಾದ ಕ್ರಿಯಾಸಾರವನ್ನು ಬರೆವುದಲ್ಲದೆ ಕನ್ನಡದಲ್ಲಿಯೂ ಗ್ರಂಥರಚನೆ ಮಾಡಿದನು.

೨೯ ವರ್ಷಗಳ ದೀರ್ಘವಾದ ರಾಯನ ಆಳಿಕೆಯಲ್ಲಿ ವಿಜಯನಗರ ಸಾಮ್ರಾಜ್ಯದ ಪ್ರಭಾವವೂ, ವೈಭವವೂ ಹೆಚ್ಚಿದುವು. ರಾಷ್ಟ್ರದಲ್ಲಿ ಶಾಂತಿಯೂ, ಸುಸ್ಥಿತಿಯೂ ನೆಲೆಗೊಂಡುವು. ದೇಶದಲ್ಲಿ ಸಮೃದ್ಧಿಯು ಹೆಚ್ಚಿತು. ಜನಾಂಗಕ್ಕೆ ಸೌಖ್ಯವು ಉಂಟಾಯಿತು. ನಾಗರಿಕತೆಯು ವಿಕಾಸಗೊಂಡಿತು. ರಾಜ್ಯದ ಆಡಳಿತವು ಸುವ್ಯವಸ್ಥಿತವಾಗಿತ್ತು. ತೆರಿಗೆಗಳು ದಕ್ಷತೆಯಿಂದ ಏರ್ಪಟ್ಟಿದ್ದುವು. ಜನತೆಗೆ ಜೀವನದ ಸೌಕರ್ಯಗಳು ಒದವಿದುವು. ಯುವರಾಜನಾದ ಬುಕ್ಕನು ಪೆನುಗೊಂಡದಲ್ಲಿರುವಾಗ ಹೊನ್ನೆಹೊಳೆಯಿಂದ ಪೆನುಗೊಂಡಕ್ಕೆ ಕಾಲುವೆಯನ್ನು ಕಟ್ಟಿಸಿದನು. ಸಿಂಗಮಭಟ್ಟನೆಂಬ ಬ್ರಾಹ್ಮಣ ಜಲಯಂತ್ರವಿಶಾರದನು(Hydraulic Engineer)ಈ ಕಾರ್ಯವನ್ನು ಕೈಕೊಂಡು ನೆರವೇರಿಸಿದನು. ಇದರಂತೆ ಹಿರಿಯ ಬುಕ್ಕರಾಯನ ಮೊಮ್ಮಗಳಾದ ಜೊಮ್ಮದೇವಿಯು ಬೇರೊಂದು ಕಾಲುವೆಯನ್ನು ತೆಗೆಸಿಕೊಟ್ಟಳು. ಈ ನಡುವೆ (೧೩೯೦-೯೧) ದಕ್ಷಿಣಭಾರತದಲ್ಲಿ ಭಯಂಕರವಾದ ಬರವು ಬಿದ್ದು ದೇಶದಲ್ಲಿ ಹಾಹಾಕಾರವಾಯಿತು.

ಈ ಆಳಿಕೆಯಲ್ಲಿ ವರ್ತಕರ ಚಟವಟಿಕೆಗಳು ಬೆಳೆದು ವ್ಯಾಪಾರದ ಅಭಿವೃದ್ಧಿಯಾಯಿತು. ಆದರಿಂದ ಪಟ್ಟಣಗಳು ಹೆಚ್ಚಿದುವು. ಪಟ್ಟಣಗಳ ವೈಭವವೂ ಬೆಳೆಯಿತು. ವಿಜಯನಗರವಲ್ಲದೆ ದೋರಸಮುದ್ರ, ಪೆನುಗೊಂಡ, ಉದಯಗಿರಿ, ಬಂಕಾಪುರ ಮೊದಲಾದ ಪಟ್ಟಣಗಳು ಉತ್ಕರ್ಷವನ್ನು ಹೊಂದಿದುವು. ಕಂಚಿನಾಡು ಸಾಮ್ರಾಜ್ಯದ ಒಂದು ಪ್ರಮುಖ

ಭಾಗವಾಗಿ ಎಣಿಸಲ್ಪಟ್ಟಿತು. ಅಲ್ಲಿ ಅರಸುಮನೆತನದವರು ಅಧಿಕಾರಿಗಳಾಗಿ ನೇಮಿಸಲ್ಪಡುತ್ತಿದ್ದರು. ಅದರಿಂದ ಕಂಚೀಪಟ್ಟಣಕ್ಕೆ ಉಪ ರಾಜಧಾನಿಯ ಮಹತ್ವವೂ, ಶೋಭೆಯೂ ಪ್ರಾಪ್ತವಾದುವು.

ರಾಯನು ೧೪೦೪ರಲ್ಲಿ ಇಹಲೋಕಯಾತ್ರೆಯನ್ನು ಮುಗಿಸಿದನು.

---

## ೪. ಇಮ್ಮಡಿ ಬುಕ್ಕರಾಯ
## ೫. ಇಮ್ಮಡಿ ವಿರೂಪಾಕ್ಷರಾಯ (೧೪೦೪-೦೬)

ಹರಿಹರರಾಯನ ಮರಣದನಂತರ ರಾಜ್ಯದ ಒಡೆತನಕ್ಕಾಗಿ ಜಗಳಗಳು ಉಂಟಾದುವು. ರಾಯನ ಮೂವರು ಮಕ್ಕಳು—ಬುಕ್ಕನು, ವಿರೂಪಾಕ್ಷನು, ದೇವರಾಯನು— ಸಿಂಹಾಸನವನ್ನು ಹವಣಿಸಿದರು. ಇವರು ಪ್ರೌಢರು, ಸಮರ್ಥರು, ರಾಜ್ಯಕಾರ್ಯಕುಶಲರಾಗಿದ್ದು, ಹಿಂದೆ ಹೇಳಿದಂತೆ ಬೇರೆಬೇರೆ ಪ್ರಾಂತಗಳ ಅಧಿಕಾರಿಗಳಾಗಿದ್ದರು. ಇವರಿಗೆ ಅನುಯಾಯಿಗಳ ಬಲವೂ ಇದ್ದಿತು. ಬುಕ್ಕನು ಮೊದಲು ಪಟ್ಟವನ್ನು ಹಿಡಿದನು. ಕೆಲದಿನಗಳಾಗುವಷ್ಟರಲ್ಲಿ ವಿರೂಪಾಕ್ಷನು ಪ್ರಬಲಿಸಿ ಬುಕ್ಕನನ್ನು ತಳ್ಳಿ ಸಿಂಹಾಸನವನ್ನು ಸೆಳೆದುಕೊಂಡನು (೧೪೦೪). ಮುಂದೆ ಹಲವು ತಿಂಗಳುಗಳಲ್ಲಿ ಬುಕ್ಕನು ಮತ್ತೆ ಬಲಗೊಂಡು ವಿರೂಪಾಕ್ಷನನ್ನು ಪದಚ್ಯುತ ಮಾಡಿದನು (೧೪೦೫). ಬಳಿಕ ಬುಕ್ಕರಾಯನು ಒಂದು ವರ್ಷ ಆಳುವಷ್ಟರಲ್ಲಿ ದೇವರಾಯನು ಆತನನ್ನು ನೂಕಿ ಸಿಂಹಾಸನಾರೂಢನಾದನು (೧೪೦೬).

ಈ ಎಳೆದಾಟದಲ್ಲಿ ಹಲವು ಅತ್ಯಾಚಾರಗಳು ನಡೆದುವು. ರಾಜ್ಯಭ್ರಷ್ಟನಾದ ಬುಕ್ಕರಾಯನು ಮುಂದೆ ಒಂದೆರಡು ವರ್ಷ ಹೆಣಗಾಡಿ ಹತಾಶನಾಗಿ ರಾಜಧಾನಿಯನ್ನು ಬಿಟ್ಟು ಮಹಾರಾಜಾಧಿರಾಜನೆಂಬ ಬಿರುದನ್ನು ಹೇಳಿಕೊಳ್ಳುತ್ತ ಹಾಸನಪ್ರಾಂತದಲ್ಲಿ ೧೪೦೭ರ ವರೆಗೆ ಸುರಕ್ಷಿತವಾಗಿ ಬಾಳಿದನು.

ವಿಫಲಮನೋರಥನಾದ ವಿರೂಪಾಕ್ಷನು ಮುಂದೆ ಮಲೆರಾಜ್ಯದ ಅಧಿಕಾರವನ್ನು ಹಿಡಿದುಕೊಂಡು ಮಹಾರಾಜಾಧಿರಾಜ ರಾಜಪರಮೇಶ್ವರನೆಂದು ಹೊಗಳಿಸಿಕೊಳ್ಳುತ್ತ ಸ್ವಲ್ಪಕಾಲ ಜೀವಿಸಿದನು (೧೪೦೫). ಈತನು ಶೂರನು, ಉದಾರನು, ಬುದ್ಧಿವಂತನು ಆಗಿದ್ದನು. ಹಿಂದೆ ಕಾಣಿಸಿದಂತೆ ಕಂಚೀರಾಜ್ಯಕ್ಕೆ ಒಡೆಯನಾಗಿ ಲಂಕೆಯನ್ನು ಗೆದ್ದನು. ರಾಮೇಶ್ವರ, ಶ್ರೀರಂಗಂ, ಚಿದಂಬರಂ ಮೊದಲಾದ ಕ್ಷೇತ್ರಗಳಲ್ಲಿ ಮಹಾದಾನಗಳನ್ನು ಮಾಡಿದನು **ವೇದಮಾರ್ಗಪ್ರತಿಷ್ಠಾಪನಾಚಾರ್ಯ**ನೆನಿಸಿದನು. ಈತನು ನಾರಾಯಣೀವಿಲಾಸ ಎಂಬ ಸಂಸ್ಕೃತ ನಾಟಕವನ್ನು ಬರೆದಿರುವನು.[೬]

---

## ೬. (ಒಂದನೆಯ) ದೇವರಾಯ (೧೪೦೬-೨೨)

ಅಣ್ಣತಮ್ಮಂದಿರ ತಿಕ್ಕಾಟದಲ್ಲಿ ಸಂಧಿಯನ್ನು ಸಾಧಿಸಿ ಸಿಂಹಾಸನವನ್ನು ಸೆಳೆದುಕೊಂಡ ದೇವರಾಯನು ೧೪೦೬ರಲ್ಲಿ ರಾಜ್ಯಾಭಿಷಕ್ತನಾದನು. ಈತನಿಗೆ ಪ್ರತಾಪದೇವರಾಯ, ಪ್ರೌಢದೇವರಾಯ, ಎಂಬ ಹೆಸರುಗಳು ಇದ್ದುವು.

ರಾಯನು ರಾಜ್ಯಕ್ಕೆ ಬಂದ ವರ್ಷವೆ ಬಹಮನಿಯವರೊಡನೆ ಯುದ್ಧಪ್ರಸಂಗವು ಬಂದಿತು. ರಾಯನು ದಂಡಯಾತ್ರೆಯನ್ನು ಮಾಡಿ, ತುಂಗಭದ್ರೆಯನ್ನು ದಾಟಿ ಮುದಗಲ್ ಪ್ರದೇಶದಲ್ಲಿ ದಾಳಿಯಿಟ್ಟನು. ತನ್ನ ರಾಜ್ಯದಲ್ಲಿಯ ಈ ಅತಿಕ್ರಮಣದಿಂದ ಸಂತಪ್ತನಾದ ಫಿರೋಜಶಹನು ವಿಜಯನಗರದ ಮೇಲೆ ಶಸ್ತ್ರವೆತ್ತಿ ರಾಜಧಾನಿಗೆ ದಾಳಿಯಿಡಬೇಕೆಂದು ಹವಣಿಸಿದನು. ಆದರೆ ಆತನ ಪ್ರಯತ್ನವು ಸಫಲವಾಗಲಿಲ್ಲ. ಬಳಿಕ ಆತನು ವಿಜಯನಗರಪ್ರಾಂತವನ್ನು ಉಧ್ವಸ್ತಮಾಡಲಾರಂಭಿಸಿ

---

೬. ದೀ. ಟಿ. ೮.

ದನು. ಆತನು ಬಂಕಾಪುರವನ್ನು ಕಸಿದನು. ಭದ್ರವಾದ ಆದವಾನಿ ಕೋಟೆಗೆ ಹೊಂಚುಹಾಕಿದನು. ಆದರೆ ಅದು ಸ್ವಾಧೀನವಾಗಲಿಲ್ಲ. ಕೊನೆಗೆ ರಾಯನು ಸಹಸಿಗೆ ಬಂಕಾಪುರಕೋಟೆಯನ್ನೂ ಕಪ್ಪಕಾಣಿಕೆ ಯನ್ನೂ ಕೊಡಬೇಕೆಂದು ಒಡಂಬಡಿಕೆಯಾಗಿ ಯುದ್ಧವು ಸಮಾಪ್ತ ವಾಯಿತು. [೭]

ಈ ಘಟನೆಗೆ ಹತ್ತುವರ್ಷಗಳಾಗುವಷ್ಟರಲ್ಲಿ ಮತ್ತೆ ರಣದುಂದು ಭಿಯು ಮೊಳಗಿತು (೧೪೧೭). ಬಹಮನಿಯವರು ಪಾನಗಲ್‌ಕೋಟೆ ಯನ್ನು ಮುತ್ತಿದರು. ಎರಡುವರ್ಷಗಳಾದರೂ ಕೋಟೆಯು ಅವರ ಸ್ವಾಧೀನವಾಗಲಿಲ್ಲ. ಅಷ್ಟರಲ್ಲಿ ಅವರ ಸೇನೆಯಲ್ಲಿ ರೋಗದ ಹಾವ ಳಿಯು ಉಂಟಾಯಿತು. ಅವರು ಮುತ್ತಿಗೆಯನ್ನು ಕಿತ್ತುಕೊಂಡು ಓಡಲಣಿಯಾದರು. ರಾಯನು ಈ ಸಂಧಿಯನ್ನು ನೋಡಿ ವರಂಗಲ್ ರಾಜನನ್ನು ಕೂಡಿಕೊಂಡು ಶಹನ ಸೈನ್ಯದ ಮೇಲೆ ಬಂದು ಅಪ್ಪಳಿಸಿ ದನು. ಬಹುಜನರು ಬಹಮನಿಯಪಕ್ಷದವರು ಕೊಲೆಗೀಡಾದರು. ವಿಜಯನಗರದವರು ವಿಜಯೋನ್ಮಾದದಿಂದ ಮುಂದೆ ಧುಮುಕುತ್ತ ವಿಜಾಪುರಪ್ರಾಂತವನ್ನು ಮನಃಪೂರ್ತಿಯಾಗಿ ಹಾಳುಮಾಡಿದರು. ಫಿರೋಜಶಹನು ಈ ಅನಾಹೂತಗಳಿಂದ ಎದೆಯೊಡೆದುಕೊಂಡು ಪರ ಲೋಕಕ್ಕೆ ಪ್ರಯಾಣಮಾಡಿದನು (೧೪೨೨).

ಆದರೂ ಸಮರವು ನಿಲ್ಲಲಿಲ್ಲ. ಬಳಿಕ ಬಹಮನಿಯ ಪಟ್ಟಕ್ಕೆ ಬಂದ ಅಹಮದಶಹನು ಇದರ ಮುಯ್ಯುವನ್ನು ತೀರಿಸುವ ಪ್ರತಿಜ್ಞೆ ಮಾಡಿ ವಿಜಯನಗರಪ್ರದೇಶದಲ್ಲಿ ನುಗ್ಗಿ ನಿರಪರಾಧಿಗಳಾದ ಸ್ತ್ರೀ-ಬಾಲ ರನ್ನು ನಿರ್ದಯವಾಗಿ ಸಂಹರಿಸುತ್ತ ಕೋಲಾಹಲವನ್ನು ಎಬ್ಬಿಸಿದನು. ಆತನು ಇಪ್ಪತ್ತುಸಾವಿರ ಹಿಂದುಗಳ ಕೊಲೆಯಾದಕೂಡಲೆ, ಮೂರು ದಿನಗಳ ವರೆಗೆ ವಿಶ್ರಮಿಸಿ ಸಂತೋಷಭೋಜನವನ್ನು ಮಾಡಿಸು ತ್ತಿದ್ದನಂತೆ !

---

೭. ದೀ. ಟಿ. ೯.

ಭೀಷಣವಾದ ಈ ಅತ್ಯಾಚಾರಗಳಿಂದ ಹೌಹಾರಿದ ಹಿಂದು ಪ್ರಜೆಗಳು ರೊಚ್ಚಿಗೆದ್ದು, ಹೇಗಾದರೂ ಮಾಡಿ ಆತನನ್ನು ಮುಗಿಸಿಯೇ ಬಿಡಬೇಕೆಂದು ಹೊಂಚುಹಾಕಿಕೊಂಡು ಕುಳಿತರು. ಕೈಗೆ ಸಿಕ್ಕ ಶಹನು ಸ್ವಲ್ಪದರಲ್ಲಿ ಜೀವದಿಂದ ಪಾರಾಗಿ ಹೋದನು. ಹಿಂದುಗಳು ಆತನ ಜನರನ್ನು ಚೆನ್ನಾಗಿ ಹಣಿದರು. ಕೊನೆಗೆ ಒಡಂಬಡಿಕೆಯಾಗಿ ಯುದ್ಧವು ಮುಕ್ತಾಯವಾಯಿತು. ಬಳಿಕ ಶಹನು ತನ್ನ ರಾಜಧಾನಿಯನ್ನು ಕಿತ್ತು ಉತ್ತರಕ್ಕೆ ನೂರು ಮೈಲಿನಲ್ಲಿರುವ ಬಿದರಕ್ಕೆ ಒಯ್ದನು. ಈ ಯುದ್ಧದ ಕೆಲವು ಘಟನೆಗಳು ಮುಂದಿನ ಆಳಿಕೆಯಲ್ಲಿ ಸಂಭವಿಸಿರುವುದರಿಂದ ಅವು ಗಳ ವಿವರವು ಅಲ್ಲಿಯೂ ಬರುವುದು.

ಪಟ್ಟವನ್ನು ಗಳಿಸುವ ಗಲಭೆಯಲ್ಲಿ ದೇವರಾಯನಿಗೆ ವೈರಿಗಳು ಉಂಟಾಗಿದ್ದರು. ಅವರು ಒಳಸಂಚನ್ನು ಹೂಡಿ ರಾಯನನ್ನು ಕೊಲ್ಲ ಬೇಕೆಂದು ಯತ್ನಿಸಿದರು. ಒಂದುದಿನ ಈ ಸಂಚುಗಾರರು ಕತ್ತಿಗಳನ್ನು ಬೀಸುತ್ತ ಅರಮನೆಯ ಹೆಬ್ಬಾಗಿಲವನ್ನು ಮುತ್ತಿದರು. ಈ ಕುತಂತ್ರ ವನ್ನು ಕಂಡುಹಿಡಿದ ಲಕ್ಷ್ಮೀಧರ ಅಮಾತ್ಯನು ತಕ್ಕಸಮಯದಲ್ಲಿ ಅಲ್ಲಿಗೆ ಬಂದು ಈ ಪುಂಡರನ್ನು ದಂಡಿಸಿದನು.

ಈ ಲಕ್ಷ್ಮೀಧರನು ಸುಪ್ರಸಿದ್ಧ ವೇದಭಾಷ್ಯಕಾರರಾದ ಸಾಯಣಾ ಚಾರ್ಯ-ಮಾಧವಾಚಾರ್ಯರ ತಂಗಿಯಾದ ಸಿಂಗಲೆಯ ಮಗನು. ಈತನಲ್ಲದೆ ನಾಗಪ್ಪ ದಂಡನಾಯಕ ಮೊದಲಾದ ಹಲವರು ರಾಯನಿಗೆ ಮಂತ್ರಿಗಳಾಗಿದ್ದರು. ಶೃಂಗೇರೀಪೀಠದ ಚಂದ್ರಶೇಖರಭಾರತೀ ಒಡೆಯರು ದೇವರಾಯನ ಗುರುಗಳಾಗಿದ್ದರು.

ರಾಯನಿಗೆ ಮೂವರು ಹೆಂಡಂದಿರು: ಮಲ್ಲಿಯಮ್ಮ, ಹೇಮಾಂಬಿಕೆ, ಭೀಮಾದೇವಿ. ಕಡೆಯವಳು ಜೈನಮತದವಳು. ರಾಯನಿಗೆ ಐವರು ಮಕ್ಕಳು: ವೀರಮಲ್ಲಪ್ಪ, ವೀರವಿಜಯರಾಯ, ಭಾಸ್ಕರರಾಯ, (ಮುಮ್ಮಡಿ) ಹರಿಹರ, ರಾಮಚಂದ್ರರಾಯ. ವಿಜಯರಾಯನು ಯುವರಾಜನೂ ಮುಳಬಾಗಲ್‌ಪ್ರಾಂತಕ್ಕೆ ಅಧಿಕಾರಿಯೂ ಆಗಿದ್ದನು.

ಭಾಸ್ಕರರಾಯನು ಅರಗ-ಗುತ್ತಿ-ಬಾರಕೂರುಪ್ರದೇಶಕ್ಕೆ, ಹರಿಹರನು ತೆರಕಣಾಂಬಿಗೆ, ರಾಮಚಂದ್ರನು ಉದಯಗಿರಿಗೆ ಹೀಗೆ ಅಧಿಕಾರಿಗಳಾಗಿದ್ದರು. ರಾಮಚಂದ್ರನು ಬಹಮನಿಯವರೊಡನೆ ನಡೆದ ಎರಡೂ ಯುದ್ಧಗಳಲ್ಲಿ ಪ್ರಮುಖಭಾಗವನ್ನು ವಹಿಸಿ, ಉತ್ಕಟವಾದ ಶೌರ್ಯವನ್ನು ಮೆರೆಸಿದನು.

ದೇವರಾಯನು ವಿಜಯನಗರ ರಾಜಧಾನಿಯನ್ನು ವಿಸ್ತಾರಗೊಳಿಸಿದನು. ಕೋಟೆಕೊತ್ತಳಗಳನ್ನು ಬೆಳೆಸಿ ಬಹಳ ಸುರಕ್ಷಿತವಾಗಿ ಮಾಡಿದನು. ಹದಿನೈದು ಮೈಲುಗಳ ಮೇಲೆ ತುಂಗಭದ್ರೆಗೆ ಆಣೆಕಟ್ಟು ಹಾಕಿಸಿ, ಕಾಲುವೆಗಳನ್ನು ತೆಗೆಸಿ ಕೃಷಿಯನ್ನು ಬೆಳೆಸಿದನು. ಇದರಿಂದ ವಿಜಯನಗರದಲ್ಲಿ ನೀರಿನ ಸಮೃದ್ಧಿಯಾಯಿತು. ಸುತ್ತಲು ಉದ್ಯಾನಗಳು, ಉಪವನಗಳು ನಿರ್ಮಾಣವಾಗಿ ರಾಜಧಾನಿಯ ಸೌಂದರ್ಯವು ಹೆಚ್ಚಿತು. ಇದಲ್ಲದೆ ಹರಿಹರದ ಬಳಿಯಲ್ಲಿ ಹರಿದ್ರಾಹೊಳೆಗೆ ಇನ್ನೊಂದು ಆಣೆಕಟ್ಟನ್ನು ಏರ್ಪಡಿಸಿ ಜನರಿಗೆ ಸೌಕರ್ಯವನ್ನು ಒದವಿಸಿದನು.

ಈ ಕಾಲದಲ್ಲಿ ಬುಕ್ಕರಾಯನ ಮೊಮ್ಮಗನಾದ ದೇಪರಾಜನು ಸೊಬಗಿನ ಸೋನೆ, ಅಮರುಕ ಎಂಬ ಕನ್ನಡ ಗ್ರಂಥಗಳನ್ನು ರಚಿಸಿದನು.

ದೇವರಾಯನು ೧೪೨೨ರಲ್ಲಿ ಸ್ವರ್ಗಸ್ಥನಾಗಲು ವೀರವಿಜಯರಾಯನು ಪಟ್ಟಾಧಿಕಾರಿಯಾದನು.

---

## ಏಳನೆಯ ವಿಲಾಸ

# ೭. ವೀರವಿಜಯರಾಯ (೧೪೨೨-೨೪)

ವೀರವಿಜಯರಾಯನಿಗೆ ವೀರಬುಕ್ಕ, ವಿಜಯಬುಕ್ಕ, ವೀರಭೂಪತಿ ಮೊದಲಾದ ಹೆಸರುಗಳು ಇದ್ದುವು.

ವೀರವಿಜಯರಾಯನು ರಾಜ್ಯಸೂತ್ರಗಳನ್ನು ಕೈಕೊಳ್ಳುವಾಗ ಬಹಮನಿಯವರೊಡನೆ ಸಂಗ್ರಾಮವು ನಡೆದೇ ಇತ್ತು. ಅಹಮದಶಹನು ಸೈನ್ಯದೊಂದಿಗೆ ತುಂಗಭದ್ರೆಯತ್ತ ಸಾಗಿಬಂದನು (೧೪೨೩).

ವರಂಗಲ್‌ರಾಜನು ವಿಜಯನಗರದವರನ್ನು ಕೂಡಿದನು. ಆದರೆ ಮುಂದೆ ಆಯಕಟ್ಟಿನ ಪ್ರಸಂಗದಲ್ಲಿ ವರಂಗಲ್ ಸೇನೆಯು ವಿಜಯನಗರ ದವರನ್ನು ತೊರೆಯಿತು. ಅರಿಗಳು ಮುಂಜಾವಿನ ನಸುಗತ್ತಲೆಯಲ್ಲಿ ಫಕ್ಕನೆ ರಾಯನ ಪಾಳ್ಯದ ಮೇಲೆ ಬಂದೆರಗಿದರು. ಸೈನ್ಯವು ಸಜ್ಜಾ ಗಲು ಸಮಯವೇ ಇರಲಿಲ್ಲ. ರಾಯನು ಹೇಗೋ ಪಾರಾಗಿಹೋದನು. ಶಹನು ಕೊಲೆಸುಲಿಗೆಗಳ ಹುಯಿಲನ್ನೆಬ್ಬಿಸಿದನು. ನೆರೆನಾಡಿನಲ್ಲಿಯ ಗುಡಿಗೋಪುರಗಳು, ಮಠಸಾಲೆಗಳು ಒಂದೂ ಉಳಿಯಲಿಲ್ಲ.

ಇದರಿಂದ ಸಂತಪ್ತರಾದ ಹಿಂದುಗಳು ಶಹನ ವಧೆಯ ಪ್ರತಿಜ್ಞೆ ಮಾಡಿದರು. ಆತನು ಬೇಟೆಗೆ ಹೊರಟಾಗ ಹೊಂಚನ್ನಿಟ್ಟು ಆತನನ್ನು ಮುಕರಿದರು. ಆಯುತ ಸಮಯಕ್ಕೆ ಅಂಗರಕ್ಷಕರು ಬಂದೊದಗದಿದ್ದರೆ ಅಂದು ಶಹನ ಪ್ರಾಣವು ಉಳಿದಿರಲಿಲ್ಲ. ಪ್ರಜೀವದಿಂದ ಪಾರಾಗಿಹೋದ ಶಹನು ಸೇನೆಯೊಡನೆ ವಿಜಯನಗರದತ್ತ ಸಾಗಿದನು. ರಾಯನು ಅತಿ ಶೌರ್ಯದಿಂದ ಆತನನ್ನು ಇದಿರಿಸಿದನು. ಕೊನೆಗೆ ಸಂಧಾನವಾಗಿ ಶಾಂತಿಯು ಉಂಟಾಯಿತು.

ವಿಜಯನಗರದೊಡನೆ ಒಪ್ಪಂದವಾಗಲು, ಶಹನು ತನಗೆ ವಿರೋಧ ವಾಗಿ ವಿಜಯನಗರವನ್ನು ಕೂಡಿದ ವರಂಗಲ್ಲ ಮೇಲೆ ಶಸ್ತ್ರವನ್ನು ಹಿರಿ ದನು. ಹಿರಿಯ ಬುಕ್ಕರಾಯನ ಕಾಲದಿಂದ ಬಲಗುಂದಿ ಬಳಕುತ್ತಿರುವ ವರಂಗಲ್ಲ ರಾಜ್ಯವು ಜರ್ಜರಿತವಾಗಿ ಬಹಮನಿಯವರ ಪಾಲಾಯಿತು. ಅಂದಿನಿಂದ ವರಂಗಲ್ಲ ಹಿಂದು ಅರಸೊತ್ತಿಗೆಯು ದಕ್ಷಿಣಭಾರತದ ಭೂಪೃಷ್ಠದ ಮೇಲಿಂದ ಅಳಿಸಿಹೋಯಿತು (೧೪೨೪)!

ವಿಜಯರಾಯನ ಆಳಿಕೆಯು ಅತ್ಯಲ್ಪಕಾಲಿಕವಾಯಿತು. ಅದರಲ್ಲಿ ಬಹುಭಾಗವು ಹಗೆಗಳೊಡನೆ ಕಾದುವುದರಲ್ಲಿ ಕಳೆಯಿತು. ರಾಯನು ರಾಜ್ಯಕಾರ್ಯಕುಶಲನಾಗಿದ್ದನು. ವಿದ್ಯೆಗೆ ಪ್ರೋತ್ಸಾಹವಿತ್ತನು. ಅನೇಕ ಪಂಡಿತರಿಗೆ, ಕವಿಗಳಿಗೆ ಆಶ್ರಯವನ್ನು ನೀಡಿದನು. ಕವಿಗಳು ಈತನನ್ನು ಎರಡನೆಯ ಭೋಜರಾಜನೆಂದು ಹೊಗಳಿರುವರು. ಈತನಿಗೆ ನಾಲ್ವರು ಮಕ್ಕಳು. ಅವರಲ್ಲಿ ಮೂವರು ಗಂಡುಮಕ್ಕಳು. ಹಿರಿಯ

ನಾದ (ಇಮ್ಮಡಿ) ದೇವರಾಯನು ಈತನ ಜೊತೆಗೆ ರಾಜ್ಯಕಾರ್ಯದಲ್ಲಿ ಸಹಾಯನಾಗಿದ್ದನು. ಎರಡನೆಯವನಾದ ವೀರಪಾರ್ವತಿರಾಯನು ತೆರಕಣಾಂಬಿ ಪ್ರಾಂತವನ್ನು ಆಳುತ್ತಿದ್ದನು. ಮೂರನೆಯವನಾದ ಶ್ರೀಗಿರಿಭೂಪಾಲ ಅಥವಾ ಪ್ರತಾಪದೇವರಾಯನು ಕಂಚೀರಾಜ್ಯಕ್ಕೆ ಅಧಿಪತಿಯಾಗಿದ್ದನು. ಈತನು ಅಣ್ಣ ದೇವರಾಯನಿಗೆ ಸಹಾಯನಾಗಿ ಅವನ ಕೀರ್ತಿಯನ್ನು ಹೆಚ್ಚಿಸಿದನು.

ವಿಜಯರಾಯನು ೧೪೨೪ರಲ್ಲಿ ನಿಧನ ಹೊಂದಲು ದೇವರಾಯನು ಸಾಮ್ರಾಜ್ಯಕ್ಕೆ ಒಡೆಯನಾದನು.

---

## ೮. ಇಮ್ಮಡಿ ದೇವರಾಯ (೧೪೨೪-೪೬)

ಈತನಿಗೆ ಪ್ರತಾಪದೇವರಾಯ, ಪ್ರೌಢದೇವರಾಯ, ಅಭಿನವ-ವೀರ ದೇವರಾಯ ಮೊದಲಾದ ಹೆಸರುಗಳು ಇದ್ದುವು. **ಗಜವೇಂಟೆಕಾರ** ಎಂಬುವು ಈತನ ವಿಶಿಷ್ಟವಾದ ಬಿರುದು ಆಗಿತ್ತು.

ರಾಯನು ಸ್ವಲ್ಪ ವರ್ಷಗಳು ಆಳುವಷ್ಟರಲ್ಲಿ ಅರಗರಾಜ್ಯದಲ್ಲಿ ತೊಂದರೆಯುಂಟಾಯಿತು. ಬೋಲೆಯ ಮುಮ್ಮಯ್ಯನೆಂಬ ಬೇಡ ನಾಯಕನು ಪುಂಡಾಟಿಕೆಯನ್ನು ಹೂಡಿ ಕೊಲೆಸುಲಿಗೆಗಳನ್ನು ಆರಂಭಿಸಿದನು. ಈ ಹಾವಳಿಯಿಂದ ಜನರು ಬಹಳ ಪೀಡಿತರಾದರು. ಆ ನಾಡಿನ ಅಧಿಕಾರಿಯಾದ ವೀರಣ್ಣೊಡೆಯನು ಈ ಬೇಡನನ್ನು ಶಿಕ್ಷಿಸಲು ರಾಯನ ಅಪ್ಪಣೆಯನ್ನು ಪಡೆದು ದಂಡನ್ನು ಕೂಡಿಸಿದನು. ಅನೆವರಿ ನಾಡಿನ ನೂರಾರು ಕಾಲಾಳುಗಳೂ ಕುದುರೆಯಾಳುಗಳೂ ಆತನನ್ನು ಕೂಡಿದರು "ಏನು ಬಂದರೂ ನಮ್ಮ ಪ್ರತಿಜ್ಞೆಯನ್ನು ಪೂರಗಾಣಿಸಿ ನಮ್ಮ ಕುಲದ ಕೀರ್ತಿಯನ್ನು ಕಾಯುವೆವು. ಹರಿಹರ ಮಹಾರಾಯನ ಗುಂಡ ದಂಡನಾಯಕನು 'ಮೂರುರಾಯರ ಗಂಡ'ರೆಂದು ನಮಗೆ ಕೊಟ್ಟ ಬಿರುದು ಎಂದೂ ಸುಳ್ಳಾಗದು." ಎಂದು ಮುಂತಾಗಿ ಮಾತನಾಡಿ

ವೀರಣ್ಣನು ಜನರನ್ನು ಹುರಿದುಂಬಿಸಿದನು. ಇರಿತಕ್ಕೆ ಆರಂಭವಾಯಿತು. ತಿರಿಕಿಗೌಡನು ಅತುಲವಾದ ಪ್ರತಾಪವನ್ನು ಮೆರೆಸಿ ವೀರಸ್ವರ್ಗವನ್ನೈದಿದನು. ಬೇಡ ಮುಖಂಡರಿಗೆ ತಕ್ಕ ಶಾಸನವಾಗಿ ಪುಂಡರ ಸದ್ದು ಅಡಗಿತು (೧೪೨೭).

ಬಹಮನೀ ಸುಲ್ತಾನನಾದ ಅಹಮದಶಹನು ೧೪೩೫ರಲ್ಲಿ ಮರಣ ಹೊಂದಿ ಆತನ ಮಗನಾದ (ಮುಮ್ಮಡಿ) ಅಲ್ಲಾವುದ್ದೀನನು ಪಟ್ಟಕ್ಕೆ ಬಂದನು. ಕೂಡಲೆ ಆತನು ತನ್ನ ತಮ್ಮನಾದ ಮುಹಮ್ಮದಖಾನನ ನೇತೃತ್ವದಲ್ಲಿ ವಿಜಯನಗರದ ಮೇಲೆ ಬಲವಾದ ಸೇನೆಯನ್ನು ಕಳುಹಿದನು. ಆದರೆ ರಾಯನ ನೀತಿ ಚಾತುರ್ಯದಿಂದ ಹೆಚ್ಚಾಗಿ ಯುದ್ಧ ಪ್ರಸಂಗವು ಬರಲಿಲ್ಲ. ರಾಯನು ಯುಕ್ತಿಯಿಂದ ಖಾನನನ್ನು ಒಲಿಸಿಕೊಂಡುಬಿಟ್ಟನು. ಬಳಿಕ ಖಾನನು ರಾಯನ ಬೆಂಬಲದಿಂದ ಅಣ್ಣನಿಗೆ ಇದಿರಾಗಿ ಬಂಡಾಯವನ್ನು ಹೂಡಿ ಎಷ್ಟೋ ಊರುಗಳನ್ನು ಗೆದ್ದುಕೊಂಡನು. ಆದರೆ ಮುಂದೆ ಆತನು ಶಹನ ದಂಡಿಗೆ ಸೋಲಬೇಕಾಯಿತು. ಶಹನು ಆತನಿಗೆ ರಾಯಚೂರು ಪ್ರದೇಶವನ್ನು ಕೊಟ್ಟು ಸಮಾಧಾನ ಪಡಿಸಿದನು.

ರಾಯನ ಆಳಿಕೆಯು ಬಹುಭಾಗವು ಶಾಂತಿಯಲ್ಲಿಯೂ ಸುಸ್ಥಿತಿಯಲ್ಲಿಯೂ ಕಳೆದುಹೋಯಿತು.

ರಾಯನ ಆಳಿಕೆಯ ಕಡೆಕಡೆಗೆ ಆತನ ಮೇಲೆ ಒಂದು ಭಯಂಕರವಾದ ಗಂಡಾಂತರವು ಒದಗಿತು. ರಾಯನನ್ನೂ ಆತನ ಪ್ರಮುಖ ಅಧಿಕಾರಿಗಳನ್ನೂ ಸಂಹರಿಸಬೇಕೆಂದು ಅರಮನೆಯಲ್ಲಿ ಘೋರವಾದ ಒಳಸಂಚು ನಡೆಯಿತು. ರಾಯನ ತಮ್ಮನೆ[1] ಈ ಸಂಚುಗಾರರ ನಾಯಕನಾಗಿದ್ದನು. ಆತನು ಒಂದು ಹೊಸ ಅರಮನೆಯನ್ನು ಕಟ್ಟಿಸಿ, ಸಮಾರಾಧನೆಯನ್ನು ಮಾಡಿ, ಅಲ್ಲಿಗೆ ರಾಯನಿಗೂ ರಾಜ್ಯದ ಪ್ರಮುಖ ಅಧಿಕಾರಿಗಳಿಗೂ ಔತಣವಿತ್ತನು. ಬಂದ ಅತಿಥಿಗಳನ್ನು ಒಬ್ಬೊಬ್ಬರನ್ನಾಗಿ

೧. ಈತನು ಯಾರು ಎಂಬುದು ನಿಶ್ಚಿತವಾಗಿ ತಿಳಿವುದಿಲ್ಲ. ಶ್ರೀಗಿರಿಯು ಆಗಿರಬೇಕೆಂದು ಅನುಮಾನವಿದೆ.

ಬೇರೆಬೇರೆ ಕೋಣೆಗೆ ಊಟಕ್ಕೆ ಕರೆದುಕೊಂಡು ಹೋಗಿ, ಗುಪ್ತವಾಗಿ ರಿಸಿದ ಕೊಲೆಗಾರರಿಂದ ಕೊಲ್ಲಿಸಲಾರಂಭಿಸಿದನು. ಆ ಸಮಯದಲ್ಲಿ ಹೆಚ್ಚಾಗಿ ವಾದ್ಯಗಳು ಮೊಳಗುವಂತೆ ವ್ಯವಸ್ಥೆಯನ್ನು ಮಾಡಿದುದರಿಂದ ಉಳಿದ ಯಾವ ಧ್ವನಿಯೂ ಕೇಳಿಸುವಂತೆ ಇರಲಿಲ್ಲ.

ಈ ಕ್ರಮದಿಂದ ಪ್ರಮುಖ ಅತಿಥಿಗಳೆಲ್ಲರ ಸಮಾಚಾರವು ಮುಗಿಯಲು, ತಮ್ಮನು ರಾಯನನ್ನು ಕರೆಯಬಂದನು. ರಾಯನು ಯಾವ ಸುಬುದ್ಧಿಯಿಂದಲೊ "ಮೈಯಲ್ಲಿ ಸೊಗಸಿಲ್ಲ, ಬರಲಾರೆನು" ಎಂದನು. ಕೈ ಗೆಬಂದ ಬೇಟೆಯು ಹೀಗೆ ಜಾರಿಹೋಗುವುದೆಂದು ಕಾತರನಾದ ತಮ್ಮನು ರಾಯನನ್ನು ಅಲ್ಲಿಯೆ ಕತ್ತಿಯಿಂದ ಇರಿಯತೊಡಗಿದನು. ರಾಯನು ನೆಲಕ್ಕುರುಳಿದನು. ಆತನು ಮೃತನಾದನೆಂದು ಬಗೆದ ತಮ್ಮನು ಆತನ ತಲೆಯನ್ನು ಕೊಯ್ದು ತರಲು ಸೇವಕನಿಗೆ ಆಜ್ಞಾಪಿಸಿ, ಉಪ್ಪರಿಗೆಯನ್ನು ಏರಿ "ನಾನು ರಾಜನಾಗಿರುವೆನು" ಎಂದು ಸಾರಿ ಹೇಳತೊಡಗಿದನು. ಇತ್ತ ಮೂರ್ಛಿತನಾದ ರಾಯನು ಚೇತರಿಸಿಕೊಂಡೆದ್ದು ತನ್ನನ್ನು ಕೊಲ್ಲಲು ಬಂದ ಸೇವಕನನ್ನು ಹಣಿದು, ಅಲ್ಲಿಯೆ ಅಡಗಿ ಜೀವವುಳಿಸಿಕೊಂಡಿದ್ದ ತನ್ನ ಒಬ್ಬ ಕಾವಲಾಳಿನ ಸಹಾಯದಿಂದ ಹೊರಗೆ ಬಂದು, ತಾನು ಜೀವಂತನಾಗಿದ್ದುದನ್ನು ಜನರಿಗೆ ಅರುಹಿ ಆ ಬಂಧು ದ್ರೋಹಿಯನ್ನು ಬಂಧಿಸಲು ಆಜ್ಞೆಯಿತ್ತನು. ನೆರೆದ ಜನರು ಕೂಡಲೆ ಆ ನರಾಧಮನ ಮೇಲೆ ನುಗ್ಗಿಬಿದ್ದು ಆತನನ್ನು ಕೊಂದುಹಾಕಿದರು. ಈ ಕಾಲಕ್ಕೆ ಮಂತ್ರಿವರನಾದ ಲಕ್ಕಣ್ಣ ದಣ್ನಾಯಕನು ಲಂಕೆಯ ದಂಡಯಾತ್ರೆಗೆ ಹೋಗಿದ್ದುದರಿಂದ ಈ ನರಬಲಿಯಲ್ಲಿ ಆಹುತಿಯಾಗಲಿಲ್ಲ (೧೪೪೨-೪೩).[೨]

ಈ ಕುತ್ತಿನಿಂದ ರಾಯನು ನರಳುತ್ತಿರುವಾಗಲೆ ಆತನನ್ನು ಹಿಚುಕಿ ಬಿಡಬೇಕೆಂದು ಯೋಚಿಸಿ, ಸುಲ್ತಾನ ಅಲ್ಲಾವುದ್ದೀನನು, ರಾಯನು ತನಗೆ ಏಳು ಲಕ್ಷ ವರಹಗಳನ್ನು ಕೊಡುವುದಾಗಿ ಕೇಳಿ ಸೈನ್ಯವನ್ನು ಸಜ್ಜುಗೊಳಿಸಿದನು. ರಾಯನು ಅದನ್ನು ನಿಷ್ಠುರವಾಗಿ ನಿರಾಕರಿಸಿ

೨. ದಿ. ಟಿ. ೧೦.

ಸಮರಕ್ಕೆ ಸಿದ್ಧನಾದನು. ಅಷ್ಟರಲ್ಲಿ ಲಂಕೆಯ ದಿಗ್ವಿಜಯದಿಂದ ಮರಳಿ ಬಂದ ಲಕ್ಕಣ್ಣ ದಣ್ಣಾಯಕನು ಬಹಮನೀರಾಜ್ಯದಲ್ಲಿ ನುಗ್ಗಿ ಕಲಬುರ್ಗಿ ಪ್ರಾಂತದಲ್ಲಿ ಕೊಳ್ಳೆಯಿಟ್ಟನು. ರಾಜಕುಮಾರರಿಬ್ಬರು ಸೇನೆಯೊಂದಿಗೆ ಹೊರಟು ಬಂಕಾಪೂರ ಮತ್ತು ರಾಯಚೂರು ಕೋಟೆಗಳನ್ನು ಮುತ್ತಿದರು. ಆದರೆ ಅವರ ಪ್ರಯತ್ನಗಳು ಯಶಸ್ವಿಯಾಗಲಿಲ್ಲ. ಎರಡು ತಿಂಗಳುಗಳ ವರೆಗೆ ಉಭಯ ದಳಗಳ ನಡುವೆ ಘನಘೋರವಾದ ಸಂಗ್ರಾಮವು ನಡೆಯಿತು. ವಿಜಯನಗರದ ಹೊಡೆತದಿಂದ ವೈರಿಗಳು ಹಣ್ಣಾದರು. ಉಭಯ ಪಕ್ಷಗಳಲ್ಲಿ ಬಹಳ ಪ್ರಾಣಹಾನಿಯಾಯಿತು. ರಾಯನ ಹಿರಿಯ ಮಗನು ಹತನಾದನು. ಕೊನೆಗೆ ಸಂಧಾನವಾಗಿ ಶಾಂತಿಯು ನೆಲೆಗೊಂಡಿತು. ರಾಜ್ಯದ ಮೇರೆಗಳು ಮೊದಲಿದ್ದಂತೆ ಉಳಿದುಕೊಂಡುವು (೧೪೪೩).

ಈ ಯುದ್ಧಕ್ಕೆ ಸ್ವಲ್ಪದಿನಗಳ ಹಿಂದೆ ಲಕ್ಕಣ್ಣ ದಣ್ಣಾಯಕನು ಸಿಂಹಳದ್ವೀಪದ ಮೇಲೆ ವಿಜಯಯಾತ್ರೆಯನ್ನು ಮಾಡಿದನು. ಹಿಂದೆ ಒಂದು ಸಲ ಇಮ್ಮಡಿ ಹರಿಹರನ ಕಾಲದಲ್ಲಿ ಇಮ್ಮಡಿ ವಿರೂಪಾಕ್ಷನ ಕೈಕೆಳಗೆ ವಿಜಯನಗರದ ದಂಡು ಲಂಕೆಯ ಮೇಲೆ ಹೋಗಿತ್ತು. ಇದು ಲಂಕೆಯ ಎರಡನೆಯ ದಂಡಯಾತ್ರೆಯು. ಲಕ್ಕಣ್ಣನು ಮತ್ತೆ ಲಂಕೆಯ ಪ್ರದೇಶವನ್ನು ಗೆದ್ದು ಅಲ್ಲಿಯ ರಾಜನಾದ (ಆರ್ಷಡಿ) ಪರಾಕ್ರಮಬಾಹುವಿನ ಮೇಲೆ ಕಪ್ಪವನ್ನು ಹೇರಿದನು (೧೪೪೩). ಸಿಂಹಲೀಭಾಷೆಯ ಕವನಗಳಲ್ಲಿ ಕನ್ನಡಿಗರ ಈ ದಿಗ್ವಿಜಯದ ನಿರ್ದೇಶವು ಬರುತ್ತದೆ.

ದೇವರಾಯನಿಗೆ ಇಬ್ಬರು ಹೆಂಡಂದಿರು: ಪೊನ್ನಲದೇವಿ, ಭೀಮಾದೇವಿ. ಪೊನ್ನಲದೇವಿಗೆ ಮಲ್ಲಿಕಾರ್ಜುನನು ಮಗನಾದನು. ರಾಯನ ತಮ್ಮನಾದ ಪ್ರತಾಪದೇವರಾಯನು (ಶ್ರೀಗಿರಿ) ಮುಳಬಾಗಲ್, ಕಂಚಿ, ಪೆನುಗೊಂಡ ಮುಂತಾದ ಪ್ರಾಂತಗಳಿಗೆ ಅಧಿಕಾರಿಯಾಗಿದ್ದನು. ಈತನ ಮಗನು (ಮುಮ್ಮಡಿ) ವಿರೂಪಾಕ್ಷನು. ಈತನು ಮುಂದಿನ ಆಳಿಕೆಯಲ್ಲಿ ಮುಂದೆ ಬರುವನು.

ಸಂಗಣ್ಣ ದಣ್ಣಾಯಕನು ಮತ್ತು ಲಕ್ಕಣ್ಣ ದಣ್ಣಾಯಕನು (ದಂಡೇಶ) ಇವರು ರಾಯನ ಮುಖ್ಯ ಮಂತ್ರಿಗಳಾಗಿದ್ದರು. ಲಕ್ಕಣ್ಣ

ನಿಗೆ ದಕ್ಷಿಣ ಸಮುದ್ರಾಧಿಪತಿ ಎಂಬ ಬಿರುದು ಇತ್ತು. ಈತನು ವೀರಶೈವಮತೀಯನೂ ಕನ್ನಡಕವಿಯೂ ಆಗಿದ್ದನು. ರಾಯಭಂಡಾರಿ ನಾರಾಯಣ ಗುರುರಾಯನು ಇನ್ನೊಬ್ಬ ಮಂತ್ರಿಯಾಗಿದ್ದನು. ಈತನ ಆಶ್ರಿತನಾದ ಚಂದ್ರಕವಿಯು ಅಷ್ಟಭಾಷಾವಿಶಾರದನಾಗಿದ್ದು ವಿಜಯ ನಗರವನ್ನು ವರ್ಣಿಸುವ ವಿರೂಪಾಕ್ಷಾಸ್ಥಾನ ಎಂಬ ಕಾವ್ಯವನ್ನು ಬರೆದನು. ವೀರಶೈವ ಕವಿಯಾದ ಚಕ್ಕಣಾರ್ಯನು ದಂಡನಾಯಕನ ಅಧಿಕಾರದಲ್ಲಿದ್ದನು. ಗೋಪರಾಜನು ತೇಕಲನಾಡಿನ ಅಧಿಕಾರಿಯಾಗಿದ್ದನು. ಆತನು ತೇಕಲ (ರಾಜಗಂಭೀರ) ಕೋಟೆಯನ್ನು ಜೀರ್ಣೋದ್ಧಾರ ಮಾಡಿ ಅದರಲ್ಲಿ ಹುಲಿಗಳನ್ನು ತಂದಿರಿಸಿದನು. ವೀರಪಾಂಡ್ಯನು ಕಲಾಸನಾಡಿನ ಅಧಿಕಾರಿಯಾಗಿದ್ದನು. ಈತನು ಕಾರ್ಕಳದ ಭವ್ಯವಾದ ಜೈನವಿಗ್ರಹ ವನ್ನು ಸ್ಥಾಪಿಸಿದನು.

ಈ ರಾಯನ ಆಳಿಕೆಯು ಸಾಮ್ರಾಜ್ಯಕ್ಕೂ ಪ್ರಜಾಜನರಿಗೂ ಹಿತಾವಹವಾಯಿತು. ಈ ಆಳಿಕೆಯಲ್ಲಿ ವಿಸ್ತಾರವಾದ ವಿಜಯನಗರ ಸಾಮ್ರಾಜ್ಯದ ಪ್ರಭಾವವು ಹೆಚ್ಚಿತು. ಅದರ ಕೀರ್ತಿಯು ದ್ವೀಪಾಂತರ ಗಳಲ್ಲಿ ಪಸರಿಸಿತು. ಈ ಕಾಲದಲ್ಲಿ ವಿಜಯನಗರ ರಾಜಧಾನಿಯು ವೈಭವ ಶಿಖರದ ಮೇಲೆ ವಿರಾಜಮಾನವಾಗಿ ಪರದೇಶದ ಪ್ರವಾಸಿಗರನ್ನು ತನ್ನೆಡೆಗೆ ಎಳೆದುಕೊಂಡಿತು. ಅವರು ದಕ್ಷಿಣಭಾರತದಲ್ಲಿ ಅತಿರಮಣೀಯ ವಾದ ಈ ನಗರಿಯನ್ನು ಸಂದರ್ಶಿಸಿ ಪರಿಪರಿಯಿಂದ ಬಣ್ಣಿಸಿರುವರು. ೧೪೨೦ರ ಸುಮಾರಿಗೆ ವಿಜಯನಗರಕ್ಕೆ ಬಂದ ಇಟಾಲಿಯನ್ ಪ್ರವಾಸಿಯಾದ ನಿಕೊಲೊ ಕೊಂಟಿಯು ಈ ರಾಜಧಾನಿಯನ್ನು ಕುರಿತು ಹೇಳುವುದು ಹೀಗೆ:

"ಈ ಬಿಜೆನೆಗೆಲಿಯಾ ನಗರಿಯ ಸುತ್ತಳತೆಯು ಅರವತ್ತು ಮೈಲು. ಈ ಊರಲ್ಲಿ ತೊಂಭತ್ತು ಸಾವಿರ ಜನರು ಶಸ್ತ್ರವಿದ್ಯೆಯಲ್ಲಿ ಬಲ್ಲವರಿರು ವರು. ಇಲ್ಲಿಯ ರಾಜನು ಇಂಡಿಯಾದೇಶದ ಎಲ್ಲ ರಾಜರಿಗಿಂತಲೂ ಬಲಾಢ್ಯನಾಗಿರುವನು."

ಇರಾಣದಿಂದ ರಾಯಭಾರಿಯಾಗಿ ೧೪೪೩ರಲ್ಲಿ ವಿಜಯನಗರಕ್ಕೆ ಬಂದ ಅಬ್ದುಲ ರಜಾಕನು ಬಣ್ಣಿಸಿದುದು ಇಂತು:

"ಬಿಜನಗರ ರಾಜ್ಯವು ಸರಂದೀಪ (ಸಿಂಹಲದ್ವೀಪ) ದಿಂದ ಕಲಬು ರ್ಗಿಯ ವರೆಗೂ ಬಂಗಾಲದಿಂದ ಮಲಬಾರದ ವರೆಗೂ ಹಬ್ಬಿದೆ. ಈ ರಾಜ್ಯದಲ್ಲಿ ಮೂರುನೂರು ಉತ್ತಮವಾದ ಬಂದರಗಳಿವೆ. ಬೆಟ್ಟದಂತಹ ಸಾವಿರ ಆನೆಗಳಿವೆ. ಹನ್ನೊಂದು ಲಕ್ಷ ವೀರಭಟರು ಇರುವರು. ಇಡೀ ಹಿಂದುಸ್ತಾನದಲ್ಲಿ ಈ ರಾಜನಿಗಿಂತ ಹೆಚ್ಚು ಬಲಿಷ್ಠನಾದ ರಾಜನಿಲ್ಲ.

"ಆಹ! ಬಿಜನಗರ ಪಟ್ಟಣವನ್ನು ಏನೆಂದು ಬಣ್ಣಿಸಲಿ! ಭೂಮಂಡ ಲದ ಮೇಲೆ ಇಂತಹ ಇನ್ನೊಂದು ನಗರಿಯನ್ನು ಕಣ್ಣುಗಳು ನೋಡಿಲ್ಲ ಕಿವಿಗಳು ಕೇಳಿಲ್ಲ. ಇದರ ಸುತ್ತಲು ವರ್ತುಲಾಕಾರವಾಗಿ ಒಂದರೊಳ ಗೊಂದು ಏಳು ಕೋಟೆಗಳಿವೆ. ಇವುಗಳೊಳಗೆ ಬಗೆಬಗೆಯ ಪೇಟೆ ಗಳೂ ಅಂಗಡಿಯ ಸಾಲುಗಳೂ ಇಟ್ಟಣಿಗೊಂಡಿರುವುವು. ಒಂದೊಂದು ಪೇಟೆಯ ನಡುವೆ ಎತ್ತರವಾದೊಂದು ಉಪ್ಪರಿಗೆಯ ಮನೆಯಿದೆ. ಇವೆಲ್ಲವುಗಳಿಗಿಂತ ಉತ್ತುಂಗವಾಗಿ ರಾಯನ ಅರಮನೆಯು ಮೆರೆಯು ತ್ತಿರುವುದು.

"ಇಲ್ಲಿ ಬೇರೆಬೇರೆ ವರ್ತಕಸಂಘಗಳು ಇರುವುವು. ಇಲ್ಲಿಯ ಜನರು ಶೃಂಗಾರಪ್ರಿಯರು. ಇಲ್ಲಿ ಎತ್ತನೋಡಿದತ್ತ ಸಂಪತ್ತು, ಸುಗಂಧ, ಸಮೃದ್ಧಿ! ಸುವಾಸನೆಯುಳ್ಳ ಹೂಗಳು ಇಲ್ಲಿ ಹನ್ನೆರಡು ಕಾಲ ದೊರೆವುವು. ಬಯಲು ಬೀದಿಗಳಲ್ಲಿ ಮುತ್ತು, ಮಾಣಿಕ, ಪಚ್ಚೆ, ರತ್ನಗಳ ವ್ಯಾಪಾರವು ನಡೆವುದು. ಹಣವಂತರ ಮಾತಂತಿರಲಿ; ಬೇಸಾಯಗಾರರೂ ಸಾಮಾನ್ಯಜನರೂ ಬೆಲೆಯುಳ್ಳ ರನ್ನಚಿನ್ನದ ಆಭರಣಗಳನ್ನು ಧರಿಸುವರು........

"ಸಕಲೈಶ್ವರ್ಯದಿಂದ ಸುಶೋಭಿತವಾದ ಓಲಗದಲ್ಲಿ ಮಹಾ ರಾಜನು ಕುಳಿತಿದ್ದನು. ಇಬ್ಬದಿಯಲ್ಲಿ ಬಹುಜನರು ದುಂಡುಗಟ್ಟಿ ಓರಣ ವಾಗಿ ನಿಂತುಕೊಂಡಿದ್ದರು. ರಾಯನ ಬಣ್ಣವು ತಿಳಿಗೆಂಪು. ಮೈಯ್ಕಟ್ಟು ತೆಳುವಾದುದು. ನಿಲುವಿಕೆಯು ನಸು ಎತ್ತರವು. ಮುಖಮುದ್ರೆಯು ಅತ್ಯಂತ ಪ್ರಸಾದಪೂರ್ಣವು.........."

ರಾಯನ ಆಳಿಕೆಯಲ್ಲಿ ವಿಜಯನಗರದ ವ್ಯಾಪಾರವು ಅಭಿವೃದ್ಧಿ

ಹೊಂದಿತು. ಜಲ-ಸ್ಥಲಮಾರ್ಗಗಳಿಂದ ದೂರದ ದೇಶಗಳಿಗೆ ಸರಕು ಬರುಹೋಗುತ್ತಿತ್ತು. ಆಂಧ್ರಕವಿ ಶ್ರೀನಾಥನ ಪೋಷಕನಾದ ವೈಶ್ಯ ವರ್ತಕನು ಪಂಜಾಬದಿಂದ ಕರ್ಪೂರದ ಅಗಿ, ಲಂಕೆಯಿಂದ ಆನೆ, ಓರ್ಮಜ ದಿಂದ ಕುದುರೆ, ಗೋಸೆಯಿಂದ ಕಸ್ತೂರಿ, ಚೀನದಿಂದ ರೇಶಿಮೆ ಮುಂತಾದ ವಸ್ತುಗಳನ್ನು ತರಿಸಿ ವ್ಯಾಪಾರಮಾಡುತ್ತಿದ್ದನೆಂದು 'ಹರ ವಿಲಾಸಮು' ಕಾವ್ಯದಿಂದ ತಿಳಿಯುತ್ತದೆ. ವಿಜಯನಗರದ ಅರಸರು, ಬಹಮನೀ ಸುಲ್ತಾನರು, ಓರಿಸದ ಗಜಪತಿರಾಯರು, ಕೊಂಡವೀಡಿನ ರಡ್ಡೀನಾಯಕರು ಆತನ ಗಿರಾಕಿಗಳಾಗಿದ್ದರಂತೆ.

ರಾಯನ ಆಳಿಕೆಯು ಸಾಹಿತ್ಯಸೃಷ್ಟಿಯ ವಸಂತಕಾಲವಾಗಿದೆ. ಈ ಕಾಲದಲ್ಲಿ ವೀರಶೈವ, ಜೈನ, ಬ್ರಾಹ್ಮಣಮತೀಯರಾದ ಅನೇಕ ಕವಿಗಳು ಉದಯಿಸಿ ಸಂಸ್ಕೃತ, ಕನ್ನಡಗಳಲ್ಲಿ ಸಾಹಿತ್ಯವನ್ನು ನಿರ್ಮಿಸಿದರು. ಅವರಲ್ಲಿ ವೀರಶೈವಕವಿಗಳು ವಿಶೇಷವಾಗಿದ್ದು ಅವರು ಹುಟ್ಟಿಸಿದ ಗ್ರಂಥ ಸಂಪತ್ತಿಯೂ ಬಹಳವಾಗಿದೆ. ಈ ಗ್ರಂಥಗಳೆಲ್ಲ ಸಾಮಾನ್ಯವಾಗಿ ಮತ ಪ್ರಚಾರಕಸ್ವರೂಪದವೆ ಆಗಿರುವುವು. ಈ ಕಾಲವು ವೀರಶೈವಸಾಹಿತ್ಯದ ಸಂಘಟನೆಯ ಯುಗವೆಂದು ಹೇಳಬಹುದು. ಹಿಂದಿನ ಎರಡು-ಮೂರು ಶತಮಾನಗಳಲ್ಲಿ ಬಹುಮುಖವಾಗಿ ವಿಸ್ತಾರಗೊಂಡ ವೀರಶೈವಸಾಹಿತ್ಯ ದಲ್ಲಿ ಒಂದು ವ್ಯವಸ್ಥೆಯನ್ನು ಏರ್ಪಡಿಸಿ ಮತಸಂಪ್ರದಾಯಗಳನ್ನು ಸ್ಥಿರಗೊಳಿಸುವ ಸಮಯವು ಒದವಿತ್ತು. ಶಾಸ್ತ್ರೀಯವೂ ವಿವರಣಾ ತ್ಮಕವೂ ಪುರಾಣಾತ್ಮಕವೂ ಆದ ಅನೇಕ ಪ್ರೌಢಗ್ರಂಥಗಳು ಹುಟ್ಟಿ, ವೀರಶೈವಮತವನ್ನು ಜನಾಂಗದಲ್ಲಿ ವಿಸ್ತಾರಗೊಳಿಸಿ ಗೌರವದ ಸ್ಥಾನಕ್ಕೆ ಏರಿಸಿದುವು.

ಮಹಾಲಿಂಗದೇವ, ಜಕ್ಕಣಾರ್ಯ, ಲಕ್ಕಣ್ಣ ದಂಡೇಶ, ಕುಮಾರ ಬಂಕನಾಥ, ಗುಬ್ಬಿಯ ಮಲ್ಲಣಾರ್ಯ, ಚಾಮರಸ, ಕಲ್ಲಮಠದ ಪ್ರಭು ದೇವ, ಗುರುಬಸವ ದೊಡಲಾದ ವೀರಶೈವ ಕವಿಗಳು ಅನುಕ್ರಮವಾಗಿ ಏಕೋತ್ತರ ಶತಸ್ಥಲ, ನೂರೊಂದು ಸ್ಥಲ, ಶಿವತತ್ವಚಿಂತಾಮಣಿ, ಷಟ್ ಸ್ಥಲೋಪದೇಶ, ವೀರಶೈವಾಮೃತ ಪುರಾಣ, ಪ್ರಭುಲಿಂಗಲೀಲೆ, ಲಿಂಗ

ಲೀಲಾವಿಲಾಸಚರಿತ್ರ, ಶಿವಯೋಗಾಂಗಭೂಷಣ ಇವು ಮೊದಲಾದ ಗ್ರಂಥಗಳನ್ನು ಬರೆದರು.

ಕುಮಾರವ್ಯಾಸನು ಅತ್ಯಂತ ಓಜಸ್ವಿಯೂ ಜನಪ್ರಿಯವೂ ಆದ ಕನ್ನಡಭಾರತವನ್ನು ರಚಿಸಿದನು. ಕಲ್ಯಾಣಕೀರ್ತಿಯೆಂಬ ಜೈನಕವಿಯು ಜ್ಞಾನಚಂದ್ರಾಭ್ಯುದಯ, ಕಾಮನಕಥೆ ಮೊದಲಾದ ಗ್ರಂಥಗಳನ್ನು ಬರೆದನು. ತೇಕಲನಾಡಿನ ಅಧಿಕಾರಿಯೂ ರಾಯನ ತಂಗಿಯಾದ ಹರಿಯಮ್ಮನ ಮೊಮ್ಮಗನೂ ಆದ ಸಾಳುವ ಗೋಪರಾಜನು ಸಂಸ್ಕೃತ ಪಂಡಿತನಾಗಿದ್ದು ಕಾವ್ಯ, ಸಂಗೀತ, ನೃತ್ಯ ಮುಂತಾದ ಶಾಸ್ತ್ರಗಳನ್ನು ಕುರಿತು ಕಾಮಧೇನು, ತಾಳದೀಪಿಕಾ ಮೊದಲಾದ ಸಂಸ್ಕೃತ ಗ್ರಂಥಗಳನ್ನು ಬರೆದನು. ತೆಲುಗು ಕವಿಗಳೂ ರಾಯನ ಆಶ್ರಯವನ್ನು ಬಯಸಿದರು. ವಿಖ್ಯಾತ ಆಂಧ್ರಕವಿಯಾದ ಶ್ರೀನಾಥನು ರಾಯನ ಓಲಗಕ್ಕೆ ಬಂದು ಕನಕಾಭಿಷೇಕದ ಸನ್ಮಾನವನ್ನು ಪಡೆದನು.

ರಾಯನು ತನ್ನ ಪೂರ್ವಜರ ಪರಂಪರೆಯನ್ನು ಅನುಸರಿಸಿ ವೈಯಕ್ತಿಕವಾಗಿ ಶೈವಮತಾಭಿಮಾನಿಯಾಗಿದ್ದನು; ಆದರೂ ಅನ್ಯಧರ್ಮಮತಗಳಲ್ಲಿ ತುಂಬಾ ಸಹಾನುಭೂತಿಯುಳ್ಳವನಾಗಿದ್ದನು. ಈತನು ವೀರಶೈವ ಮತವನ್ನು ಬಹಳವಾಗಿ ಪ್ರೋತ್ಸಾಹಿಸಿದನು. ಈತನ ಕಾಲದಲ್ಲಿ ವೀರಶೈವಮತವು ಬಹಳ ಉಚ್ಛ್ರಾಯವನ್ನು ಪಡೆಯಿತು. ಈತನು ವೀರಶೈವ ಮತವನ್ನು ಸ್ವೀಕರಿಸಿದ್ದನು ಎಂದು ವೀರಶೈವ ಗ್ರಂಥಗಳಲ್ಲಿ ಹೇಳಲಾಗಿದೆ.

ರಾಯನು ತುಲಾಪುರುಷ ಮೊದಲಾದ ಅನೇಕ ದಾನಗಳನ್ನು ಮಾಡಿದನು. ತನ್ನ ಅರಮನೆಯ ನೆರೆಯಲ್ಲಿ ಒಂದು ಜೈನಬಸದಿಯನ್ನು ಕಟ್ಟಿಸಿದನು. ಇಷ್ಟೇ ಅಲ್ಲ; ತನ್ನ ರಾಜ್ಯದ ಹುಟ್ಟುಹಗೆಗಳಾದ ಮುಹಮ್ಮದೀಯರೊಡನೆಯೂ ಈತನಿಗೆ ವಿರೋಧಭಾವನೆಯಿರಲಿಲ್ಲ. ಮುಹಮ್ಮದೀಯರನ್ನು ತನ್ನ ರಾಜ್ಯದಲ್ಲಿ ಬಂದು ನೆಲೆಸಲು ಆಮಂತ್ರಿಸಿದನು. ತನ್ನ ರಾಜ್ಯದಲ್ಲಿ ನೆಲೆಸಿದ ಮುಹಮ್ಮದೀಯ ಬಂಧುಗಳ ಧಾರ್ಮಿಕ ಆಚಾರವಿಚಾರಗಳಿಗೆ ತೊಂದರೆಯಾಗದಂತೆ ವಿಧಿಸಿದನು. ಕೆಲವರಿಗೆ

ಉಂಬಳಿ (ಜಾಗೀರು) ಗಳನ್ನು ಹಾಕಿಕೊಟ್ಟನು. ರಾಜಧಾನಿಯಲ್ಲಿ ಒಂದು ಮಸೀದೆಯನ್ನು ಕಟ್ಟಿಸಿದನು. ತನ್ನ ಸಿಂಹಾಸನಕ್ಕೆ ಬಾಗುವಾಗ ಅವರ ಮನಸು ನೋಯಬಾರದೆಂದು ಸಿಂಹಾಸನದ ಮುಂದೆ ಉಚ್ಚಾಸನದ ಮೇಲೆ ಕುರಾಣವನ್ನು ಇರಿಸುತ್ತಿದ್ದನು! ಚತುರನಾದ ರಾಯನು ಮುಸಲ್ಮಾನರನ್ನು ಸೈನ್ಯದಲ್ಲಿ ಸೇರಿಸಿಕೊಂಡು ತನ್ನ ದಂಡಿನಲ್ಲಿ ಅಚ್ಚುಕಟ್ಟು, ವ್ಯವಸ್ಥಿತತನ ಇವುಗಳನ್ನು ಬೆಳೆಸಿದನು. ಸಾರಾಂಶ, ಸಕಲ ಧರ್ಮಮತದ ಜನರ ಸ್ನೇಹಭಾವನೆಯನ್ನು ಸಂಪಾದಿಸಲು ಬಹಳವಾಗಿ ಪ್ರಯತ್ನಿಸಿದನು. ಧರ್ಮಸಹಿಷ್ಣುತೆಯು ಮತ್ತು ಧರ್ಮಬಾಂಧವ್ಯದ ಉದಾತ್ತವಾದ ಈ ಆದರ್ಶವು ಅಪೂರ್ವವಾಗಿರುವುದಲ್ಲವೆ?

ಉದಾರಹೃದಯನೂ ಪ್ರಜಾಬಾಂಧವನೂ ಆದ ದೇವರಾಯನು ೧೪೪೬ರಲ್ಲಿ ದೈವಾಧೀನನಾಗಲು ಸಾಮ್ರಾಜ್ಯವು ಶೋಕಸಾಗರದಲ್ಲಿ ಮುಳುಗಿತು.

———

## ಎಂಟನೆಯ ವಿಲಾಸ

# ೯. ಮಲ್ಲಿಕಾರ್ಜುನರಾಯ (೧೪೪೬-೬೬)

ಇಮ್ಮಡಿ ದೇವರಾಯನ ಒಬ್ಬನೆ ಮಗನಾದ ಮಲ್ಲಿಕಾರ್ಜುನನು ತಂದೆಯ ತರುವಾಯ ಪಟ್ಟಕ್ಕೆ ಬಂದನು. ಆತನಿಗೆ ಇಮ್ಮಡಿ ವಿಜಯರಾಯ, ಇಮ್ಮಡಿ ದೇವರಾಯ, ಇಮ್ಮಡಿ ಪ್ರೌಢದೇವರಾಯ ಮೊದಲಾದ ಬೇರೆ ಹೆಸರುಗಳೂ ಇದ್ದುವು.

ಪಟ್ಟಕ್ಕೆ ಬರುತ್ತಲೆ ರಾಯನು ರಾಜ್ಯದೊಳಗಿನ ಒಂದು ಅನ್ಯಾಯವನ್ನು ದೂರಮಾಡಿ ಪ್ರಜಾಜನರ ಹರಕೆಗಳನ್ನು ಕಟ್ಟಿಕೊಂಡನು. ಹೊಸ ರಾಜನು ಪಟ್ಟಕ್ಕೆ ಬರಲು, ಆತನಿಗೆ ಕಾಣಿಕೆಯನ್ನು ಸಲ್ಲಿಸಬೇಕೆಂಬ ನೆವದಿಂದ ಅಧಿಕಾರಿಗಳು ಪ್ರಜರಿಂದ ಬಲಾತ್ಕಾರವಾಗಿ ಹಣವನ್ನು

ಎತ್ತುವ ದುಷ್ಟ ರೂಢಿಯು ಕೆಲಕಾಲದಿಂದ ಅಲ್ಲಲ್ಲಿ ಪ್ರಚಾರಗೊಂಡಿತ್ತು. ಇದಕ್ಕಾಗಿ ಜನರು ಬೇಸತ್ತು ಮನೆಮಾರುಗಳನ್ನು ಬಿಟ್ಟು ಓಡಿಹೋಗಿ ಊರುಗಳು ಹಾಳಾದ ಸಂದರ್ಭಗಳೂ ಕೆಲವು ಕಡೆಯಲ್ಲಿ ಉಂಟಾಗಿದ್ದುವು. ಮಲ್ಲಿಕಾರ್ಜುನನು ಈ ಅತ್ಯಾಚಾರವನ್ನು ನಿಲ್ಲಿಸಿ ಜನತೆಯಲ್ಲಿ ಸುಖ-ಶಾಂತಿಗಳನ್ನು ಬೀರಿದನು.

ಇಷ್ಟರಲ್ಲಿ ರಣಗೊಂಬು ಕೇಳಬರತೊಡಗಿತು. ಈಗ ವಿಜಯನಗರಕ್ಕೆ ಉತ್ತರದಲ್ಲಿ ಇನ್ನೊಬ್ಬ ಹಗೆಯುಂಟಾಗಿದ್ದನು. ಬಹಮನೀ ಸುಲ್ತಾನನಾದ ಅಲ್ಲಾವುದ್ದೀನನೂ ಕಲಿಂಗ (ಓರಿಸ) ರಾಜನಾದ ಗಜಪತಿ[೧] ಕಪಿಲೇಶ್ವರನೂ ಕೂಡಿ ವಿಜಯನಗರದವರು ಪೂರ್ವಸಮುದ್ರ ತೀರಪ್ರದೇಶದಲ್ಲಿ ನಡೆಸಿರುವ ಆಕ್ರಮಣವನ್ನು ತಡೆಗಟ್ಟಿ, ಅಲ್ಲಿ ತಮ್ಮ ರಾಜ್ಯಗಳನ್ನು ಬೆಳೆಸಿಕೊಳ್ಳಬೇಕೆಂದು ಒಡಂಬಡಿಕೆ ಮಾಡಿಕೊಂಡಿದ್ದರು. ಈಗಿನ ಗುಂಟೂರು ಜಿಲ್ಲೆಯಲ್ಲಿಯ ವಿನುಕೊಂಡ ಎಂಬ ಸ್ಥಳವನ್ನು ವಿಜಯನಗರದವರು ಗೆದ್ದುಕೊಂಡಿದ್ದು, ಆ ಪ್ರದೇಶಕ್ಕೆ ವಿಜಯನಗರದ ಅಧಿಕಾರಿಯು ಸ್ಥಾಪಿತನಾಗಿದ್ದನು. ಇದರಿಂದ ಆ ರಾಜರಿಬ್ಬರಿಗೆ ಆತಂಕವಾಗಿದ್ದಿತು. ಇದಲ್ಲದೆ ವಿಜಯನಗರದ ಉತ್ಕರ್ಷವನ್ನು ಖಂಡಿಸಿ ಕಂಚೀ ರಾಜ್ಯವನ್ನು ಅಪಹರಿಸಬೇಕೆಂಬ ದೂರದ ಮಹತ್ವಾಕಾಂಕ್ಷೆಯೂ ಅವರಲ್ಲಿ ಸುಳಿದಾಡುತ್ತಿತ್ತು.

ಇನ್ನೂ ಎಳೆಯನಾದ ಮಲ್ಲಿಕಾರ್ಜುನನು ವಿಜಯನಗರದ ಒಡೆಯನಾದುದನ್ನು ಕಂಡು ಈ ರಾಜರ ಸಂಕಲ್ಪವು ಕೊನರಿತು. ಗೆಲುವಿನ ಹುಮ್ಮಸದಿಂದ ಉಭಯ ರಾಜರ ಸೇನೆಗಳು ವಿಜಯನಗರರಾಜ್ಯದಲ್ಲಿ ಹೊಕ್ಕು ರಾಜಧಾನಿಗೆ ಮುತ್ತಿಗೆಯನ್ನು ಒಡ್ಡಿದುವು. ಗವಿಯಿಂದ ಹೊರಬೀಳುವ ಸಿಂಹನಂತೆ ರಾಯನು ರಾಜಧಾನಿಯಿಂದ ಹೊರಟು ಉಭಯ ದಳಗಳ ಮೇಲೆ ಎರಗಿದನು. ಪ್ರಚಂಡವಾದ ಈತನ ಆಟೋಪ

---

೧. ಓರಿಸದ ರಾಜರಿಗೆ ಸಾಮಾನ್ಯವಾಗಿ 'ಗಜಪತಿ' ಎಂಬ ಸಂಕೇತವು ಇದ್ದಿತು. ಇದರಂತೆ ವಿಜಯನಗರದ ಅರಸರಿಗೆ 'ನರಪತಿ' ಎಂದೂ ಬಹಮನೀ ಸುಲ್ತಾನರಿಗೆ 'ಅಶ್ವಪತಿ' ಎಂದೂ ಸಹೇತುಕವಾಗಿ ಕರೆವುದುಂಟು.

ವನ್ನು ಸಹಿಸಲಾರದೆ ಶತ್ರುಸೈನ್ಯವು ಚದರಿಹೋಯಿತು. ರಾಜರಿಬ್ಬರಿಗೆ ತಮ್ಮ ಜೀವವುಳುಹಿಕೊಂಡು ಪಾರಾಗಿ ಹೋಗಬೇಕಾದರೆ ಕೃತಾರ್ಥ ವಾಯಿತು.[೨]

ಮುಂದೆ ಸುಲ್ತಾನ ಅಲ್ಲಾವುದ್ದೀನನು ಮೃತನಾಗಿ (೧೪೫೮) ಹಿಂಸ್ರಸ್ವಭಾವಿಯಾದ ಆತನ ಮಗ ಹುಮಾಯೂನನು ಬಹಮನೀ ಪಟ್ಟಕ್ಕೆ ಬಂದನು. ಈತನು ದೇವರಕೊಂಡಕ್ಕೆ (ಗುಂಟೂರು ಜಿ.) ಮುತ್ತಿಗೆಹಾಕಿದನು. ಆದರೆ ಆತನು ವಿಜಯನಗರದ ಹೊಡೆತಕ್ಕೆ ಸೋತು, ಅಪಮಾನಹೊಂದಿ ಹಿಂದೆಗೆಯಬೇಕಾಯಿತು. ಹುಮಾಯೂನನು ೧೪೬೧ರಲ್ಲಿ ಮಡಿದನು. ಆತನ ತರುವಾಯ ಸುಲ್ತಾನನಾದ ನಿಜಾಮುಶಹನು ೧೪೬೩ರಲ್ಲಿ ತೀರಿಕೊಂಡನು. ಅಲ್ಲಾವುದ್ದೀನನ ಮರಣ ವಾದಂದಿನಿಂದ ಬಹಮನೀರಾಜ್ಯದಲ್ಲಿ ಅಂತಃಕಲಹಗಳು ಹುಟ್ಟಿದ್ದುವು. ಆದುದರಿಂದ ಕಪಿಲೇಶ್ವರನಿಗೆ ವಿಜಯನಗರದ ದಂಡಯಾತ್ರೆಯಲ್ಲಿ ಅಲ್ಲಿಯ ಸಹಾಯವು ದೊರೆವ ಆಶೆಯೂ ಉಳಿಯಲಿಲ್ಲ. ಆದರೂ ಆತನು ಏಕಾಕಿಯಾಗಿ ದಕ್ಷಿಣ ದಿಗ್ವಿಜಯದ ತನ್ನ ಮಹತ್ವಾಕಾಂಕ್ಷೆಯನ್ನು ಈಡೇರಿಸುವ ಉದ್ಯೋಗಕ್ಕೆ ತೊಡಗಿದನು. ಆತನು ವಿಜಯನಗರ ರಾಜ್ಯದಲ್ಲಿ ಪ್ರವೇಶಿಸಿ ತುಂಡೀರ (ಕಂಚೀ) ಪ್ರಾಂತದಲ್ಲಿ ದಾಳಿಯಿಟ್ಟನು. ಈ ದಾಳಿಯಿಂದ ದೇಶವು ಉಧ್ವಸ್ತವಾಯಿತು. ಓರಿಸದ ದಂಡಿನ ಉಪಟಳದಿಂದ ಜನರು ಸಂತ್ರಸ್ತರಾಗಿ ಊರುಮನೆಗಳನ್ನು ಬಿಟ್ಟು ಹೋದರು. ಎಷ್ಟೋ ಗುಡಿಗಳಲ್ಲಿ ಧಾರ್ಮಿಕ ವಿಧಿಗಳು ನಿಂತು ಹೋದುವು (೧೪೬೧–೬೨).

---

೨. ಫಿರಿಷ್ತನು ಈ ಸಮಂದ ಸುದ್ದಿಯನ್ನೆ ಎತ್ತುವುದಿಲ್ಲ.

# ೧೦. ಮುಮ್ಮಡಿ ವಿರೂಪಾಕ್ಷರಾಯ

## (೧೪೬೬-೧೪೮೫)

ಮಲ್ಲಿಕಾರ್ಜುನನ ಆಳಿಕೆಗೆ ಇಪ್ಪತ್ತು ವರ್ಷಗಳು ಆಗುವಷ್ಟರಲ್ಲಿ ಆತನ ಸಿಂಹಾಸನದ ಕೆಳಗಿನ ನೆಲವು ಅದುರಿತು. ರಾಯನ ಕಕ್ಕನ ಮಗನಾದ ಮುಮ್ಮಡಿ ವಿರೂಪಾಕ್ಷನು ರಾಜಮುಕುಟವನ್ನು ಸೆಳೆದು ಕೊಳ್ಳಲು ಹೊಂಚುಹಾಕಿದನು. ಈತನು ಇಮ್ಮಡಿ ದೇವರಾಯನ ತಮ್ಮನಾದ ಪ್ರತಾಪದೇವರಾಯನ ಮಗನು. ಈತನು ದೇವರಾಯನ ತರುವಾಯ ತನಗೆ ಪಟ್ಟವಾಗಬೇಕೆಂದು ಪ್ರಯತ್ನಿಸಿದ್ದಂತೆ ತೋರುತ್ತದೆ. ಆ ಪ್ರಯತ್ನವು ಆಗ ಸಫಲವಾಗಲಿಲ್ಲ. ಅಂದಿನಿಂದ ಕಾದುಕೊಂಡಿದ್ದ ಈತನು ಮಲ್ಲಿಕಾರ್ಜುನನ ಆಳಿಕೆಯಲ್ಲಿ ಶೈಥಿಲ್ಯವುಂಟಾಗಲು ರಾಜ್ಯವನ್ನು ಅಪಹರಿಸಲು ಮುಂದುವರಿದನು. ಮಲ್ಲಿಕಾರ್ಜುನನು ಆತನ ಕುತಂತ್ರಕ್ಕೆ ಸೋತು ಪದಭ್ರಷ್ಟನಾಗಿ ರಾಜಧಾನಿಯನ್ನು ಬಿಟ್ಟು ತೆರಳಿದನು. ವಿರೂ ಪಾಕ್ಷನು ಮಲ್ಲಿಕಾರ್ಜುನನ ಪಕ್ಷದವರನ್ನು ವಧಿಸಿ ವಿಜಯನಗರದಲ್ಲಿ ಆಳತೊಡಗಿದನು (೧೪೬೬).

ರಾಜ್ಯಭ್ರಷ್ಟನಾದ ಮಲ್ಲಿಕಾರ್ಜುನನು ಅಲ್ಲಲ್ಲಿ ಅಲೆಯುತ್ತ ಮಹಾರಾಜಾಧಿರಾಜನೆಂಬ ಬಿರುದನ್ನು ಹಿಡಿದುಕೊಂಡು, ವಿರೂಪಾಕ್ಷ ನಿಗೆ ಪ್ರತಿಸ್ಪರ್ಧಿಯಾಗಿ, ಸಾಮ್ರಾಜ್ಯದ ಒಡೆತನದ ಅಧಿಕಾರವನ್ನು ಹೇಳುತ್ತ, ಮುಂದೆ ಇಪ್ಪತ್ತೊಂದು ವರ್ಷಗಳ ವರೆಗೆ (೧೪೮೭) ಬಾಳಿ ದನು. ಕಂಚಿ ಮುಂತಾದ ನಾಡುಗಳ ಅಧಿಕಾರಿಗಳು ಆತನಿಗೆ ಸ್ವಾಮಿ ನಿಷ್ಠರಾಗಿ ಉಳಿದರು.

ಕಂಚಿನಾಡಿನಲ್ಲಿ ಕಪಿಲೇಶ್ವರನು ಎಬ್ಬಿಸಿದ ಹಾವಳಿಯಿಂದ ವಿಜಯ ನಗರದ ಇನ್ನೊಬ್ಬ ಹಳೆಯ ಹಗೆಯು ಚೇತರಿಸಿಕೊಂಡಿದ್ದನು. ವಿಜಯ ನಗರಸಾಮ್ರಾಜ್ಯದಿಂದ ಪಾದಾಕ್ರಾಂತರಾದ ಪಾಂಡ್ಯ ಅರಸರು ಮೂಲೆ ಗುಂಪಾಗಿ ಹೇಗೊ ಕಾಲವನ್ನು ಕಳೆಯುತ್ತಿದ್ದರು. ಕಂಚಿಯ ಸಂಭವ ರಾಯ ಮನೆತನದ ಅರಸರು ಪಾಂಡ್ಯರ ಮಾಂಡಲಿಕರಾಗಿದ್ದರು. ವೀರ

ಕಂಪಣ್ಣರಾಯನು ಮದುರೆಯ ಮಹಮ್ಮದೀಯ ರಾಜ್ಯವನ್ನು ಕಸಿದ ಬಳಿಕ ಪಾಂಡ್ಯರ ರಾಜ್ಯವು ವಿಜಯನಗರದ ಮಾಂಡಲಿಕತ್ವವನ್ನು ಒಪ್ಪಿ ಕೊಂಡಿತು. ಮುಂದೆ ಇಮ್ಮಡಿ ಹರಿಹರರಾಯನ ಕಾಲದಲ್ಲಿ ವಿಜಯ ನಗರದ ಅಧಿಕಾರವನ್ನು ಕಿತ್ತೊಗೆಯಲು ಪಾಂಡ್ಯರು ಹೆಣಗಾಡಿದರು. ಆದರೆ ಇಮ್ಮಡಿ ವಿರೂಪಾಕ್ಷನು ಅವರನ್ನು ಹತ್ತಿಕ್ಕಿದನು. ಈ ಸಮಯಕ್ಕೆ ಪಾಂಡ್ಯರ ಅರಸನಾಗಿದ್ದ ಭುವನೈಕವೀರ ಸಮರಕೋಲಾ ಹಲ ಎಂಬಾತನು ಸಾಮ್ರಾಜ್ಯದ ಈ ಗೊಂದಲದಲ್ಲಿ ಸ್ವತಂತ್ರನಾಗಲು ಹವಣಿಸಿ ತನ್ನ ಶಕ್ತಿಯನ್ನು ಪರೀಕ್ಷಿಸಬೇಕೆಂದು ಬಗೆದನು. ಈತನು ಶೂರನೂ ಮಹತ್ವಾಕಾಂಕ್ಷಿಯೂ ಆಗಿದ್ದನು. ತನ್ನ ಪೂರ್ವಜರ ಸೊತ್ತಾದ ಕಂಚಿಯ ಮೇಲೆ ಕಣ್ಣಿಟ್ಟು ಏರಿ ಬಂದನು. ಕಂಚಿಯು ಅವನಿಗೆ ಸ್ವಾಧೀನವಾಗಿ ಕೆಲಕಾಲ ಆತನ ಕೈಯಲ್ಲಿ ಉಳಿದುಕೊಂಡಿತು (೧೪೭೯).

ಇದೇ ಸುಮಾರಿಗೆ ಇತ್ತ ಭಟಕಳದಲ್ಲಿ ಒಂದು ಅತ್ಯಾಚಾರವು ನಡೆಯಿತು. ಈ ಬಂದರದಲ್ಲಿ ಮುಸಲ್ಮಾನರು ಬಹುಸಂಖ್ಯೆಯಿಂದ ವಾಸವಾಗಿದ್ದು, ಪಶ್ಚಿಮದಂಡೆಯ ವ್ಯಾಪಾರವೆಲ್ಲ ಅವರ ಕೈಯಲ್ಲಿ ಇತ್ತು. ವಿಜಯನಗರದ ಅರಸರಿಗೆ ಬೇಕಾಗುವ ಯುದ್ಧದ ಕುದುರೆ ಗಳನ್ನು ಪರದೇಶದಿಂದ ತರಿಸಿ ಪೂರಯಿಸುವ ಗುತ್ತಿಗೆಯು ಈ ಮುಸ ಲ್ಮಾನರ ಕಡೆಗೆ ಇತ್ತು. ಹೀಗಿರಲು ಈ ವರ್ತಕರು ವಿಶ್ವಾಸಘಾತಮಾಡಿ ತಾವು ತರಿಸಿದ ಕುದುರೆಗಳನ್ನೆಲ್ಲ ವಿಜಯನಗರದವರಿಗೆ ಮಾರದೆ, ವಿಜಯ ನಗರದ ವೈರಿಗಳಾದ ಬಹಮನೀ ಅರಸರಿಗೆ ಮಾರಿದರು. ಇದನ್ನು ತಿಳಿದು ವಿರೂಪಾಕ್ಷನು ಸಂತಪ್ತನಾದನು. ವಿಶ್ವಾಸದ್ರೋಹಿಗಳಾದ ಈ ಮುಸಲ್ಮಾನರನ್ನು ಸಂಹರಿಸಿ ಅವರ ಬೀಡನ್ನು ಧ್ವಂಸಮಾಡ ಬೇಕೆಂದು ಹೊನ್ನಾವರದ ತನ್ನ ಅಧಿಕಾರಿಗೆ ಆಜ್ಞಾಪಿಸಿದನು. ಅಮಾ ನುಷವಾದ ಹಿಂಸಾಸತ್ರವು ಆರಂಭವಾಯಿತು. ಇದರಲ್ಲಿ ಹತ್ತುಸಾವಿರ ಮುಸಲ್ಮಾನರು ಪ್ರಾಣಕ್ಕೆ ಎರವಾದರು ಎಂದು ಹೇಳುತ್ತಾರೆ. ಈ ಹತ್ಯಾಕಾಂಡದಲ್ಲಿ ಉಳಿದವರು ಗೋವೆಗೆ ಓಡಿಹೋಗಿ ಒಕ್ಕಲಾದರು (೧೪೭೯).

ಸ್ವಧರ್ಮೀಯರೂ ಸ್ವಪಕ್ಷಪಾತಿಗಳೂ ಆದ ಮುಸಲ್ಮಾನರ ಮೇಲಿನ ಈ ಅತ್ಯಾಚಾರದಿಂದ ಬಹಮನೀ ಸುಲ್ತಾನನಿಗೆ ಬಹಳ ಕೋಪವು ಉಂಟಾಯಿತು. ಇದರ ಸೇಡನ್ನು ತೀರಿಸಲು ಸುಲ್ತಾನ ಮುಹಮ್ಮದಶಹನ ಮಂತ್ರಿಯಾದ ಮಹಮೂದ ಗವಾನನು ದಂಡೆತ್ತಿ ಬಂದು ಜಲ–ಸ್ಥಲಮಾರ್ಗಗಳಿಂದ ಗೋವೆಯನ್ನು ಮುತ್ತಿದನು. ಗೋವೆಯು ಮುಹಮ್ಮದೀಯರ ಸ್ವಾಧೀನವಾಯಿತು (೧೪೭೯). ಬಳಿಕ ವಿರೂಪಾಕ್ಷನು ಕಳೆದುಕೊಂಡ ಗೋವೆಯನ್ನು ಮತ್ತೆ ಗಳಿಸಲು ಹೆಣಗಿದನು. ಬೆಳಗಾವಿಯ ದುರ್ಗಾಧಿಕಾರಿಯನ್ನು ಗೋವೆಯಮೇಲೆ ಕಳುಹಿದನು. ಮುಹಮ್ಮದಶಹನು ಇದನ್ನು ನೋಡಿದ ಕೂಡಲೆ ಬೆಳಗಾವಿಯ ಮೇಲೆ ದಂಡನ್ನು ದೂಡಿದನು. ಇತ್ತ ಬೆಳಗಾವಿಯು ಶಹನ ಸ್ವಾಧೀನವಾಗಿ ವಿಜಯನಗರದ ಕೈಬಿಟ್ಟು ಹೋಯಿತು. ಅತ್ತ ಗೋವೆಯೂ ವಶವಾಗಲಿಲ್ಲ (೧೪೭೨-೭೩).

ಮುಂದೆ ಮತ್ತೊಮ್ಮೆ ಸಾಳುವ ನರಸಿಂಹನು ಗೋವೆಯನ್ನು ಕಸಿಯಲು ಪ್ರಯತ್ನಿಸಿದನು. ವಿಜಯನಗರದ ಸೈನ್ಯವು ಗೋವೆಯನ್ನು ಕವಿದಿತು. ಮುಹಮ್ಮದಶಹನು ಮೃತನಾದುದರಿಂದ ಹೊರಡಲಿರುವ ಮುಸಲ್ಮಾನರ ಸಹಾಯಕ ದಳವು ಹೊರಡಲಿಲ್ಲ (೧೪೮೨). ಆದರೂ ಗೋವೆಯು ವಿಜಯನಗರದ ಕೈಗೆ ಬರದೆ ಮುಹಮ್ಮದೀಯರ ವಶದಲ್ಲಿಯೇ ಉಳಿಯಿತು.

ಈ ನಡುವೆ ದಕ್ಷಿಣಭಾರತದಲ್ಲಿ ಘೋರವಾದ ಬರಗಾಲವು ಒದಗಿ ಅದರ ಬವಣೆಯು ವಿಜಯನಗರಸಾಮ್ರಾಜ್ಯದ ತೆಲುಗುನಾಡನ್ನು ನೋಂಕಿತು (೧೪೭೪-೭೬). ಈ ಹಾವಳಿಯಲ್ಲಿ ಕೊಂಡಪಲ್ಲಿಯ (ಗುಂಟೂರು ಜಿಲ್ಲೆ) ಹಿಂದುಗಳು ದೊಂಬೆಯನ್ನೆಬ್ಬಿಸಿ, ಅಲ್ಲಿಯ ಬಹಮನೀ ಅಧಿಕಾರಿಯನ್ನು ಕೊಂದು, ಓರಿಸದ ರಾಜನ ನೆರವನ್ನು ಕೋರಿದರು. ಈ ಗಡಿಯನ್ನು ಕಾಯ್ದುಕೊಳ್ಳಲು ಮುಹಮ್ಮದಶಹನು ತಾನೇ ದಂಡಿನೊಂದಿಗೆ ಬಂದನು. ಇದನ್ನು ಕಂಡು ಓರಿಸದ ಸೈನ್ಯವು ಹಿಂಜರಿಯಿತು. ಶಹನು ರಾಜಮಹೇಂದ್ರಿಯನ್ನೂ ಕೊಂಡಪಲ್ಲಿಯನ್ನೂ

ಕಿತ್ತುಕೊಂಡು ಓರಿಸರಾಜ್ಯದಲ್ಲಿ ಸಾಗಿದನು. (ಓರಿಸದ) ಗಜಪತಿ ರಾಯನು ಆತನೊಡನೆ ಸಂಧಿಯನ್ನು ಮಾಡಿಕೊಂಡನು. ಬಳಿಕ ಶಹನು ವಿಜಯನಗರದ ಅಧಿಕಾರಕ್ಕೆ ಒಳಪಟ್ಟ ತೆಲುಗುನಾಡಿನಲ್ಲಿಯೂ ಆಕ್ರಮ ಣವನ್ನು ಹೂಡಿ ಕೊಂಡವೀಡನ್ನು ಕಸಿದನು. ಆಗ ವಿಜಯನಗರದ ಸೇನಾಧೀಶನಾದ ಸಾಳುವ ನರಸಿಂಹನು ಆತನನ್ನು ಬಲವಾಗಿ ಇದಿರಿ ಸಿದನು.

ಈ ರೀತಿಯಾಗಿ ಬಲಾತ್ಕಾರದಿಂದ ವಿಜಯನಗರದ ಬೆಳ್ಕೊಡೆ ಯನ್ನು ಕಸಿದುಕೊಂಡು ಆಳಲು ಯತ್ನಿಸಿದ ವಿರೂಪಾಕ್ಷನು ಸಾಹಸಿ ಯಾಗಿದ್ದರೂ ವಿವೇಕಿಯಾಗಿದ್ದಿಲ್ಲ. ಈತನು ತೊಟ್ಟ ಅರಿರಾಯ ವಿಭಾಡ, ಪರರಾಯ ಭಯಂಕರ, ಹಿಂದುರಾಯ ಸುರತ್ರಾಣ, ಕರ್ನಾಟಕೇಶ್ವರ ರಾಯ ಕುಂಜರ ಮುಂತಾದ ಬಿರುದುಗಳು ಈತನಿಗೆ ಅಲಂಕಾರಗಳಾಗದೆ ಕಲಂಕಪ್ರಾಯವಾದುವು. ಈತನು ತನ್ನ ಸಾಮರ್ಥ್ಯದ ದುರುಪಯೋಗ ವನ್ನು ಮಾಡಿ ಹರಿಹರ ಬುಕ್ಕ ಮೊದಲಾದವರು ಬಹು ಶೌರ್ಯ-ದಕ್ಷತೆ ಗಳಿಂದ ಕಟ್ಟಿ ಬೆಳೆಸಿದ ವಿಜಯನಗರಸಾಮ್ರಾಜ್ಯದ ಗೌರವವನ್ನು ಕೆಲ ಕಾಲ ಹದಗೆಡಿಸಿದನು. ಮಲ್ಲಿಕಾರ್ಜುನನು ಸುಖಲೋಲುಪನಾಗಿ ತನ್ನ ಕರ್ತವ್ಯವನ್ನು ಮರೆತು ಆಡಳಿತವನ್ನು ದುರ್ಬಲತೆಗೆ ಈಡುಮಾಡಿ ದಾಗ, ಸಮರ್ಥನಾದ ಈತನು ಆತನಿಗೆ ನೆರವಾಗಿ ಸಾಮ್ರಾಜ್ಯದ ಸುಸ್ಥಿತಿ–ಗೌರವಗಳನ್ನು ಕಾಯಬೇಕಾಗಿತ್ತು. ಅದಂತೂ ಇರಲಿ, ಯಾವ ಮಾರ್ಗದಿಂದಲಾದರೂ ತಾನು ರಾಜ್ಯವನ್ನು ಗಳಿಸಿ ಆಳತೊಡಗಿದ ಮೇಲಾದರೂ ಸಾಮ್ರಾಜ್ಯದ ಭದ್ರತೆಗಾಗಿ ಹೆಣಗುವುದು ಈತನ ಆದ್ಯ ಕರ್ತವ್ಯವಾಗಿದ್ದಿತು. ಈ ರಾಯನು ಅದನ್ನೂ ಮಾಡಲಿಲ್ಲ. ಈತನ ಶೌರ್ಯ-ಚಾತುರ್ಯಗಳೆಲ್ಲವು ತನಗಾಗಿ ಸಿಂಹಾಸನವನ್ನು ಸಂಪಾದಿ ಸುವುದರಲ್ಲಿಯೆ ವ್ಯಯವಾದುದರಿಂದ ಈತನ ಮುಂದಿನ ಆಳಿಕೆಯು ಯಾವ ವಿಧದಿಂದಲೂ ಸಾಮ್ರಾಜ್ಯಕ್ಕೆ ಹಿತಕರವಾಗಲಿಲ್ಲ.

ಮಲ್ಲಿಕಾರ್ಜುನನ ಆಳಿಕೆಯಲ್ಲಿ ಉಂಟಾದ ಪ್ರಭುತ್ವದ ದೌರ್ಬ ಲ್ಯವೂ ಆಡಳಿತದ ಶೈಥಿಲ್ಯವೂ ಈತನ ಕಾಲದಲ್ಲಿ ಇನ್ನಿಷ್ಟು

ಮುಂದುವರಿದು ಮತ್ತೊಂದು ರಾಜ್ಯಕ್ರಾಂತಿಗೆ ಮಾರ್ಗವನ್ನು ಮಾಡಿ ಕೊಟ್ಟುವು. ಓರಿಸದ ಕಪಿಲೇಶ್ವರನು ವಿಜಯನಗರಸಾಮ್ರಾಜ್ಯದಲ್ಲಿ ಕಂಚಿಯ ವರೆಗೆ ಒಳನುಗ್ಗಿ ಗೊಂದಲವನ್ನೆಬ್ಬಿಸಲು ಸಮರ್ಥನಾದುದು ಮಲ್ಲಿಕಾರ್ಜುನನ ಹೇಡಿತನದ ಮೂಲಕನೆ. ಆದರೆ ಮುಂದೆ ಪಾಂಡ್ಯರು ಪ್ರಬಲಿಸಿ ಕಂಚಿಯನ್ನು ಕಸಿದುದು ವಿರೂಪಾಕ್ಷನ ಕರ್ತವ್ಯಶೂನ್ಯತೆಗೆ ಸಾಕ್ಷಿಯಾಗಿದೆ! ಗೋವೆಯು ಬಹಮನಿಯವರ ಕೈಬಿಟ್ಟುಹೋದುದು ವಿರೂಪಾಕ್ಷನ ಕರ್ತವ್ಯಭ್ರಷ್ಟತೆಗೆ ನಿದರ್ಶನವಾಗಿದೆ! ಮುಹಮ್ಮದ ಶಹನು ತೆಲುಗುನಾಡಿನಲ್ಲಿ ಒಳನುಗ್ಗಿದುದು ವಿರೂಪಾಕ್ಷನ ಬಲಹೀನ ಆಡಳಿತಕ್ಕೆ ಪ್ರಮಾಣವಾಗಿದೆ!

## ಸಾಳುವ ನರಸಿಂಹನ ಅಭ್ಯುದಯ

### (೧೪೫೯-೮೫)

ನಾಯಕರಿದ್ದೂ ಅನಾಯಕವಾದ ಈ ಸ್ಥಿತಿಯನ್ನು ದೂರದರ್ಶಿಯಾದ ಒಬ್ಬ ನಾಯಕನು ಮೊದಲಿನಿಂದಲೂ ಸೂಕ್ಷ್ಮವಾಗಿ ನಿರೀಕ್ಷಿಸುತ್ತಲಿದ್ದನು. ಬಹುಕಾಲ ಮುಳಬಾಗಲ್ ಪ್ರಾಂತದ ಅಧಿಕಾರಿಯಾಗಿದ್ದ ಸಾಳುವ ನರಸಿಂಹನು ದಿನದಿನಕ್ಕೆ ತನ್ನ ಶಕ್ತಿಯನ್ನು ಬೆಳೆಸಿಕೊಳ್ಳುತ್ತ ಆ ಪ್ರದೇಶದಲ್ಲಿ ತನ್ನ ಅಧಿಕಾರವನ್ನು ಸ್ಥಿರಪಡಿಸತೊಡಗಿದನು. ವ್ಯಾಮರೆತ ಮಲ್ಲಿಕಾರ್ಜುನನಿಗೆ ಆತನ ಪ್ರಭಾವದ ಸೆಕೆಯು ತಾಗಲಾರಂಭಿಸಿತು. ವೃದ್ಧಿಂಗತವಾಗುತ್ತಲಿರುವ ಆತನ ರಾಜ್ಯಕಾರ್ಯವನ್ನು ಕುರಿತು ವಿಚಾರಿಸಲು ಮಲ್ಲಿಕಾರ್ಜುನರಾಯನು ತನ್ನ ಮಂತ್ರಿಯೊಡನೆ ಪೆನುಗೊಂಡದ ವರೆಗೆ ನಡೆದು ಹೋಗಬೇಕಾಯಿತು(೧೪೫೫). ಈ ಮುಂದೆ ಹೆಚ್ಚು ಹೆಚ್ಚು ಸ್ವಾತಂತ್ರ್ಯದಿಂದ ಸ್ವಸಾಮರ್ಥ್ಯವನ್ನು ಬಲಿಸಿಕೊಳ್ಳುತ್ತಿರುವ ಆತನು ಒಮ್ಮೆ **ಮಹಾಮಂಡಲೇಶ್ವರ,** ಇನ್ನೊಮ್ಮೆ **ಮಹಾರಸು,** ಮತ್ತೊಮ್ಮೆ **ಮಹಾರಾಯ,** ಮಗುದೊಮ್ಮೆ **ಪೃಥಿವೀ**

**ವಲ್ಲಭ** ಮುಂತಾದ ಅರ್ಥಪೂರ್ಣವಾದ ಬಿರುದುಗಳನ್ನು ಧರಿಸುತ್ತ ಸಾಮ್ರಾಜ್ಯದ ಆಡಳಿತದಲ್ಲಿ ತನ್ನ ಪ್ರಸ್ಥವನ್ನು ಬೆಳೆಸಿದನು.

ಈ ರೀತಿಯಾಗಿ ಆಚರಿಸಿದ ಇಪ್ಪತ್ತು ಇಪ್ಪತ್ತೈದು ವರ್ಷಗಳ ಸಾಧನೆಯಿಂದ ವಿಜಯನಗರದ ಅಧಿಕಾರಸೂತ್ರಗಳು ಆತನ ಕೈಯಲ್ಲಿ ಬಂದುವು. ೧೪೮೫ ರಷ್ಟರಲ್ಲಿ ವಿರೂಪಾಕ್ಷನು ಹೆಸರಿಗೆ ರಾಜನು. ಸಾಳುವ ನರಸಿಂಹನೆ ನಿಜವಾದ ರಾಜ್ಯಸೂತ್ರಧಾರನಾಗಿದ್ದನು. ಇದೇ ವಿರೂಪಾಕ್ಷನ ಆಳಿಕೆಯ ಕೊನೆಯ ವರ್ಷವು. ಈಗ ಪೂರ್ಣ ಪ್ರಭಾವ ಶಾಲಿಯಾದ ವೀರ ನರಸಿಂಹನು ಕಡೆಯ ಮೆಟ್ಟಲವನ್ನು ಏರಲು ನಿಶ್ಚಯಿಸಿದನು. ವಿಜಯಿಯಾದ ಆತನ ಸೈನ್ಯವು ವಿಜಯನಗರರಾಜಧಾನಿ ಯನ್ನು ಹೊಕ್ಕಿತು. ಹೇಡಿಯೂ ಬಂಧುದ್ರೋಹಿಯೂ ಸಾಮ್ರಾಜ್ಯ ಕಂಟಕನೂ ಆದ ವಿರೂಪಾಕ್ಷನು ಸಿಂಹಾಸನವನ್ನೂ ರಾಜಧಾನಿಯನ್ನೂ ಬಿಟ್ಟು ಪಲಾಯನ ಮಾಡಿದನು.[೩] ನರಸಿಂಹರಾಯನು ವಿಜಯನಗರದ ರತ್ನಸಿಂಹಾಸನದ ಮೇಲೆ ವಿರಾಜಮಾನನಾದನು(೧೪೮೫). ಪದಚ್ಯುತ ನಾದ ವಿರೂಪಾಕ್ಷನು ತನ್ನ ಅಧಿಕಾರವನ್ನು ಹೇಳುತ್ತ ಮುಂದೆ ಎಳೆಂಟು ವರ್ಷಗಳ ವರೆಗೆ ಬಾರಕೂರ ರಾಜ್ಯದಲ್ಲಿ ಬಾಳಿದನು.[೪]

ಮಲ್ಲಿಕಾರ್ಜುನನಿಗೆ ಆರು ಜನ ಮಕ್ಕಳು: (ನಾಲ್ಕನೆಯ) ವಿರೂ ಪಾಕ್ಷ, (ನಾಲ್ಕನೆಯ) ದೇವರಾಯ, ರಾಜಶೇಖರ, ನಂಜರಾಜ, ಪರ್ವತರಾಯ, ದೇಪಣ್ಣ ಒಡೆಯ. ಇವರಲ್ಲಿ ಕಡೆಯ ಮೂವರು ಮುಂದೆ ಸಾಳುವ ನರಸಿಂಹರಾಯನ ಅಂಕಿತರಾಗಿ ಮೈಸೂರ ಸೀಮೆ ಯಲ್ಲಿ ಅಧಿಕಾರಿಗಳಾಗಿ ಬಾಳಿದರು.

ಮಲ್ಲಿಕಾರ್ಜುನನಿಗೆ ತಿಮ್ಮಣ್ಣ ದಣ್ಣಾಯಕನು ಕಾರ್ಯದಕ್ಷ ನಾದ ಮಂತ್ರಿಯಾಗಿದ್ದನು. ಈತನು ಶ್ರೀವೈಷ್ಣವ ಬ್ರಾಹ್ಮಣನಾಗಿದ್ದು ಬಹು ಧರ್ಮಶೀಲನಾಗಿದ್ದನು. ಮಲ್ಲಿಕಾರ್ಜುನನು ಬಹುಶ್ರುತನೂ ವಿದ್ಯಾಪ್ರೇಮಿಯೂ ಆಗಿದ್ದನು. ವೇದ-ಶಾಸ್ತ್ರ-ಪುರಾಣ-ದರ್ಶನಗಳಲ್ಲಿ ಪ್ರವೀಣನೂ ಭಾಷ್ಯಭೂಷಾ ಎಂಬ ಗ್ರಂಥಕರ್ತನೂ ಆದ ಆದಿತ್ಯವರ್ಮ

---

೩. ವಿ. ಟಿ. ೧೧. ೪. S. R. 1932, p. 64.

ನೆಂಬ ಪಂಡಿತನು ರಾಯನ ಓಲಗಕ್ಕೆ ಬಂದನು. ಆಗ ರಾಯನು ಸಕಲ ಪಂಡಿತರ ಸಭೆಯಲ್ಲಿ ಈ ವಿದ್ವದ್ವರನನ್ನು ಪರೀಕ್ಷಿಸಿ ಸನ್ಮಾನಿಸಿದನು (೧೪೪೭).

ಈ ಆಳಿಕೆಗಳಲ್ಲಿ ಶ್ರೀವೈಷ್ಣವ ಮತವು ಹೆಚ್ಚು ಪ್ರಸಾರ ಹೊಂದಿತು. ಇದೇ ಕ್ರಮದಿಂದ ಮುಂದಿನ ಸಾಳುವ, ತುಳುವ, ಅರವೀಡು ಮನೆತನದ ಆಳಿಕೆಗಳಲ್ಲಿ ಈ ಮತವು ಅತಿಶಯವಾದ ಪ್ರಾಶಸ್ತ್ಯವನ್ನು ಪಡೆದು ದಕ್ಷಿಣ ಪ್ರಾಂತನ್ನೆಲ್ಲ ವ್ಯಾಪಿಸಿತು. ಸಾಳುವ ನರಸಿಂಹ ಮೊದಲಾದ ಭೂಪಾಲರು ಈ ಮತವನ್ನು ಆದರಿಸಿ ಪೋಷಿಸಿದರು. ಈ ಆಳಿಕೆಗಳಲ್ಲಿಯೂ ಅನೇಕ ವೀರಶೈವ ಗ್ರಂಥಕಾರರು ಹುಟ್ಟಿ ವೀರಶೈವ ಸಾಹಿತ್ಯವನ್ನು ಹೆಚ್ಚಾಗಿ ಬೆಳೆಸಿದರು. ಬೊಮ್ಮರಸ, ಕಲ್ಲರಸ, ತೋಂಟದ ಸಿದ್ಧೇಶ್ವರ, ಗುಬ್ಬಿಯ ಮಲ್ಲಣ್ಣ, ನೀಲಕಂಠಾಚಾರ್ಯ ಮೊದಲಾದವರು ಅನುಕ್ರಮವಾಗಿ ಸೌಂದರಪುರಾಣ, ಜನವಶ್ಯ, ಷಟ್‌ಸ್ಥಲಜ್ಞಾನಸಾರಾಮೃತ ಗಣಭಾಷ್ಯರತ್ನಮಾಲೆ, ಆರಾಧ್ಯಚಾರಿತ್ರ ಇವೆ ಮೊದಲಾದ ಗ್ರಂಥಗಳನ್ನು ರಚಿಸಿ ವೀರಶೈವ ಮತವನ್ನು ಬಹುಜನಾದರಣೀಯವಾಗಿ ಮಾಡಿದರು. ತೆರಕಣಾಂಬಿ ಬೊಮ್ಮರಸನೆಂಬ ಜೈನ ಕವಿಯು ಸನತ್ಕುಮಾರಚರಿತ, ಜೀವಂಧರಸಾಂಗತ್ಯ ಇವುಗಳನ್ನು ರಚಿಸಿದನು. ಬ್ರಾಹ್ಮಣನಾದ ನಾರಾಯಣ ಕವಿಯು ಭಾಗವತಸಂಹಿತಾರ್ಥವನ್ನು ಬರೆದನು.

೧೪೬೮—೭೪ ರಲ್ಲಿ ಕಲಬುರ್ಗಿಯನ್ನು ಸಂದರ್ಶಿಸಿದ ಅಥನಾಸಿಯಸ್ ನಿಕಿಟಿನ್ ಎಂಬ ರಶಿಯನ್ ಪ್ರವಾಸಿಯು ವಿಜಯನಗರವನ್ನು ಕುರಿತು ಕೇಳಿದ ಕೆಲವು ಸಂಗತಿಗಳನ್ನು ಬರೆದಿಟ್ಟಿರುವನು. ಈತನು ವಿಜಯನಗರವನ್ನು ಚೆನುದರ, ಬಿನುದರ, ಬಿಚೆನೆಘರ ಎಂದು ಸಂಬೋಧಿಸಿ ಇಲ್ಲಿ ಒಂದು ಲಕ್ಷ ಕಾಲಾಳು, ಐವತ್ತು ಸಾವಿರ ಕುದುರೆ, ಮುನ್ನೂರು ಆನೆಗಳು ಇದ್ದುವೆಂದು ತಿಳುಹುವನು. ಇದಲ್ಲದೆ, ಆತನು ಹೀಗೆ ಹೇಳುವನು:

"ಈ ಹಿಂದು ಸುಲ್ತಾನ ಕದಮನು (ಕರ್ನಾಟಕದ ರಾಜನು) ಬಹು ಬಲಶಾಲಿಯಾಗಿದ್ದಾನೆ. ಈತನು ಬಿಚೆನೆಘರದ ಗುಡ್ಡದಲ್ಲಿ ಇರುವನು. ಈ ಪಟ್ಟಣವು ಬಹು ವಿಸ್ತಾರವಾಗಿದ್ದು ಅದರ ಸುತ್ತಲು

ಮೂರು ಕೋಟೆಗಳು ಇವೆ. ನಡುವೆ ನದಿಯು ಹರಿದು ಹೋಗಿದೆ. ಈ ಸ್ಥಳವು ಒಂದು ಬದಿಯಿಂದ ಅಭೇದ್ಯವಾಗಿದೆ. ಅದ್ಭುತವೂ ಅನೇಕ ಸೌಕರ್ಯಗಳುಳ್ಳುದೂ ಆದ ಸ್ಥಳವಿದು.''

ಹೀಗೆ ಇತ್ತ ಸಂಗಮ ವಂಶವು ಆಳಿಯುತ್ತಿರುವಾಗ, ಅತ್ತ ಬಹಮನೀ ರಾಜ್ಯದಲ್ಲಿಯೂ ಅನಾಯಕತೆಯು ಉಂಟಾಗಿತ್ತು. ಸುಲ್ತಾನ ಮುಹಮ್ಮದಶಹನು ರಾಜ್ಯನಿಷ್ಠ ಮಂತ್ರಿಯಾದ ಮಹಮೂದ ಗವಾನನನ್ನು ಕೊಲ್ಲಿಸಿದಂದಿನಿಂದ (೧೪೮೧) ಆ ರಾಜ್ಯದಲ್ಲಿ ಜನಕ್ಷೋಭೆ, ಅಂತಃಕಲಹಗಳ ಬೇಗೆಯು ಹಬ್ಬಿತು. ಪ್ರಾಂತಾಧಿಕಾರಿಗಳು ಸ್ವತಂತ್ರರಾಗಲು ಹವಣಿಸಿದರು. ಇದರ ಫಲವಾಗಿ ಒಂದು ರಾಜ್ಯವು ಒಡೆದು ಐದು ಹೋಳುಗಳಾದುವು (೧೪೮೯). ಇವೆ ಮುಂದೆ ವಿಜಾಪುರ, ಗೋವಳಕೊಂಡ, ಅಹಮ್ಮದನಗರ, ಬಿದರ ಮತ್ತು ವರ್‍ಹಾಡದ ರಾಜ್ಯಗಳೆಂದು ಹೆಸರುಗೊಂಡುವು.

---

## ಒಂಬತ್ತನೆಯ ವಿಲಾಸ

# ಸಂಗಮ ಆಳಿಕೆಯ ಸಿಂಹಾವಲೋಕನ

೧೩೩೬-೧೩೪೬ ರಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿ, ಸುಮಾರು ೧೫೦ ವರ್ಷಗಳ ವರೆಗೆ ರಾಜ್ಯವಾಳಿ, ಬೆಳಗಿ ಅಸ್ತಂಗತವಾದ ಈ ಸಂಗಮ ವಂಶದ ಆಳಿಕೆಯನ್ನು ಇಲ್ಲಿ ಸಂಕ್ಷೇಪವಾಗಿ ಸಿಂಹಾವಲೋಕಿಸುವುದು ಉಚಿತವಾಗಿದೆ.

ಈ ವಂಶದಲ್ಲಿ ಒಟ್ಟು ಹತ್ತು ಜನ ಅರಸರು ಆಳಿದರು. ಅವರಲ್ಲಿ ಒಬ್ಬಿಬ್ಬರನ್ನು ಬಿಟ್ಟರೆ ಉಳಿದವರೆಲ್ಲರೂ ಬಲಿಷ್ಠರೂ ಕರ್ತೃತ್ವಶಾಲಿಗಳೂ ಆಗಿ ಸಾಮ್ರಾಜ್ಯದ ಗೌರವವನ್ನು ಹೆಚ್ಚಿಸಿದರು. ಈ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ಕೃಷ್ಣೆಯಿಂದ ಲಂಕೆಯ ವರೆಗೆ ದಕ್ಷಿಣಭಾರತದ ಬಹುಶಃ ಎಲ್ಲ ಪ್ರದೇಶವನ್ನು ವ್ಯಾಪಿಸಿತು.

ದಕ್ಷಿಣ ಭಾರತದ ಇತಿಹಾಸದಲ್ಲಿ ಈ ಸಂಗಮ ವಂಶದ ಕರ್ತೃತ್ವವು ಅಜರಾಮರವಾಗಿದೆ. ದೇಶವು ದುರ್ಬಲತೆಗೀಡಾಗಿ, ರಾಷ್ಟ್ರದಲ್ಲಿ ನಾಯಕರು ಇಲ್ಲದೆ ಪರಕೀಯರ ಆಘಾತದಿಂದ ಹಿಂದು ಸಂಸ್ಕೃತಿಯು ವಿಪನ್ನಾವಸ್ಥೆಯನ್ನು ಅನುಭವಿಸುತ್ತಿರುವಾಗ, ಸಂಗಮರು ಮುಂದೆ ಬಂದು ರಾಷ್ಟ್ರದ ದೌರ್ಬಲ್ಯವನ್ನು ಹಿಂಗಿಸಿ ಸುಯಂತ್ರಿತವಾದ ಪ್ರಭು ಶಕ್ತಿಯನ್ನು ಸ್ಥಾಪಿಸಿ ಜನಾಂಗದಲ್ಲಿ ಚೈತನ್ಯವನ್ನು ಸ್ಫೂರ್ತಿಗೊಳಿಸಿ, ಹಿಂದು ಸಂಸ್ಕೃತಿಯನ್ನು ಸಂರಕ್ಷಿಸಿದರು. ವಿಜಯನಗರಸ್ಥಾಪನೆಯ ಪೂರ್ವದ ಅನಾಯಕಸ್ಥಿತಿಯನ್ನು ಆಲೋಚಿಸಿ, ಹರಿಹರಾದಿ ವೀರರು ಆ ಕಾಲದಲ್ಲಿ ಉದಯಿಸದೆ ಇದ್ದರೆ, ದೇಶದ ಅವಸ್ಥೆಯು ಏನಾಗುತ್ತಿತ್ತು ಎಂಬುದನ್ನು ಕ್ಷಣಹೊತ್ತು ವಿಚಾರಿಸಿದರೆ, ಸಂಗಮರು ಮಾಡಿದ ಮಹಾ ಕಾರ್ಯದ ಮಹತ್ವವು ಒಡೆದು ಕಾಣದೆ ಇರದು.

ಬರಿಯ ಸಾಮ್ರಾಜ್ಯಸ್ಥಾಪನೆಯಿಂದಲೆ ಮಹಾಕಾರ್ಯವಾಗಲಿಲ್ಲ. ಮುಂದೆ ಮೂರು ಮೂರೂವರೆ ನೂರು ವರುಷಗಳ ವರೆಗೆ ಸ್ವತಂತ್ರವಾಗಿ ನಡೆದ ಸಾಮರ್ಥ್ಯವುಳ್ಳ, ಬಲಿಷ್ಠವಾದ ರಾಜ್ಯಯಂತ್ರವನ್ನು ಸಂಗ ಮರು ನಿರ್ಮಾಣ ಮಾಡಿದರು. ಬಗೆಬಗೆಯ ತೊಡಕುಗಳಿಂದಲೂ ಎಡರುಗಳಿಂದಲೂ ತುಂಬಿದ ರಾಜ್ಯಸಂಸ್ಥೆ, ಧರ್ಮಸಂಸ್ಥೆ, ಸಮಾಜ ಸಂಸ್ಥೆ, ಪ್ರಜಾಸಂಸ್ಥೆ ಇವುಗಳನ್ನು ಏಕಮುಖವಾಗಿಯೂ ಸುಸೂತ್ರ ವಾಗಿಯೂ ಸಾಗಿಸಲು ಸಮರ್ಥವಾದ ವಿಜಯನಗರ ಸಾಮ್ರಾಜ್ಯದ ಉಜ್ವಲವಾದ ಶಾಸನಪರಂಪರೆಯನ್ನು ಸ್ಥಾಪಿಸಿದ ಶ್ರೇಯಸ್ಸು ಈ ಸಂಗಮ ವಂಶಕ್ಕೆ ಸಲ್ಲುತ್ತದೆ. ವಿಜಯನಗರ ಸಾಮ್ರಾಜ್ಯದ ಸೂತ್ರ ಗಳು ಮುಂದೆ ಬೇರೆ ಬೇರೆ ಅರಸುಮನೆತನಗಳ ಕೈಯಲ್ಲಿ ಹೋದರೂ ವಿಜಯನಗರ ಸಾಮ್ರಾಜ್ಯವು ಒಂದು, ಅದರ ಜೀವನವು ಒಂದು, ಅದರ ಪರಂಪರೆಯು ಒಂದು ಎಂಬ ಮುಖ್ಯವೂ ಮೂಲಭೂತವೂ ಆದ ವಿಶ್ವಾಸಕ್ಕೆ ಮಾತ್ರ ಚ್ಯುತಿಯು ಬರಲಿಲ್ಲವೆಂಬುದು ವಿಜಯನಗರ ಸಾಮ್ರಾಜ್ಯಕ್ಕೆ ಬಹು ಗೌರವಾಸ್ಪದವಾದ ವಿಷಯವಾಗಿದೆ. ಈ ಗೌರವ ದಲ್ಲಿ ಸಂಗಮವಂಶವು ಪ್ರಾಮುಖ್ಯವಾಗಿ ಭಾಗಿಯಾಗಿದೆ. ಹೀಗೆ ದಕ್ಷಿಣ ಭಾರತದಲ್ಲಿ ಹಿಂದು ಸಂಸ್ಕೃತಿಯನ್ನು ಉದ್ಧರಿಸಿ ಪುಷ್ಟಿಗೊಳಿಸಿ

ದುದರ ಸೂಚಕವಾಗಿ **ಹಿಂದು ರಾಯ ಸುರತ್ರಾಣ** ಎಂದು ಸಂಗಮರು ಎತ್ತಿದ ಬಿರುದು ಪೂರ್ಣವಾಗಿ ಸಾರ್ಥಕವಾಗಿದೆಯಲ್ಲವೆ ?

ಇದರಂತೆಯೆ, ಸಂಗಮರು ತಮ್ಮ ಶಾಸನಗಳಲ್ಲಿ ತಾವು **ವರ್ಣಾಶ್ರಮಧರ್ಮ ಪ್ರತಿಪಾಲಕರು** ಎಂದು ಹೇಳಿಕೊಂಡಿರುವುದಾದರೂ ಯಥಾರ್ಥವೂ ವಿಚಾರಾರ್ಹವೂ ಆಗಿದೆ. ಈಗಿನ ಜಾಗತಿಕ ಸ್ಪರ್ಧೆಯಲ್ಲಿ ಸಿಲುಕಿದ ಹಿಂದುಗಳ ವರ್ಣಾಶ್ರಮಧರ್ಮಗಳ ಅವಸ್ಥೆಯು ಮುಂದೆ ಏನೆ ಆಗಲಿ, ಅವುಗಳ ವಿಷಯದಲ್ಲಿ ಆಧುನಿಕರು ಪಡುವ ಅಭಿಪ್ರಾಯಗಳು ಎಂತಹವೆ ಆಗಿರಲಿ ಈ ವರ್ಣಾಶ್ರಮಧರ್ಮಗಳು ಸಾವಿರಾರು ವರುಷಗಳ ವರೆಗೆ ಭಾರತೀಯ ಸಂಸ್ಕೃತಿಯ ಜೀವಾಳವೂ ಹಿಂದು ಸಮಾಜದ ಮೂಲಾಧಾರವೂ ಆಗಿದ್ದುವು ಎಂಬುದನ್ನು ಮರೆಯಲಾಗದು. ಈ ಜೀವಾಳವನ್ನೇ ಕತ್ತರಿಸಲು, ಈ ಮೂಲಾಧಾರವನ್ನೇ ಉಚ್ಛೇದಿಸಲು ಪರಕೀಯ ಆಕ್ರಮಣದ ಕೊಡಲಿಯು ಆಗ ಮುಂದುವರಿದಿತ್ತು! ಅದನ್ನು ತಡೆದುದು ಸಂಗಮ ವಂಶವು!

ಸಂಗಮರ ಈ ಸಾಮ್ರಾಜ್ಯದ ಆಳಿಕೆಯಲ್ಲಿ ವರ್ಣಾಶ್ರಮಧರ್ಮಾಚಾರಗಳಿಗೆ ಪ್ರೋತ್ಸಾಹವು ದೊರೆತು, ಅವು ಜನಾಂಗದಲ್ಲಿ ದೃಢಮೂಲವಾದುವು. ವೇದ, ಉಪನಿಷತ್, ಸ್ಮೃತಿ, ಆಗಮ, ತಂತ್ರ, ಪುರಾಣ ಇವುಗಳ ಸಂಪ್ರದಾಯಗಳು ಪುನರುಜ್ಜೀವನವನ್ನು ಪಡೆದುವು. ಪರಂಪರಾಗತ ಧರ್ಮದಲ್ಲಿ ಅಚಲವಾದ ಶ್ರದ್ಧೆಯೂ ಆಚಾರ ವಿಚಾರಗಳಲ್ಲಿ ನಿಷ್ಠೆಯೂ ಜನತೆಯಲ್ಲಿ ಹೆಚ್ಚಾಗಿ ನೆಲೆಗೊಂಡುವು. ದೇವಾಲಯ, ಮಠ, ಸತ್ರ, ಅಗ್ರಹಾರ, ತೀರ್ಥ, ಕ್ಷೇತ್ರ, ದಾನ, ಧರ್ಮ ಇವುಗಳ ಮಹತ್ವವು ಬೆಳೆಯಿತು. ಪರರ ಪ್ರಹಾರಗಳು ಒಡ್ಡಿ ಬಂದುದರಿಂದ ಹಿಂದು ಧರ್ಮ ಮತ್ತು ಸಮಾಜದ ಘಟಕಗಳು ಆತ್ಮರಕ್ಷಣೆಯ ಸ್ಫೂರ್ತಿಯಿಂದ ಒಂದುಗೂಡಿ ಹಿಂದುಗಳಲ್ಲಿ ಸಂಘಶಕ್ತಿಯು ಉಂಟಾಯಿತು. ಇದರಿಂದ ಧರ್ಮ ಮತ್ತು ಸಮಾಜ ಇವುಗಳ ನಿಯಮ, ನಿರ್ಬಂಧ, ಕಟ್ಟಳೆಗಳಾದರೂ ಹೆಚ್ಚು ಬಿಗಿಯಾದುವು. ಉತ್ಸವ, ಸಮಾರಂಭ, ಸಮ್ಮೇಲನ, ವಿಜೃಂಭಣೆ ಮುಂತಾದ ಬಾಹ್ಯಾಡಂಬರದ ಪ್ರದರ್ಶನದ ಪ್ರವೃತ್ತಿಯು ಬೆಳೆದು ಧರ್ಮದ ಸ್ವರೂಪವು ಹೆಚ್ಚು ಚಿತ್ತಾಕರ್ಷಕವೂ

ಜನಪ್ರಿಯವೂ ಲೋಕಸಂಗ್ರಾಹಕವೂ ಆಯಿತು. ವಿಜಯನಗರ, ಶೃಂಗೇರಿ, ಹರಿಹರ, ಶ್ರೀರಂಗಂ, ಮದುರೆ, ಕಂಚಿ, ಚಿದಂಬರಂ ಮೊದಲಾದ ಅನೇಕ ಸ್ಥಳಗಳು ಇಂತಹ ಧಾರ್ಮಿಕ ಉತ್ಸವಸಮಾರಂಭಾದಿ ಕಾರ್ಯಗಳ ಕೇಂದ್ರಗಳಾಗಿ ಬಾಳಿದುವು.

ಹೀಗೆ ಸಾಮ್ರಾಜ್ಯವು ಹೆಚ್ಚು ಹೆಚ್ಚು ಧಾರ್ಮಿಕ ಬಂಧನಗಳಿಗೆ ಒಳಗಾದರೂ ಅನ್ಯರ ಧರ್ಮಮತಗಳ ಬಗೆಗೆ ಮತ್ಸರ-ದ್ವೇಷಗಳು ಹೆಚ್ಚಾಗಿ ಬೆಳೆಯಲಿಲ್ಲವೆಂಬುದು ಆಶ್ಚರ್ಯಕರವೂ ಅಭಿನಂದನೀಯವೂ ಆಗಿದೆ. ಶೈವ, ವೀರಶೈವ, ಜೈನ, ರಾಮಾನುಜ, ಮಾಧ್ವ ಮುಂತಾದ ಅನೇಕ ಮತಪಂಥಗಳು ಪರಸ್ಪರ ಸಖ್ಯದಿಂದ ಬಾಳಿ ಬೆಳೆದುವು. ಅರಸರು ಉಜ್ವಲಶಿವಮತನಿಷ್ಠರು ಆಗಿದ್ದರೂ ಅವರಿಂದ ಯಾವ ಮತ-ಪಂಥಕ್ಕೂ ತೊಂದರೆಯಾಗಲಿಲ್ಲ. ಇಷ್ಟೇ ಅಲ್ಲದೆ, ಬೇರೆ ಬೇರೆ ಮತಪಂಗಡಗಳಲ್ಲಿ ಪರಸ್ಪರ ವಿತುಷ್ಟಗಳು ಉಂಟಾಗದಂತೆ ಅವರು ಬಹಳ ಎಚ್ಚರಪಡುತ್ತಿದ್ದರು.

ಬುಕ್ಕರಾಯನು ವಿಧಿಸಿದ ಜೈನ-ರಾಮಾನುಜರ ಒಡಂಬಡಿಕೆಯು ಪರಧರ್ಮಮತಗಳಲ್ಲಿ ಬರಿಯ ಸಹನೆಯನ್ನಲ್ಲ, ಆದರವನ್ನೂ ಹೇಗೆ ಕಲಿಯಬೇಕು ಎಂಬುದಕ್ಕೆ ಜಗತ್ತಿನ ಇತಿಹಾಸದಲ್ಲಿಯೇ ಆದರ್ಶಭೂತವಾದ ಉದಾಹರಣೆಯಾಗಿದೆ. ವಿಜಯನಗರ ಸಾಮ್ರಾಜ್ಯದ ಧಾರ್ಮಿಕ ನೀತಿಯು ಆರಂಭದಿಂದಲೂ ಇದೆ ರೀತಿಯದಾಗಿತ್ತು ಎಂದು ಧಾರಾಳವಾಗಿ ಹೇಳಬಹುದು. ಶಾಸನಕರ್ತನಾದ ಸಮ್ರಾಜನು ಹಾಕಿಕೊಟ್ಟ ಈ ಉದಾಹರಣೆಯು ಎಲ್ಲರಿಗೂ ಮಾರ್ಗದರ್ಶಿಯಾಯಿತು. ಬುಕ್ಕರಾಯನ ಈ ಬಿರುದನ್ನೆ ಆತನ ವಂಶಿಕರೂ ಅನುಗಾಮಿಗಳೂ ಮುಂದುವರಿಸಿದರು. ಇಮ್ಮಡಿ ಹರಿಹರರಾಯನ ಕಾಲದ ಬೇಲೂರ ಶಾಸನದ ಒಂದು ಪದ್ಯದಲ್ಲಿ ಸರ್ವ ಧರ್ಮ-ಮತಗಳ ಐಕ್ಯದ ಈ ತತ್ತ್ವವು ಸ್ಫುಟವಾಗಿ ಪ್ರತಿಪಾದಿತವಾಗಿದೆ:

> **ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ**
> **ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ।**

ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತು ವಾಂಛಿತಫಲಂ ಶ್ರೀಕೇಶವಃ ಸರ್ವದಾ ||

[ಬೇಲೂರು ೩; ಕ್ರಿ.ಶ. ೧೩೯೭]

"ಶೈವರು ಶಿವನೆಂದು, ವೇದಾಂತಿಗಳು ಬ್ರಹ್ಮನೆಂದು, ಬೌದ್ಧರು ಬುದ್ಧನೆಂದು, ಜೈನರು ಅರ್ಹತನೆಂದು, ಮೀಮಾಂಸಕರು ಕರ್ಮವೆಂದು ಯಾವನನ್ನು ಉಪಾಸನೆ ಮಾಡುವರೋ, ಆ ಶ್ರೀಕೇಶವನು ನಿಮಗೆ ಯಾವಾಗಲೂ ಇಷ್ಟಾರ್ಥವನ್ನು ಈಯಲಿ."

ಮುಂದೆ ಇಮ್ಮಡಿ ದೇವರಾಯನ ಕಾಲದಲ್ಲಿ ಸರ್ವಧರ್ಮ ಬಾಂಧವ್ಯದ ಈ ಬುದ್ಧಿಯು ಇನ್ನೂ ವಿಕಾಸವನ್ನು ಪಡೆಯಿತು. ಶಕ್ತಿಶಾಲಿಯಾದ ಈ ರಾಯನು ಹಿಂದುಗಳ ಹುಟ್ಟು ಹಗೆಗಳಾದ ಮಹಮ್ಮದಿಯರನ್ನು ತನ್ನವರೆಂದು ಬಗೆದು ತನ್ನ ರಾಜ್ಯದಲ್ಲಿಯ ಮುಸಲ್ಮಾನರಿಗೆ ತನ್ನ ಪ್ರಜಾಜನರ ಅಧಿಕಾರ-ಸೌಲಭ್ಯಗಳನ್ನು ತಾನಾಗಿ ಒದವಿಸಿಕೊಟ್ಟನು. ಅವರ ಧರ್ಮಭಾವನೆಯನ್ನು ಸಹೃದಯತೆಯಿಂದ ಆದರಿಸಿದನು (ಪುಟ ೬೬ ನೋಡಿ). ದೇವರಾಯನ ಈ ಧರ್ಮಬಾಂಧವ್ಯವು ವಿಜಯನಗರ ಸಾಮ್ರಾಜ್ಯದ ಪುಣ್ಯಕೀರ್ತಿಯನ್ನು ಪ್ರಫುಲ್ಲಗೊಳಿಸುವ ತೇಜಃಪುಂಜವಾದ ಅಲಂಕಾರವಾಗಿದೆ!

ಈ ಕಾಲದಲ್ಲಿ ಸಂಸ್ಕೃತ ವಿದ್ಯೆಯು ಪುನರುಜ್ಜೀವನವಾಯಿತು. ಹರಿಹರ, ಬುಕ್ಕರಾಯ ಮೊದಲಾದವರ ಆಶ್ರಯದಲ್ಲಿ ವೇದಭಾಷ್ಯದಂತಹ ಪ್ರಚಂಡವಾದ ಸಾಹಿತ್ಯಕಾರ್ಯವು ನೆರವೇರಿತು. ವೇದಾಂತ, ಮೀಮಾಂಸೆ, ಸ್ಮೃತಿ, ವ್ಯಾಕರಣ, ಕಾವ್ಯ, ನಾಟಕ, ಅಲಂಕಾರ, ಸಂಗೀತ ಮುಂತಾದ ವಿವಿಧ ಶಾಸ್ತ್ರೀಯ ವಿಷಯಗಳಿಗೆ ಸಂಬಂಧಪಟ್ಟ ಗ್ರಂಥಗಳು ಸಂಸ್ಕೃತದಲ್ಲಿ ನಿರ್ಮಾಣವಾದುವು. ಕನ್ನಡ, ತೆಲುಗು ಸಾಹಿತ್ಯಗಳೂ ಬೆಳೆದುವು. ಜೈನ, ರಾಮಾನುಜ, ವೀರಶೈವ, ಮಾಧ್ವ ಮೊದಲಾದ ಮತಗಳ ಸಾಹಿತ್ಯವು ಅಭಿವೃದ್ಧಿಯನ್ನು ಪಡೆಯಿತು. ಇವುಗಳಲ್ಲಿ ವೀರಶೈವ ಸಾಹಿತ್ಯವು ವಿಶೇಷವಾಗಿ ವಿಸ್ತಾರಗೊಂಡಿತು.

ಈ ಕಾಲದಲ್ಲಿ ಶಿಲ್ಪಕಲಾಸಂಪ್ರದಾಯವು ಹೊಸ ರೀತಿಯನ್ನು ಅನುಸರಿಸಿ ಮನೋಹರವಾದ ಹಲವು ಕೃತಿಗಳನ್ನು

ರೂಪುಗೊಳಿಸಿತು. ಉಧ್ವಸ್ತವಾದ ಅನೇಕ ದೇವಾಲಯಗಳು ಜೀರ್ಣೋದ್ಧಾರ ಹೊಂದಿ ಹೊಸಕಳೆಯನ್ನು ತಳೆದುವು. ಹೊಸವು ಕಟ್ಟಲ್ಪಟ್ಟುವು. ಅರಮನೆಗಳು, ಊರುಗಳು, ಪಟ್ಟಣಗಳು ಸೊಬಗುಗೊಂಡುವು. ದೇವಾಲಯಗಳು ಮತ್ತು ಗುಡಿಗಳು ನಾಡಿನ ಧರ್ಮಸ್ಥಾನಗಳೂ ವಿದ್ಯೆಯ ನಿಲಯಗಳೂ ಸಾರ್ವಜನೀನ ಸಮ್ಮೇಲನಾಲಯಗಳೂ ಆಗಿದ್ದುವು. ದೇವಾಲಯ ಮುಂತಾದ ಸಾರ್ವಜನಿಕ ಸಂಸ್ಥೆಗಳ ವ್ಯವಸ್ಥೆಯು ಪ್ರಾಮುಖ್ಯವಾಗಿ ಪ್ರಜಾಪ್ರತಿನಿಧಿಗಳ ಸ್ವಾಧೀನವಾಗಿಯೆ ಇರುತ್ತಿತ್ತು.

ಈ ಕಾಲದಲ್ಲಿ ವ್ಯಾಪಾರ, ಕೃಷಿ, ಕೈಗಾರಿಕೆ ಮೊದಲಾದ ವ್ಯವಸಾಯಗಳು ಉತ್ಕರ್ಷವನ್ನು ಹೊಂದಿದುವು. ಬೇರೆಬೇರೆ ವ್ಯವಸಾಯಗಳ ಹಿತಸಂರಕ್ಷಣೆಯಲ್ಲಿ ಜಾಗರೂಕವಾಗಿರುವ ಗಣ, ಸಂಘ, ಸಮಾಜಗಳಂತಹ ಪ್ರಾತಿನಿಧಿಕ ಸಂಸ್ಥೆಗಳು ಇದ್ದುವು. ಇವುಗಳಲ್ಲಿಯ ಪರಸ್ಪರ ವಿವಾದಗಳಾಗಲಿ, ಅನ್ಯಾಯಗಳಾಗಲಿ ಸಾಧ್ಯವಿದ್ದ ಮಟ್ಟಿಗೆ ಜನಸಾಮಾನ್ಯರಾದ ಸಂಘದ ಪ್ರತಿನಿಧಿಗಳಿಂದಲೆ ನಿರ್ಣಯವಾಗುತ್ತಿದ್ದುವು. ಅಧಿಕಾರಿಗಳಿಂದಾಗುವ ಅನ್ಯಾಯಗಳನ್ನು ಪ್ರತಿಕಾರಮಾಡುವ ಶಕ್ತಿಯೂ ಸ್ವಾಭಿಮಾನವೂ ಪ್ರಜಾ ಜನರಲ್ಲಿ ಬೆಳೆದಿತ್ತು.

ಈ ರೀತಿಯಾಗಿ ಪರಿಸ್ಥಿತಿಯ ಪರಿಜ್ಞಾನ, ರಾಜಕೀಯಭಾವನೆ, ಸ್ವಧರ್ಮಜಾಗೃತಿ, ಸಾಮಾಜಿಕ ಸಹಕಾರ, ಸಾಂಘಿಕ ಜೀವನ. ಉದ್ಯಮಶೀಲತೆ, ಜ್ಞಾನನಿಷ್ಠೆ, ಸಾಹಿತ್ಯಾಭಿರುಚಿ, ಕಲಾಪ್ರೀತಿ, ಉನ್ನತಿಯ ಲಾಲಸೆ ಮೊದಲಾದ ನಾಗರಿಕ ಜನಾಂಗದ ಅನೇಕ ಗುಣಗಳು ಈ ಸಂಗಮ ವಂಶದ ಆಳಿಕೆಯಲ್ಲಿ ವಿಜಯನಗರ ಸಾಮ್ರಾಜ್ಯದ ಜನತೆಯಲ್ಲಿ ವಿಕಾಸಹೊಂದಿದುವು.

---

# ಸಾಳುವ ಮನೆತನದ ಆಳಿಕೆ

## (೧೪೮೫-೧೫೦೬)

### ಹತ್ತನೆಯ ವಿಲಾಸ

### ನರಸಿಂಹರಾಯ (೧೪೮೫-೯೭)

ಸಂಗಮಮನೆತನದ ವಿರೂಪಾಕ್ಷನನ್ನು ತಳ್ಳಿ ವಿಜಯನಗರದ ಸಿಂಹಾಸನದ ಮೇಲೆ ನರಸಿಂಹರಾಯನು ವಿರಾಜಮಾನನಾದುದನ್ನು ಇದೀಗ ನೋಡಿದೆವು. ಈ ನರಸಿಂಹನು ಸಾಳುವ[೧] ಮನೆತನದವನು. ಈತನ ಪೂರ್ವವೃತ್ತವನ್ನು ಸಂಕ್ಷೇಪವಾಗಿ ವಿಚಾರಿಸಿ ಈತನ ಮುಂದಿನ ಆಳಿಕೆಯ ವೃತ್ತಾಂತವನ್ನು ನಿರೀಕ್ಷಿಸುವ.

ಸಾಳುವರದು ಪುರಾತನವೂ ಪ್ರಸಿದ್ಧವೂ ಆದ **ಕನ್ನಡ ಮನೆತನವು**. ತಾವು ಯಾದವಕುಲದವರು ಎಂದು ಇವರು ಹೇಳಿಕೊಂಡಿರುವರು. ಮಂಕಿದೇವನು ಈ ಮನೆತನದ ಮೂಲಪುರುಷನು. ಈತನ ಮಗನು ಗುಂಡನು. ಈತನು ಶೂರನಾಗಿದ್ದು ಕಲ್ಯಾಣಪುರದಲ್ಲಿ[೨] ಆಳುತ್ತಿದ್ದನು. ಗುಂಡನ ಮಗನು ಮಂಗಿಯು. ಈತನಾದರೂ ಬಹು ಶೂರನೂ ಸಾಹಸಿಯೂ ಆಗಿದ್ದನು. ವಿಜಯನಗರಸಾಮ್ರಾಜ್ಯದ ಆರಂಭಪೂರ್ವಕಾಲದಲ್ಲಿ ಮಹಮ್ಮದೀಯರೊಡನೆ ನಡೆದ ಹೋರಾಟಗಳಲ್ಲಿ ಈತನು ಪ್ರಾಮುಖ್ಯವಾಗಿ ಭಾಗವನ್ನು ವಹಿಸಿದ್ದನು. ಇದರಿಂದ ಸಾಳುವಮನೆತನವು ಮೂಲದಲ್ಲಿ ಉತ್ತರಕರ್ಣಾಟಕಕ್ಕೆ ಸಂಬಂಧಿಸಿದುದಾಗಿದ್ದು, ಮಹಮ್ಮದೀಯರ ಆಘಾತದಿಂದ ದಕ್ಷಿಣಕ್ಕೆ ಪ್ರಯಾಣ ಮಾಡಿ ಸಂಗಮಪುತ್ರರಿಗೆ ವಿಜಯನಗರಸಾಮ್ರಾಜ್ಯಸ್ಥಾಪನೆಯಲ್ಲಿ ನೆರ

---

೧. ಸಾಳುವ ಎಂದರೆ ಗಿಡಗ; ಇದು ಅಚ್ಚಗನ್ನಡ ಶಬ್ದವು.

೨. ಕಲಬುರ್ಗಿ ಪ್ರಾಂತದಲ್ಲಿರುವ ಚಾಲುಕ್ಯರ ಪ್ರಾಚೀನ ರಾಜಧಾನಿ.

ವಾಯಿತು ಎಂದು ತಿಳಿಯುತ್ತದೆ.[೩] ಮಂಗಿರಾಜನು ಪ್ರತಾಪವನ್ನು ಮೆರೆಸಿ **ಕಠಾರಿ ಸಾಳುವ** ಎಂಬ ಬಿರುದನ್ನು ಪಡೆದನು. ಈತನು ವೀರಕಂಪಣ್ಣನ ಸೇನಾಪತಿಯಾಗಿ ಕಂಚಿ-ಮದುರೆಯ ದಂಡಯಾತ್ರೆಯಲ್ಲಿ ಆತನಿಗೆ ಬಹಳ ನೆರವಾದನು. ಮಂಗಿರಾಜನ ಮೊಮ್ಮಗನಾದ ತಿಪ್ಪರಾಜನು ಇಮ್ಮಡಿದೇವರಾಯನ ತಂಗಿಯನ್ನು ಮದುವೆಯಾಗಿದ್ದನು. ನರಸಿಂಹರಾಯನು ತಿಪ್ಪರಾಜನ ಅಣ್ಣನಾದ ಗುಂಡನ ಎರಡನೆಯ ಮಗನು. ಈತನ ತಾಯಿ ಮಲ್ಲಾಂಬಿಕೆಯು. ನರಸಿಂಹನು ಅಹೋಬಲ ನರಸಿಂಹದೇವರ ವರಪ್ರಸಾದದಿಂದ ಹುಟ್ಟಿದವನು.

ಸಂಗಮ ಮನೆತನದ ಮಲ್ಲಿಕಾರ್ಜುನ–ವಿರೂಪಾಕ್ಷರ ಆಳಿಕೆಗಳಲ್ಲಿ ನಿರ್ಬಲತೆಯು ಉಂಟಾಯಿತು. ಪ್ರಭುಶಕ್ತಿಯು ನಿಃಸತ್ವವಾದುದರಿಂದ ಸಾಮ್ರಾಜ್ಯನಿಷ್ಠೆಯು ಶಿಥಿಲವಾಯಿತು. ಪಕ್ಷಗಳೂ ಪಂಗಡಗಳೂ ತಲೆಯೆತ್ತಿ ಅಧಿಕಾರಲಾಲಸೆಯು ಬೆಳೆಯಿತು. ಸಾಮ್ರಾಜ್ಯದ ಈ ವಿಷಮ ಸ್ಥಿತಿಯಲ್ಲಿ ಮತ್ತೆ ಬಲಿಷ್ಠವೂ ಸುಯಂತ್ರಿತವೂ ಆದ ಪ್ರಭುತ್ವವು ಸ್ಥಾಪನವಾಗದೆ ಇದ್ದರೆ ಸಾಮ್ರಾಜ್ಯಕ್ಕೆ ಉಳಿಗಾಲವಿಲ್ಲವೆಂಬುದನ್ನು ಸಾಮ್ರಾಜ್ಯದ ಏಕನಿಷ್ಠ ಸೇವಕನಾದ ನರಸಿಂಹನು ಕಂಡುಕೊಂಡನು. ತೇಜಸ್ವಿಯೂ ದೂರದರ್ಶಿಯೂ ಆದ ಈತನು ಈ ಸುಸಂಧಿಯಲ್ಲಿ ತಾನು ಮುಂದುವರಿದರೆ,ತನ್ನಿಂದ ಸಾಮ್ರಾಜ್ಯಸೇವೆಯಾಗುವುದಲ್ಲದೆ ಸ್ವಹಿತವೂ ಸಾಧಿಸುವುದೆಂದು ಬಗೆದನು.

ಈತನ ಈ ಸಂಕಲ್ಪದ ಕುರುಹುಗಳು ೧೪೫೬ರಿಂದ ವ್ಯಕ್ತವಾಗತೊಡಗಿದುವು. ಈತನು ಮುಳಬಾಗಲ್, ಪೆನುಗೊಂಡ, ಚಂದ್ರಗಿರಿ ಈ ನಡುನಾಡಿನಲ್ಲಿ ರಾಜ್ಯಾಧಿಕಾರಿಯಾಗಿರುವಾಗ ತನ್ನ ಪ್ರಭಾವದಿಂದಲೂ ಜನಸಂಗ್ರಾಹಕ ಗುಣದಿಂದಲೂ ತನ್ನ ಶಕ್ತಿಯನ್ನೂ ಅಧಿಕಾರವನ್ನೂ ಬೆಳೆಸಿಕೊಂಡನು. ಬರಬರುತ್ತ ಈತನು ಹೆಚ್ಚುಕಡಿಮೆ ಸ್ವತಂತ್ರನಾದ ಅರಸನಂತೆಯೆ ವರ್ತಿಸತೊಡಗಿದನು.

---

೩. L. K. P. 41.

ಇಷ್ಟಾದರೂ ಆ ಅರಾಜಕದ ದುಂದುಗಾರಿಕೆಯಲ್ಲಿ ಇವನನ್ನು ತಡೆವ ಧೈರ್ಯವು ಯಾರಿಗೂ ಆಗಲಿಲ್ಲ.

ಈ ಕಾಲದಲ್ಲಿ ವಿಜಯನಗರಸಾಮ್ರಾಜ್ಯವು ದಾರುಣ ದುರ್ದೆಸೆಗೀಡಾಗಿತ್ತು. ಒಳಗೆ ಬಲವಿಲ್ಲ; ಹೊರಗೆ ಸುತ್ತಲೂ ಹಗೆಗಳು ನೆರೆದು ಹರಿದುತಿನ್ನುವ ಹೊಂಚಿನಲ್ಲಿರುವರು. ಪಶ್ಚಿಮದಲ್ಲಿ ಗೋವೆ ಮತ್ತು ಬೆಳಗಾವಿಯು, ಈಶಾನ್ಯದಲ್ಲಿ ರಾಜಮಹೇಂದ್ರಿ ಮತ್ತು ಕೊಂಡಪಲ್ಲಿಯ ಪ್ರದೇಶಗಳು ಬಹಮನಿಯವರ ಪಾಲಾದುವು. ಓರಿಸದ ಕಪಿಲೇಶ್ವರನು ಕಂಚಿಯವರೆಗೆ ನುಗ್ಗಿ ದೇಶವನ್ನು ಹಾಳುಮಾಡಿದನು. ಅತ್ತ ದಕ್ಷಿಣದಲ್ಲಿ ಪಾಂಡ್ಯರು ಪುಂಡಾಟಿಕೆಯನ್ನು ಹೂಡಿದರು. ಇಂತು ಕಳಚಿ ಹೋಗುತ್ತಿರುವ ಸಾಮ್ರಾಜ್ಯದ ಅವಯವಗಳನ್ನು ಮತ್ತೆ ಒಂದುಗೂಡಿಸಿ ಸುಯಂತ್ರಿತವಾದ ರಾಜ್ಯಶಕ್ತಿಯನ್ನು ಸ್ಥಾಪಿಸಿ ಸಾಮ್ರಾಜ್ಯವನ್ನು ಉದ್ಧರಿಸಲು ನರಸಿಂಹನು ಟೊಂಕಕಟ್ಟಿದನು. ಮದುರೆ,ರಾಮೇಶ್ವರ, ಲಂಕೆಯವರೆಗೆ ದಂಡಯಾತ್ರೆಯನ್ನು ಮಾಡಿ ಆ ನಾಡಿನಲ್ಲಿ ನೆಲೆಸಿದ ತನ್ನ ಜ್ಞಾತಿ ಬಂಧುಗಳ ನೆರವಿನಿಂದ ದಕ್ಷಿಣಪ್ರಾಂತವನ್ನು ಸ್ಥಿರಗೊಳಿಸಿದನು. ಅಲ್ಲಿಂದ ನರಸಿಂಹನು ಕಂಚಿಯವರೆಗೆ ಕೈಕಾಲುಚಾಚಿದ ಓರಿಸ, ಬಹಮನಿಯವರ ದಳಗಳನ್ನು ಹಿಮ್ಮೆಟ್ಟಿಸುತ್ತ ಉತ್ತರಕ್ಕೆ ಸಾಗಿದನು. ಮಛಲೀಪಟ್ಟಣದ ವರೆಗಿನ ಕೋಟೆಗಳನ್ನು ವಶಪಡಿಸಿಕೊಂಡು ಆಂಧ್ರಪ್ರಾಂತದಲ್ಲಿ ತನ್ನ ದರ್ಪವನ್ನು ಬೀರಿದನು.

ಈ ಸಮಯಕ್ಕೆ ಕೊಂಡಪಲ್ಲಿಯ ಪ್ರದೇಶದಲ್ಲಿ ಹಿಂದು–ಮಹಮ್ಮದೀಯರಲ್ಲಿ ಮಲ್ಲಾಮಲ್ಲಿಯು ನಡೆದಿತ್ತು. ಹಿಂದುಗಳು ಬಹಮನಿಯವರ ವಿರುದ್ಧವಾಗಿ ದೊಂಬಿಯನ್ನು ಹೂಡಿ ಓರಿಸದ ಅರಸನ ನೆರವನ್ನು ಕೋರಿದ್ದರು. ಬಹಮನಿಯ ಸುಲ್ತಾನನಾದ ಮುಹಮ್ಮದಶಹನು ಆ ಪ್ರದೇಶವನ್ನು ಎತ್ತಿಹಾಕುವ ಹಂಚಿಕೆಯಲ್ಲಿ ಇದ್ದನು. ಅಷ್ಟರಲ್ಲಿ ಕರ್ನಾಟಕ–ಆಂಧ್ರಪ್ರಾಂತಗಳನ್ನು ಪಳಗಿಸಿಕೊಂಡು ಉತ್ತರಕ್ಕೆ ಹಾರಿ ಬರುವ ನರಸಿಂಹನು ತನ್ನ ತುತ್ತಿಗೆ ಅಡ್ಡವಾದುದನ್ನು ಕಂಡು ಶಹನು ಆತನನ್ನು ಹಣಿಯಲು ಹಾತೊರೆದನು. ಇಬ್ಬರ ನಡುವೆ ಕೊಸರಾಟವು

ನಡೆಯಿತು. ನರಸಿಂಹನು ಒಂದೆರಡು ಸಲ ಮಛಲೀಪಟ್ಟಣದಿಂದ ನೂಕಿಸಿಕೊಂಡನು. ಶಹನು ರಾಜಮಹೇಂದ್ರಿ, ಕೊಂಡವೀಡುಗಳನ್ನು ಕಸಿದನು. ಆದರೂ ನರಸಿಂಹನ ಮುಂದೆ ಮುಹಮ್ಮದೀಯರ ಆಟವು ಸಾಗಲಿಲ್ಲ. ಅವರು ವಿಜಯನಗರಸಾಮ್ರಾಜ್ಯದಿಂದ ಪೂರ್ಣವಾಗಿ ಓಡಿಸಲ್ಪಟ್ಟರು.

ಮಹತ್ವಾಕಾಂಕ್ಷಿಯಾದ ನರಸಿಂಹನು ಇಷ್ಟರಿಂದ ತೃಪ್ತನಾಗಲಿಲ್ಲ. ಇನ್ನೂ ಮುಂದೆ ಸಾಗಿ ಸಾಮ್ರಾಜ್ಯದ ಮೇರೆಯನ್ನು ಹಬ್ಬಿಸಲು ಬಗೆದನು. ಉದಯಗಿರಿಯ ಆಚೆಗೆ ದಂಡಯಾತ್ರೆಯನ್ನು ಹೂಡಿ ಕಲಿಂಗ (ಓರಿಸ) ರಾಜನನ್ನು ಕೆಣಕಿದನು. ಈ ನಡುವೆ ಈತನ ಸೇನಾಪತಿಯಾದ ಈಶ್ವರನಾಯಕನು ಉದಯಗಿರಿ, ಕಂದಕೂರ (ನೆಲ್ಲೂರು ಜಿ.) ವರೆಗೆ ಬಂದಿದ್ದ ಬಿದರಕೋಟೆಯ (ಬಿದರದ) ಸೈನ್ಯವನ್ನು ಕಂದಕೂರಲ್ಲಿ ನಡೆದ ಭೀಷಣವಾದ ಕಾಳೆಗದಲ್ಲಿ ಕಡಿದೊಟ್ಟಿದ್ದನು. ಕಲಿಂಗರಾಜನಾದ ಕಪಿಲೇಶ್ವರನು ತನ್ನ ರಾಜಧಾನಿಗೆ ಪಲಾಯನವಾಡಿದನು. ನರಹಿಂಹನ ಕಟ್ಟಾಳುಗಳು ಕಲಿಂಗರಾಜಧಾನಿಯನ್ನು ಮುತ್ತಿದರು. ಕಪಿಲೇಶ್ವರನು ಶರಣಾಗತನಾದನು.

ಹೀಗೆ ಒಬ್ಬ ಸಾಮಾನ್ಯ ಅಧಿಕಾರಿಯಾದ ನರಸಿಂಹನು ಸಾಮ್ರಾಜ್ಯದ ಹೊಣೆಯನ್ನು ಹೊತ್ತುಕೊಂಡು, ಸಾಮ್ರಾಜ್ಯವನ್ನು ಉಳುಹಿ ಅದರ ಗೌರವವನ್ನು ಬೆಳೆಸುತ್ತಿರುವಾಗ ಅತ್ತ ಸಿಂಹಾಸನಾಧಿಕಾಗಳಾಗಿ ಸಮ್ರಾಜರೆಂದೆನಿಸಿಕೊಳ್ಳುವವರು ಏನು ಮಾಡುತ್ತಿದ್ದರು ? ಮಲ್ಲಿಕಾರ್ಜುನನು ವಿಷಯಾಸಕ್ತಿಯಿಂದ ಕರ್ತವ್ಯಪರಾಙ್ಮುಖನಾಗಿ ತನ್ನ ಕೈಯಿಂದ ತನ್ನ ರಾಜ್ಯವನ್ನು ಕಳೆದುಕೊಂಡಿದ್ದನು (೧೪೬೬). ಆತನನ್ನು ತಳ್ಳಿ ಪಟ್ಟವನ್ನು ಗಳಿಸಿದ ವಿರೂಪಾಕ್ಷನಾದರೂ ಆತನನ್ನೇ ಹಿಂಬಾಲಿಸಿ, ಕರ್ತವ್ಯಮೂಢನಾಗಿ ರಾಜ್ಯದ ಬಣಹವ್ಯಾಸವನ್ನು ಹಿಡಿದುಕೊಂಡಿದ್ದನು. ತಾನು ಮಾಡಬೇಕಾದ ಕಾರ್ಯಗಳನ್ನು ಬಹು ಯಶಸ್ವಿಯಾಗಿ ಮಾಡುತ್ತಲಿರುವ ನರಸಿಂಹನನ್ನಾದರೂ ಆತನು ಸ್ನೇಹಭಾವನೆಯಿಂದ ಕಾಣಲಿಲ್ಲ. ಆದುದರಿಂದ ಈ ದಿಗ್ವಿಜಯಗಳಿಂದ ಮರಳಿದ ನರಸಿಂಹನು

ಇಂತಹ ಒಡೆಯನು ಇರುವುದಕ್ಕಿಂತ ಹೋಗುವುದೇ ಸಾಮ್ರಾಜ್ಯಕ್ಕೆ ಲೇಸೆಂದು ಬಗೆದು, ವಿರೂಪಾಕ್ಷನನ್ನು ತಳ್ಳಿ, ಸಿಂಹಾಸನವನ್ನೇರಿ ಸಾಮ್ರಾಜ್ಯಾಭಿಷೇಕವನ್ನು ಮಾಡಿಸಿಕೊಂಡನು (೧೪೮೬).[೪]

ನರಸಿಂಹನ ಆಳಿಕೆಯು ಬಲಶಾಲಿಯಾಯಿತು. ಆತನು ಬಹು ದಕ್ಷತೆಯಿಂದ ರಾಜ್ಯಯಂತ್ರವನ್ನು ನಡೆಸಿದನು. ಹಿಂದು ಅರಸರ ಮಾತೇನು ಆತನ ಪ್ರತಿಸ್ಪರ್ಧಿಗಳಾದ ಮುಹಮ್ಮದೀಯರೂ ಆತನ ಸಹಾಯವನ್ನು ಹಾರಯಿಸಿದರು. ಬಹಮನೀರಾಜ್ಯದಲ್ಲಿ ಈಗಾಗಲೇ ಒಳಜಗಳಗಳು ಉದ್ಭವಿಸಿದ್ದುವು. ಬಿದರದ ಅರಸನಾದ ಕಾಸಿಮು ಬರೀದ ಶಹನು ತನ್ನ ಹಗೆಯಾದ ವಿಜಾಪುರದ ಯೂಸುಫ ಆದಿಲಶಹನೊಡನೆ ಕಾದಲು ನರಸಿಂಹನ ನೆರವನ್ನು ಬೇಡಿದನು. ಸಮಯಜ್ಞನಾದ ನರಸಿಂಹನು ಈ ಸಂಧಿಯನ್ನು ಸಾಧಿಸಿ, ಕೂಡಲೆ ಮುದಗಲ್, ರಾಯಚೂರು ಪ್ರಾಂತಗಳಲ್ಲಿ ನುಗ್ಗಿ ಆ ಕೋಟೆಗಳನ್ನು ವಶಮಾಡಿಕೊಂಡನು (೧೪೮೯).

ಇದಕ್ಕಾಗಿ ಪರಿತಪಿಸುತ್ತಿದ್ದ ಆದಿಲಶಹನು ಮುಂದೆ ನಾಲ್ಕು ವರ್ಷಗಳಷ್ಟರಲ್ಲಿ ರಾಯಚೂರ ಮೇಲೆ ದಾಳಿಯಿಟ್ಟನು. ಸಾಮ್ರಾಜ್ಯದ ಸೇನಾಪತಿಯೂ ಮಂತ್ರಿಯೂ ಆದ ನರಸನಾಯಕನು ಅದರ ಸಂರಕ್ಷಣಕ್ಕಾಗಿ ತುಂಗಭದ್ರೆಯನ್ನು ದಾಟಿ ದಂಡೆತ್ತಿಹೋದನು. ಶಹನ ಸೇನೆಯಲ್ಲಿ ಭಯವು ಪ್ರವೇಶಮಾಡಿತು. ಶಹನ ದಂಡು ಮೊದಲು ನಾಯಕನ ಹಣಿತಕ್ಕೆ ಕಂಗೆಟ್ಟಿತು. ಆದರೂ ಮುಂದೆ ಶಹನು ಉತ್ಸಾಹಗೊಂಡು ನಾಯಕನನ್ನು ಇದಿರಿಸಿದನು. ಕೊನೆಗೆ ನಾಯಕನ ಕಸುವು ಕಡಿಮೆಯಾಗಿ ಆತನು ಸೋತು ಮುದಗಲ್–ರಾಯಚೂರು ಕೋಟೆಗಳನ್ನು ಶಹನಿಗೆ ಬಿಟ್ಟು ತಿರುಗಿ ಬರಬೇಕಾಯಿತು (೧೪೯೩).

ನರಸಿಂಹನು ಹನ್ನೆರಡು ವರ್ಷ ರಾಜ್ಯವಾಳಿದನು. ಈತನ ಆಳಿಕೆಯಲ್ಲಿ ಮೇಲೆ ವಿವರಿಸಿದ ಪ್ರಸಂಗವೊಂದಲ್ಲದೆ ಬೇರೆ ಯುದ್ಧಪ್ರಸಂಗ

---

೪. ನರಸಿಂಹನ ಅಭ್ಯುದಯದ ಕೆಲವು ವಿವರಗಳನ್ನು ಎಂಟನೆಯ 'ವಿಲಾಸ'ದ ಕೊನೆಯ ಭಾಗದಲ್ಲಿ ಕಾಣಬಹುದು.

ಗಳು ಬರಲಿಲ್ಲ. ಈತನು ಸಿಂಹಾಸನಕ್ಕೆ ಬರುವ ಮೊದಲೆ ಈತನ ಹೋರಾಟಗಳೆಲ್ಲ ಮುಗಿದಿದ್ದುವು. ಈತನ ಆಡಳಿತವು ಸಾಮ್ರಾಜ್ಯಕ್ಕೂ ಪ್ರಜಾಜನರಿಗೂ ಹಿತಾವಹವಾಯಿತು. ನರಸಿಂಹನು ಒಡ್ಡಿಬಂದ ವಿನಾಶದಿಂದ ಸಾಮ್ರಾಜ್ಯವನ್ನು ಉಳುಹಿದನು. ಯೋಗ್ಯಕಾಲದಲ್ಲಿ ನರಸಿಂಹನು ಮುಂದೆ ಬರದಿದ್ದರೆ ಓರಿಸ, ಬಹಮನೀ ಅರಸರ ಕೈಗೆ ಸಿಲುಕಿ ಸಾಮ್ರಾಜ್ಯವು ಹರಿದು ಹಂಚಿಹೋಗುತ್ತಿತ್ತು.

ನರಸಿಂಹನು ಸಾಮ್ರಾಜ್ಯವನ್ನು ಬದುಕಿಸಿದನಲ್ಲದೆ ಮತ್ತೆ ಅದರಲ್ಲಿ ಮೊದಲಿನ ಶಕ್ತಿಯನ್ನೂ ತುಂಬಿದನು. ಈತನು ಸಾಮ್ರಾಜ್ಯದಲ್ಲಿ ಮತ್ತೆ ಸುಯಂತ್ರಿತವಾದ ಶಾಸನಪದ್ಧತಿಯನ್ನು ನೆಲೆಗೊಳಿಸಿದನು. ಆಡಳಿತದಲ್ಲಿ ಸುಧಾರಣೆಗಳನ್ನು ಮಾಡಿದನು. ಹಿಂದಿನ ಅರಾಜಕದ ಆರಸೊತ್ತಿಗೆಯಲ್ಲಿ ತೆರಿಗೆಗಳು ತಲೆಭಾರವಾಗಿದ್ದುವು. ಅನ್ಯಾಯದ ಕರಗಳು ಹೇರಲಾಗಿದ್ದುವು. ಅವುಗಳನ್ನು ಸಹಿಸದೆ ಎಷ್ಟೋ ಕಡೆಗಳಲ್ಲಿ ಜನರು ಗುಳೆಕಟ್ಟಿದ್ದರು. ಜನತೆಯಲ್ಲಿ ಅಸಂತೋಷವು ಬೆಳೆದಿತ್ತು. ಊರುಗಳು ಹಾಳಾಗಿದ್ದುವು. ನರಸಿಂಹನು ಈ ಅನ್ಯಾಯಗಳನ್ನು ದೂರಮಾಡಿದನು. ತೆರಿಗೆಗಳನ್ನು ಇಳಿಸಿದನು. ಇದರಿಂದ ದೇಶದಲ್ಲಿ ಮತ್ತೆ ಸ್ವಾಸ್ಥ್ಯ–ಸುಖ–ಶಾಂತಿಗಳು ನೆಲೆಸಿದುವು. ನರಸಿಂಹನು ಪ್ರಜಾವರ್ಗದ ಧನ್ಯವಾದಗಳನ್ನು ಪಡೆದನು.

ಎಡೆಬಿಡದೆ ಯುದ್ಧದಲ್ಲಿ ತೊಡಗಿರಬೇಕಾದ ನರಸಿಂಹನಿಗೆ ಒಳ್ಳೆಯ ಕುದುರೆಗಳ ಅಗತ್ಯವು ಬಹಳವಾಗಿರುತ್ತಿತ್ತು. ಈತನು ಓರ್ಮುಜ, ಏಡನ ಮುಂತಾದ ಸೀಮೆಗಳಿಂದ ಪರಕೀಯ ವರ್ತಕರ ಮುಖಾಂತರವಾಗಿ ಕುದುರೆಗಳನ್ನು ತರಿಸಿ ಬೇಡಿದಷ್ಟು ಬೆಲೆಯನ್ನು ಕೊಟ್ಟು ಕೊಂಡುಕೊಳ್ಳುತ್ತಿದ್ದನು. ಇದರಿಂದ ಈತನ ಕಾಲದಲ್ಲಿ ಕುದುರೆಯ ವ್ಯಾಪಾರಕ್ಕೆ ಮಿತಿಮೀರಿ ಪ್ರೋತ್ಸಾಹವು ಉಂಟಾಯಿತು.

ನರಸಿಂಹನಿಗೆ ರಾಜ್ಯಸಂಪಾದನೆಯ ಕಾರ್ಯದಲ್ಲಿ ಹಲವು ಶೂರ ಸೇನಾಪತಿಗಳು ಅತಿಶಯವಾಗಿ ಸಹಾಯವಾದರು. ಅವರಲ್ಲಿ ಮಹಾಪ್ರಧಾನ ಅಣ್ಣಮರಸಯ್ಯನು, ಈಶ್ವರನಾಯಕನು ಮತ್ತು ಆತನ ಮಗ

ನಾದ ನರಸನಾಯಕನು, ಅರಪೇಟಿ ಬುಕ್ಕನು ಇವರು ಪ್ರಮುಖರಾಗಿದ್ದರು. ಇವರಲ್ಲಿ **ನರಸನಾಯಕನು** ಮುಂದೆ ಮುಂದೆ ಸಾಮ್ರಾಜ್ಯದ ಮುಖ್ಯಮಂತ್ರಿಯೂ ಪ್ರಮುಖ ಆಧಾರಸ್ತಂಭನೂ ಆದನು.

ನರಸಿಂಹನು ದಾನಧುರೀಣನಾಗಿದ್ದನು. ಸುವರ್ಣಮೇರು ಮೊದಲಾದ ಅನೇಕ ಮಹಾದಾನಗಳನ್ನು ಮಾಡಿದನು. ಕವಿ, ಪಂಡಿತ, ಇವರುಗಳನ್ನು ಪೋಷಿಸಿದನು. ಕಂಚಿ, ತಿರುಪತಿ, ಕಾಲಹಸ್ತಿ ಇವುಗಳಲ್ಲಿಯ ಗುಡಿಗಳು ಈತನು ನೀಡಿದ ರತ್ನಮಾಣಿಕಗಳಿಂದ ಸಿಂಗರಗೊಂಡುವು. 'ಸಾಳುವಾಭ್ಯುದಯಂ' ಕಾವ್ಯವನ್ನು ರಚಿಸಿದ ರಾಜನಾಥ ಡಿಂಡಿಮನು ನರಸಿಂಹನ ಆಸ್ಥಾನಕವಿಯಾಗಿದ್ದನು. ರಾಜನೀತಿ ವಿಶಾರದನಾದ ಪೀನವೀರಭದ್ರನು ತಾನು ಬರೆದ 'ಜೈಮಿನಿಭಾರತವು' ಎಂಬ ತೆಲುಗು ಕಾವ್ಯವನ್ನು ನರಸಿಂಹನಿಗೆ ಅರ್ಪಿಸಿರುವನು. ನರಸಿಂಹನು ಸ್ವತಃ ವಿದ್ಯಾವಂತನಾಗಿದ್ದನು. ರಾಮಾಭ್ಯುದಯಂ ಎಂಬ ಸಂಸ್ಕೃತ ಕಾವ್ಯವು ಈತನ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆದಿದೆ.

ಈತನ ಕಾಲದಲ್ಲಿ ರಾಮಾನುಜ ಮತಕ್ಕೆ ಆಸ್ಥಾನದಲ್ಲಿ ಅಗೌರವವು ಉಂಟಾಗಿ ಮಾಧ್ವಮತದ ಪ್ರಭಾವವು ಬೆಳೆಯಿತು. ಮುಳಬಾಗಲ್‌ಮಠದ ಯತಿಗಳಾದ ಶ್ರೀಪಾದರಾಯರೂ ಅವರ ಶಿಷ್ಯರಾದ ವ್ಯಾಸರಾಯರೂ ಇವರಲ್ಲಿ ರಾಯನಿಗೆ ಅಧಿಕವಾದ ಆದರವಿದ್ದಿತು. ಈ ಯತಿಗಳಿಬ್ಬರು ರಾಯನ ಧರ್ಮಸಂಕಟಗಳನ್ನು ನಿವಾರಣ ಮಾಡಿ ಆತನನ್ನು ರಕ್ಷಿಸಿದರು ಎಂದು ಐತಿಹ್ಯಗಳುಂಟು. ಮಾಧ್ವಮತದ ಈ ಅರಸುಮನ್ನಣೆಯು ಮುಂದಿನ ಮೂರು ನಾಲ್ಕು ಆಳಿಕೆಗಳಲ್ಲಿಯೂ ಮುಂದುವರಿಯಿತು.

ನರಸಿಂಹನು ಸಂಕಲ್ಪಿಸಿದ ಎಲ್ಲ ಮನೋರಥಗಳು ಬಹುಶಃ ಈಡೇರಿದುವು. ವಿಜಯನಗರಸಾಮ್ರಾಜ್ಯವು ಘನತೆಯನ್ನು ಪಡೆದಿತು. ಅದಕ್ಕೆ ಪೂರ್ವವೈಭವವು ಪ್ರಾಪ್ತವಾಯಿತು. ಆದರೂ ಆತನ ಒಂದೆರಡು ಆಕಾಂಕ್ಷೆಗಳು ಪೂರ್ಣವಾಗದೆ ಉಳಿದುವು. ತನ್ನಿಂದ ಪೂರ್ತಿಯಾಗದ ಈ ಕೊರತೆಗಳನ್ನು ಆತನು ತನ್ನ ಮೃತ್ಯುಪತ್ರದಲ್ಲಿ ಕಾಣಿಸಿ, ತನ್ನ

ಮುಂದಿನವರಾದರೂ ಅವುಗಳನ್ನು ಪೂರ್ತಿಗೊಳಿಸಬೇಕೆಂದು ವಿಧಿಸಿದನು. ಗೋವೆಯನ್ನು ಕಸಿವುದು ಆತನಿಂದ ಆಗಿರಲಿಲ್ಲ. ವಿಜಯನಗರಕ್ಕೆ ಎರವಾದ ರಾಯಚೂರು, ಉದಯಗಿರಿ, ಕೊಂಡವೀಡು ಕೋಟೆಗಳನ್ನು ಮತ್ತೆ ಪಡೆಯಬೇಕೆಂದು ಆತನು ಎಳಸಿದ್ದನು. ಪಶ್ಚಿಮಸಮುದ್ರ ಪ್ರಾಂತದಲ್ಲಿ ಬಾರಕೂರು ಮೊದಲಾದ ತುಳುನಾಡಿನಲ್ಲಿ ನರಸಿಂಹನ ಅಧಿಕಾರವು ಪೂರ್ಣವಾಗಿ ಸ್ಥಾಪನವಾಗಲಿಲ್ಲ.

**ಮೇದಿನೀ ಮೀಸರ ಗಂಡ,**[೫] **ಕಠಾರಿ ಸಾಳುವ, ಮೂವರು ರಾಯರ ಗಂಡಭೇರುಂಡ, ಚೌಹಟ್ಟಮಲ್ಲ, ಧರಣೀವರಾಹ** ಮುಂತಾದುವು ನರಸಿಂಹನ ಬಿರುದುಗಳಾಗಿದ್ದುವು. ರೂಪದಿಂದ ಚೆಲುವನಾಗಿದ್ದ ಈತನಿಗೆ **ಮೋಹನ ಮುರಾರಿ** ಎಂಬ ಬಿರುದು ಸಲ್ಲುವಂತಹದಾಗಿತ್ತು. ನರಸಿಂಹನ ಹೆಂಡತಿಯು ಶ್ರೀರಂಗಮಾಂಬೆಯು. ಇವರಿಗೆ ಇಬ್ಬರು ಮಕ್ಕಳು. ಒಬ್ಬನು ಅಪಮೃತ್ಯುವಿಗೆ ಗುರಿಯಾದನು.[೬] ಎರಡನೆಯವನು ಇಮ್ಮಡಿ ನರಸಿಂಹನು. ನರಸಿಂಹನು ೧೪೯೭ರಲ್ಲಿ ಮರಣಾಧೀನನಾದನು.

---

# ಇಮ್ಮಡಿ ನರಸಿಂಹ (೧೪೯೮-೧೫೦೬)

ತಂದೆಯ ತರುವಾಯ ಇಮ್ಮಡಿ ನರಸಿಂಹನು ಪಟ್ಟಕ್ಕೆ ಬಂದನು. ಈತನಿಗೆ ಭುಜಬಲರಾಯ, ತಮ್ಮರಾಯ, ಧರ್ಮರಾಯ ಎಂಬ ಬೇರೆ ಹೆಸರುಗಳೂ ಇದ್ದುವು. ನರಸಿಂಹನು ತಾನು ಇರುವಾಗಲೆ ಈತನಿಗೆ ಸಾಮ್ರಾಜ್ಯದ ಅಧಿಕಾರವನ್ನೂ ಸಾಮ್ರಾಜ್ಯದ ಬಿರುದುಗಳನ್ನೂ

---

೫ ಮೀಸರ=ಮೀಸೆಯುಳ್ಳ ಗಂಡಸರ.

೬ ಈತನ ವೃತ್ತಾಂತವು ನಿಶ್ಚಿತವಾಗಿ ತಿಳಿವುದಿಲ್ಲ. ನ್ಯೂನಿಝ-ಫೆರಿಸ್ತರು ಬೇರೆಬೇರೆಯಾಗಿ ಹೇಳುವರು.

ಕೊಟ್ಟು ತನಗೆ ಸಮಾನನಾದ ಅಧಿರಾಜನಾಗಿ ಮಾಡಿಕೊಂಡಿದ್ದನು (೧೪೯೩). ಅಂದಿನಿಂದ ಈತನ ಸಾಮ್ರಾಜ್ಯದ ದೊರೆತನವು ಮುಂದುವರಿಯಿತು.

## ನರಸನಾಯಕನ ಅಧಿಕಾರಾಕ್ರಮಣ

### (೧೪೯೯–೧೫೦೩)

ನರಸಿಂಹನು ಪಟ್ಟಕ್ಕೆ ಬಂದಾಗ ಇನ್ನೂ ಚಿಕ್ಕವನಾಗಿದ್ದನು. ಆದುದರಿಂದ ತಂದೆ ನರಸಿಂಹನು ಸಾಯುವಾಗ ಸಾಮ್ರಾಜ್ಯದ ಕಾರ್ಯಭಾರವನ್ನು ಮುಖ್ಯಸೇನಾಪತಿಯೂ ಮಹಾಪ್ರಧಾನಿಯೂ ಆದ ನರಸನಾಯಕನಿಗೆ ಒಪ್ಪಿಸಿದ ಮೇರೆಗೆ ಆತನು ರಾಜ್ಯದ ಸೂತ್ರಗಳನ್ನೆಲ್ಲ ತನ್ನ ಕೈಯಲ್ಲಿ ತೆಗೆದುಕೊಂಡು ಧುರಂಧರವಾಗಿ ಆಡಳಿತವನ್ನು ನಡೆಸಿದನು. ನರಸನಾಯಕನ ತಂದೆಯಾದ ಈಶ್ವರನಾಯಕನು ತಂದೆ ನರಸಿಂಹನ ಎಲ್ಲ ಸಾಹಸಕಾರ್ಯಗಳಲ್ಲಿ ಅತಿಶಯವಾಗಿ ಬೆಂಬಲವಾಗಿದ್ದನು. ಈಶ್ವರನಾಯಕನ ತರುವಾಯ ನರಸನಾಯಕನಾದರೂ ತಂದೆ ನರಸಿಂಹನ ಸಾಮ್ರಾಜ್ಯಕಾರ್ಯದಲ್ಲಿ ಬಹು ಸಹಾಯಕನಾದನು. ರಾಜ್ಯಕ್ರಾಂತಿಯಿಂದ ಸಾಮ್ರಾಜ್ಯವನ್ನು ಗಳಿಸಿದ ಸಾಳುವ ವಂಶದ ಆಳಿಕೆಯು ಸ್ಥಾಪಿತವಾಗಿದ್ದರೂ ಸುಸ್ಥಿರವಾಗಿರಲಿಲ್ಲ. ಇದಕ್ಕಾಗಿ ನರಸನಾಯಕನಂತಹ ಬಲಿಷ್ಠ ನಾಯಕನ ಆವಶ್ಯಕತೆಯು ಬಹಳವಾಗಿದ್ದಿತು. ಆದುದರಿಂದ ಸ್ವಾಭಾವಿಕವಾಗಿಯೇ ಸಾಮ್ರಾಜ್ಯದ ಅಧಿಕಾರವು ನರಸನಾಯಕನ ಕಡೆಗೆ ಒಲೆದಿತು.

ಇಂತು ರಾಜಪ್ರತಿನಿಧಿಯೂ ರಾಜ್ಯಚಾಲಕನೂ ಆದ ನರಸನು ಈ ಪರಿಸ್ಥಿತಿಯ ಲಾಭವನ್ನು ತೆಗೆದುಕೊಂಡು, ತನ್ನ ವರ್ಚಸ್ಸನ್ನು ಹೆಚ್ಚುಹೆಚ್ಚು ಬೆಳೆಸಿಕೊಳ್ಳಲಿಕ್ಕೆ ತನ್ನ ಅಧಿಕಾರದ ಉಪಯೋಗವನ್ನು ಮಾಡಿಕೊಂಡನು. ಈತನು ಮೊದಮೊದಲು ಅರಸು ನರಸಿಂಹನ ಹೆಸರಿನಿಂದ ಆಡಳಿತವನ್ನು ನಡೆಸುತ್ತ ಮುಂದೆ ಬರುಬರುತ್ತ ಆತನನ್ನು ಬದಿಗಿರಿಸಿ ತಾನೇ ಸರ್ವಾಧಿಕಾರಿಯಾಗಿ ರಾಜ್ಯವಾಳತೊಡಗಿದನು (೧೪೯೯). ಆದು

ದರಿಂದ ಇಮ್ಮಡಿ ನರಸಿಂಹನ ಆಳಿಕೆಯೆಂದರೆ ಹೆಚ್ಚುಕಡಿಮೆ ನರಸ ನಾಯಕನ ಆಳಿಕೆಯೆ ಎಂದು ಹೇಳಬಹುದು.

ಇಷ್ಟರಿಂದಲೆ ನರಸನಾಯಕನ ಮಹತ್ವಾಕಾಂಕ್ಷೆಯು ತೃಪ್ತವಾಗಲಿಲ್ಲ. ಅಧಿಕಾರಮದವು ಆತನನ್ನು ಇದಕ್ಕೂ ಮುಂದಿನ ಹೆಜ್ಜೆಗೆ ನೂಕಿತು. ತನ್ನ ಕೈಗೊಂಬೆಯಾದ ನಾಮಧಾರಿ ಅರಸನನ್ನು ತನ್ನ ಮಾರ್ಗದಿಂದ ದೂರಮಾಡಿ ತಾನೇ ಸಮ್ರಾಜನಾಗಬೇಕೆಂಬ ಹವ್ಯಾಸವು ಆತನನ್ನು ಆವರಿಸಿತು. ಚಿಕ್ಕವನಾದ ರಾಜನನ್ನು ಚೆನ್ನಾಗಿ ಸಂರಕ್ಷಿಸಬೇಕೆಂಬ ನೆಪವನ್ನು ಬೀರುತ್ತ, ಆತನ ಸುತ್ತಲು ಕಾವಲಿರಿಸಿ ಆತನನ್ನು ಪರ್ಯಾಯದಿಂದ ಪ್ರತಿಬಂಧದಲ್ಲಿರಿಸಿದನು. ಮುಂದೆ ಆತನನ್ನು ಪೆನುಗೊಂಡಕ್ಕೆ ಅಟ್ಟಿದನು. ಆತನು ಇಹಲೋಕವನ್ನು ಬಿಟ್ಟು ಹೋಗುವಂತೆಯೂ ಪ್ರಯತ್ನವಾಯಿತು ಎಂದು ತೋರುತ್ತದೆ. ಸುದೈವದಿಂದ ನರಸಿಂಹನು ಒದುಕಿಕೊಂಡು ಮುಂದೆ ಕೆಲವು ವರ್ಷ ಬಾಳಿದನು. ನರಸನಾಯಕನೇ ಆತನ ಪರವಾಗಿ ಆತನ ಕಣ್ಣಮುಂದೆ ತನ್ನ ಅವಧಿಯನ್ನು ಬೇಗನೆ ಮುಗಿಸಿಕೊಂಡು ಪರಲೋಕಕ್ಕೆ ಪ್ರಯಾಣಮಾಡಬೇಕಾಯಿತು.[೭]

ನರಸನಾಯಕನು ಯಶಸ್ವಿಯಾಗಿ ಸಾಮ್ರಾಜ್ಯವನ್ನು ಆಳಿದನು. ಈತನು ಕರ್ತೃತ್ವಶಾಲಿಯಾಗಿದ್ದನು ಎಂಬುದರಲ್ಲಿ ಸಂದೇಹವಿಲ್ಲ. ಈತನಿಂದ ಸಾಮ್ರಾಜ್ಯವು ವಿಸ್ತಾರಗೊಳ್ಳಲಿಲ್ಲವಾದರೂ ಈತನು ಸಾಮ್ರಾಜ್ಯದ ಸಾಮರ್ಥ್ಯವನ್ನು ಸಂರಕ್ಷಿಸಿ ಸಾಮ್ರಾಜ್ಯವನ್ನು ಸ್ಥಿರಗೊಳಿಸಲು ಹೆಣಗಿದನು. ವಿಜಯನಗರಕ್ಕೆ ಎರವಾದ ಗೋವೆ ಮೊದಲಾದ ಪ್ರದೇಶಗಳನ್ನು ಗೆದೆಯಲು ಪ್ರಯತ್ನಿಸಿದನು. ಈತನ ಅಧಿಕಾರವು ಲಂಕೆಯವರೆಗೆ ಹಬ್ಬಿತ್ತು. ಈತನು ದಕ್ಷಿಣಸಮುದ್ರಾಧಿಪತಿ ಎಂಬ ಬಿರುದನ್ನು ಧರಿಸಿದನು. ಈ ಮೇರೆಗೆ ೧೪೯೯ರಿಂದ ಸಾಮ್ರಾಜ್ಯದ ಸೂತ್ರಧಾರನಾಗಿ ಸಾಮ್ರಾಜ್ಯವನ್ನು ಆಳಿದ ನರಸನಾಯಕನು ೧೫೦೩

೭ ದೀ. ಟಿ. ೧೨.

ರಲ್ಲಿ ಕಾಲವಶನಾದನು. ಈತನ ಮರಣವಾದ ಬಳಿಕ ಇಮ್ಮಡಿ ನರಸಿಂಹ ನಿಗೆ ಕೆಲಮಟ್ಟಿಗೆ ಸ್ವತಂತ್ರತೆಯು ಪ್ರಾಪ್ತವಾಯಿತು. ಆತನು ಮುಂದೆ ಮೂರು ನಾಲ್ಕು ವರ್ಷ ಅರಸೊತ್ತಿಗೆಯನ್ನು ಉಪಭೋಗಿಸಿದನು.

ಈ ಆಳಿಕೆಯಲ್ಲಿ ಪೋರ್ತುಗೀಜರು ದಕ್ಷಿಣಭಾರತದ ದಂಡೆಯ ಮೇಲೆ ಮೊದಲು ಕಾಲಿಟ್ಟರು. ಇಲ್ಲಿಗೆ ಮೊದಲು ಬಂದ ಪೋರ್ತು ಗೀಜನು ವಾಸ್ಕೋಡ ಗಾಮಾ. ಈತನು ೧೪೯೮ರಲ್ಲಿ ಪಶ್ಚಿಮದಂಡೆಯ ಮೇಲಿನ ಕಾಲಿಕತ ಬಂದರಕ್ಕೆ ಬಂದು ವ್ಯಾಪಾರದ ಸಂಬಂಧಗಳನ್ನು ಬೆಳೆಸಲು ಯತ್ನಿಸಿದನು. ಐದಾರು ವರ್ಷಗಳ ವರೆಗೆ ಹೋರಾಡಿ ಕಾಲಿ ಕತದಲ್ಲಿ ಕಾರ್ಯಾಲಯವನ್ನು ಸ್ಥಾಪಿಸಿದನು (೧೫೦೩). ಬಳಿಕ ಅಲ್ಮೀ ಡನು ಪೋರ್ತುಗಾಲದ ಅರಸನಿಂದ ಹಿಂದುಸ್ತಾನದ ತೀರಪ್ರದೇಶದ ಅಧಿಕಾರಿಯಾಗಿ ನೇಮಿಸಲ್ಪಟ್ಟನು. ಈತನು ವಿಜಯನಗರಸಾಮ್ರಾಜ್ಯ ದೊಡನೆ ಹಿತಸಂಬಂಧವನ್ನು ಬೆಳೆಸಬೇಕೆಂದು ಬಗೆದು ನರಸಿಂಹರಾಯ ನಿಗೆ ಭಟಕಳದಲ್ಲಿ ಕಾರ್ಯಾಲಯವನ್ನು ಕಟ್ಟಿಕೊಳ್ಳಲಿಕ್ಕೆ ಅಪ್ಪಣೆಯನ್ನು ಕೇಳಿದನು (೧೫೦೫). ಇದೆ ವರ್ಷ ರಾಯನು ಬಹಮನಿಯವರಿಂದ ಗೋವೆಯನ್ನು ಕಸಿದುಕೊಳ್ಳಲು ದಂಡನ್ನು ಕಳುಹಿದನು. ಆದರೆ ಈ ಪ್ರಯತ್ನವು ಸಫಲವಾಗಲಿಲ್ಲ.

ರಾಜ್ಯಕ್ರಾಂತಿ–ಅಧಿಕಾರಾತಿಕ್ರಮಗಳ ಈ ಗಲಭೆಯಲ್ಲಿ ರಾಜ್ಯ-ಪ್ರಜೆಗಳಿಗೆ ಕೆಲಮಟ್ಟಿಗೆ ಅಪಾಯಗಳು ಸಂಭವಿಸದೆ ಇರಲಿಲ್ಲ. ಆಡಳಿತ ದಲ್ಲಿ ಕೆಲವೆಡೆ ಶಿಥಿಲತೆಯು ಉಂಟಾಯಿತು. ಇಂತಹ ಸಂಧಿಯನ್ನು ನೋಡಿಕೊಂಡು ಉಮ್ಮತ್ತೂರಿನ ಒಡೆಯನಾದ ವೀರನಂಜರಾಜನು[೮] ನೆರೆಹೊರೆಯ ಪ್ರದೇಶದಲ್ಲಿ ದಾಳಿಯಿಟ್ಟು ತನ್ನ ರಾಜ್ಯವನ್ನು ವಿಸ್ತಾರ ಗೊಳಿಸತೊಡಗಿದನು (೧೪೯೯). ದೇಶದಲ್ಲಿ ಎಡೆಬಿಡದೆ ಕಾದಾಟದ ಪ್ರಸಂಗಗಳು ನಡೆದುದರಿಂದ ಕೆಲವೆಡೆ (ದಕ್ಷಿಣ ಅರ್ಕಾಟ, ರಾಮನಾಡ ಜಿಲ್ಲೆಗಳು) ತೆರಿಗೆಗಳು ಭಾರವಾಗಿ ಅಧಿಕಾರಗಳ ಬಲುಮೆಯು ಅಸಹ್ಯ

೮. ಈತನ ರಾಜ್ಯವು ಮೈಸೂರು, ಕೊಯಿಮುತ್ತೂರು ಜಿಲ್ಲೆಗಳಲ್ಲಿ ಹಬ್ಬಿತ್ತು.

ವಾಯಿತು. ಆದರಿಂದ ಪ್ರಜಾಜನರಲ್ಲಿ ಅಸಂತೋಷವು ಉಂಟಾಯಿತು ಒಕ್ಕಲಿಗರು ಹೊಲಮನೆಗಳನ್ನು ತೊಲಗಿ ದೇಶಭ್ರಷ್ಟರಾದರು. ಆದಕ್ಕಾಗಿ ಆಗಾಗ ಸಾಮೋಪಾಯಗಳನ್ನು ಕೈಕೊಳ್ಳಬೇಕಾಯಿತು (೧೫೦೧; ೧೫೦೪).

ಧರ್ಮನಿಷ್ಠೆಯಲ್ಲಿಯೂ ವಿದ್ಯಾಪಕ್ಷಪಾತದಲ್ಲಿಯೂ ಇಮ್ಮಡಿ ನರಸಿಂಹನು ತಂದೆಯ ಪರಂಪರೆಯನ್ನು ಎತ್ತಿಹಿಡಿದನು. ಈತನು ವಿದ್ಯಾಸಂಪನ್ನರೂ ಸತ್ಪಾತ್ರರೂ ಆದ ಅನೇಕ ಪಂಡಿತರಿಗೆ ಹೇರಳವಾಗಿ ದಾನಗಳನ್ನು ನೀಡಿದನು. ಕಲಾವಿದರನ್ನು ಪ್ರೋತ್ಸಾಹಿಸಿದನು.

ಇಟಾಲಿಯನ್ ಪ್ರವಾಸಿಯಾದ ವರ್ಥೆಮನು ಈ ಕಾಲದ ವಿಜಯನಗರವನ್ನು ಕಂಡು ಹೀಗೆ ಬಣ್ಣಿಸಿರುವನು (೧೫೦೫):

"ವಿಜಯನಗರವು ಅತಿ ವಿಸ್ತಾರವೂ, ಸುರಕ್ಷಿತವೂ ಆದ ಪಟ್ಟಣವು. ಈ ನಗರಿಯು ಸಮೃದ್ಧವೂ ಸಕಲಸಾಧನಗಳಿಂದ ಪರಿಪೂರ್ಣವೂ ಆಗಿದೆ. ಇದು ಬಹು ರಮಣೀಯವಾದ ಪ್ರದೇಶದಲ್ಲಿ ನೆಲೆಸಿದೆ. ಇದರ ವಾಯುಗುಣವು ಉತ್ಕೃಷ್ಟವಾಗಿದೆ. ಇಲ್ಲಿಯ ಅರಸನ ಬಳಿಯಲ್ಲಿ ಯಾವಾಗಲೂ ೪೦,೦೦೦ ಕುದುರೆಯಾಳುಗಳೂ ೪೦೦ ಆನೆಗಳೂ ಇರುವುವು. ಆನೆಯ ಮೇಲೆ ಆರು ಜನರು ಕುಳ್ಳಿರಬಲ್ಲರು. ಯುದ್ಧದಲ್ಲಿ ಆನೆಯ ಸೊಂಡೆಗೆ ಉದ್ದವಾದ ಕತ್ತಿಗಳನ್ನು ಕಟ್ಟುವರು.

"....ರಾಜನು ಎರಡು ಗೇಣು ಉದ್ದವಾದ ಚಿನ್ನದ ಜರತಾರಿಯ ಟೊಪ್ಪಿಗೆಯನ್ನು ಧರಿಸುವನು. ಆತನ ಕುದುರೆಯು ಆಭರಣಗಳಿಂದ ಅಲಂಕೃತವಾಗಿದ್ದು, ಅದರ ಬೆಲೆಯು ನಮ್ಮಲ್ಲಿಯ ಎಷ್ಟೋ ಪಟ್ಟಣಗಳನ್ನು ಮಿಕ್ಕಬಹುದು."

ಇಮ್ಮಡಿ ನರಸಿಂಹನಿಗೆ ನರಸಿಂಹರಾಜ, ದೇವಪ್ಪರೆಂಬ ಇಬ್ಬರು ಮಕ್ಕಳು ಇದ್ದರು. ಇಮ್ಮಡಿ ನರಸಿಂಹನು ೧೫೦೬ರಲ್ಲಿ ಮರಣಹೊಂದಿದನು. ಈತನ ತರುವಾಯ ನರಸನಾಯಕನ ಮಗನಾದ ವೀರನರಸಿಂಹನು ಸಿಂಹಾಸನವನ್ನು ಸೆಳೆದುಕೊಂಡು ಆಳತೊಡಗಿದುದರಿಂದ ಸಾಳುವ ಮನೆತನದ ಆಳಿಕೆಯು ಇಲ್ಲಿಗೆ ಕೊನೆಗಂಡಿತು.

ಸಾಳುವರ ಈ ಆಳಿಕೆಯಲ್ಲಿ ಕನ್ನಡಸಾಹಿತ್ಯಪ್ರಪಂಚವು ಮುಂದು ವರಿಯಿತು. ವೀರಶೈವ ಕವಿಗಳಾದ ಚತುರ್ಮುಖ ಬೊಮ್ಮರಸ ಮತ್ತು ಸಿಂಗಿರಾಜ ಇವರು ರೇವಣಸಿದ್ಧೇಶ್ವರಪುರಾಣ ಮತ್ತು ಮಲಬಸವರಾಜ ಚಾರಿತ್ರ ಇವುಗಳನ್ನು ಬರೆದರು. ನಿಜಗುಣಶಿವಯೋಗಿಗಳು ಅನುಭವ ಸಾರ, ವಿವೇಕಚಿಂತಾಮಣಿ ಮೊದಲಾದ ಗ್ರಂಥಗಳನ್ನು ರಚಿಸಿದರು. ಬ್ರಾಹ್ಮಣಕವಿಯಾದ ಕುಮಾರ ವಾಲ್ಮೀಕಿಯು ತೊರವೆ ರಾಮಾಯಣ ವನ್ನು ಬರೆದನು. ಮಾಧ್ವಯತಿಗಳಾದ ಶ್ರೀಪಾದರಾಯರು ಕೀರ್ತನೆಗಳನ್ನು ರಚಿಸಿದರು. ಜೈನಕವಿಯಾದ ಕೋಟೀಶ್ವರನು ಜೀವಂಧರಷಟ್ಪದಿಯನ್ನು ಬರೆದನು.

ಸಂಗಮರನ್ನು ಬದಿಗೆ ಸರಿಸಿ ವಿಜಯನಗರಸಾಮ್ರಾಜ್ಯವನ್ನು ಸಂಪಾ ದಿಸಿದ ಸಾಳುವ ಮನೆತನವು ಹೀಗೆ ಸುಮಾರು ಇಪ್ಪತ್ತೊಂದು ವರ್ಷ ರಾಜ್ಯವಾಳಿತು. ಅದರಲ್ಲಿಯೂ ಐದಾರು ವರ್ಷಗಳ ವರೆಗೆ ನರಸನಾಯ ಕನೇ ಪ್ರತ್ಯಕ್ಷವಾಗಿ ರಾಜ್ಯಸೂತ್ರಗಳನ್ನು ನಡೆಸಿದನು ಅಂತೂ ಸಾಳುವ ಮನೆತನದ ಆಳಿಕೆಯು ಅಲ್ಪಕಾಲಿಕವಾದರೂ ಒಟ್ಟಿನಮೇಲೆ ವಿಜಯನಗರಸಾಮ್ರಾಜ್ಯಕ್ಕೆ ಉಪಕಾರಕವಾಯಿತು. ಅರಾಜಕದ ಬಿರು ಗಾಳಿಗೆ ಸಿಲುಕಿದ ವಿಜಯನಗರಸಾಮ್ರಾಜ್ಯನೌಕೆಯು ವಿನಾಶದ ಬಂಡೆಗಲ್ಲೆಡೆಗೆ ಭರದಿಂದ ಸಾಗಿತ್ತು. ಸಾಳುವ ನರಸಿಂಹನಂತಹ ಕರ್ಣ ಧಾರನು ಒದಗದಿದ್ದರೆ, ಅದು ಒಡೆದು ಚೂರುಚೂರಾಗಬಹುದಾಗಿತ್ತು. ಘೋರವಾದ ಈ ಗಂಡಾಂತರದಿಂದ ವಿಜಯನಗರಸಾಮ್ರಾಜ್ಯವನ್ನು ಉಳುಹಿದ ಶ್ರೇಯಸ್ಸು ನರಸಿಂಹನಿಗೂ ಆತನಿಂದ ಈ ಸಾಳುವ ವಂಶಕ್ಕೂ ಸಲ್ಲುವುದು.

---

# ತುಳು ಮನೆತನದ ಆಳಿಕೆ

# (೧೫೦೬-೧೫೭೦)

## ಹನ್ನೊಂದನೆಯ ವಿಲಾಸ

## ೧. ನರಸನಾಯಕನ ಸಾಮ್ರಾಜ್ಯಾಕ್ರಮಣ

## (೧೪೯೮-೧೫೦೩)

ಜಾರಿದ ಕಾಲು ಊರಿ ನಿಲ್ಲುವುದು ಹಗುರಲ್ಲ. ಸಂಗಮರ ಕೊನೆಯ ಆಳಿಕೆಯಲ್ಲಿ ಅಸ್ತವ್ಯಸ್ತವಾದ ಸಾಮ್ರಾಜ್ಯವು ಸಾಳುವ ರಾಜ್ಯಕ್ರಾಂತಿಯಿಂದ ಸರಿಪಡಿಸಿಕೊಂಡು ನಿಂತರೂ ಅದಕ್ಕೆ ಪೂರ್ಣವಾಗಿ ಸ್ಥೈರ್ಯವು ಬರಲಿಲ್ಲ. ತಂದೆಯಂತೆ ಇಮ್ಮಡಿ ಸಾಳುವ ನರಸಿಂಹನು ಪರಾಕ್ರಮಶಾಲಿಯೂ ದೂರದರ್ಶಿಯೂ ಆಗಿದ್ದರೆ ಅದು ಬರಬಹುದಾಗಿತ್ತೇನೊ? ಅದೇನೆ ಇರಲಿ. ಸಾಳುವ ರಾಜ್ಯಕ್ರಾಂತಿಯು ಎಷ್ಟೆ ಸಮರ್ಥನೀಯವಾಗಿದ್ದರೂ ಅದರಲ್ಲಿ ಅಂತರ್ಭೂತವಾಗಿರುವ ದುರ್ನಯದ ಬೀಜವು ಸಾಮ್ರಾಜ್ಯಕ್ಕೆ ಅಪಾಯಕರವಾಗದೆ ಇರಲಿಲ್ಲ. ಸಾಳುವ ನರಸಿಂಹನು ಸಾಮ್ರಾಜ್ಯಕ್ಕೆ ಮಾಡಿದ ಉಪಕಾರವು ಶ್ಲಾಘನೀಯವಾಗಿದ್ದರೂ ಆತನ ಉದಾಹರಣೆಯು ಅನುಕರಣೀಯವಾಗಿರಲಿಲ್ಲ. ಸಾಮ್ರಾಜ್ಯದ ಒಡೆಯನಲ್ಲಿ ದೌರ್ಬಲ್ಯವೂ ಅಪಾತ್ರತೆಯೂ ಕಂಡು ಬಂದರೆ ಅವನನ್ನು ಆಚೆಗೆ ನೂಕಿ ಸೇವಕನಾದವನು ಸ್ವಾಮಿತ್ವವನ್ನು ಸಂಪಾದಿಸಬಹುದು ಎಂಬ ಈ ನ್ಯಾಯೋಕ್ತಿಯು ಮಹತ್ವಾಕಾಂಕ್ಷಿಗಳಿಗೆ ಸ್ಫೂರ್ತಿಯನ್ನೀಯುವ ಆದರ್ಶನೀತಿಯಾಗಿ ಪರಿಣಮಿಸಿತು.

ಈ ನೀತಿಯ ಪ್ರಯೋಗವು ಅತ್ಯಲ್ಪಕಾಲದಲ್ಲಿಯೇ ಅನುಭವಕ್ಕೆ ಬಂದಿತು. ಇಮ್ಮಡಿ ನರಸಿಂಹನ ಆಳಿಕೆಯಲ್ಲಿ ನರಸನಾಯಕನು ಈ

ನೀತಿಯನ್ನು ಆಚರಿಸಲು ಹೆಣಗಿದನು. ಪ್ರತ್ಯಕ್ಷ ವ್ಯವಹಾರದಲ್ಲಿ ಸಾಮ್ರಾಜ್ಯದ ಸರ್ವಸೂತ್ರಧಾರನು ಆತನೆ ಆಗಿದ್ದರೂ ಪಟ್ಟದ ಅರಸನನ್ನು ಪದಭ್ರಷ್ಟಮಾಡಿ ನ್ಯಾಯವಾಗಿ ತಾನೆ ಸಿಂಹಾಸನಾಧಿಪತಿಯಾಗುವ ಧೈರ್ಯವು ಮಾತ್ರ ಆತನಿಗೆ ಸಾಲಲಿಲ್ಲ. ತಂದೆ ಮಾಡದುದನ್ನು ಮಗನು ಮಾಡಿದನು. ನರಸನಾಯಕನ ಮಗನಾದ ವೀರನರಸಿಂಹನು, ಇಮ್ಮಡಿ ನರಸಿಂಹನು ಮಡಿದ ಕೂಡಲೆ (೧೫೦೬) ಪಟ್ಟವನ್ನು ಪೂರ್ಣವಾಗಿ ಸೆಳೆದುಕೊಂಡು ವಿಜಯನಗರದ ಸಮ್ರಾಜನಾಗಿ ಆಳತೊಡಗಿದನು. ಈತನು ತುಳು ಮನೆತನದವನಾದುದರಿಂದ ಅಂದಿನಿಂದ ತುಳು ಮನೆತನದ ಅರಸೊತ್ತಿಗೆಯು ಮೊದಲಾಯಿತು. ವಿಜಯನಗರಸಾಮ್ರಾಜ್ಯಪ್ರಪಂಚದಲ್ಲಿ ಹೀಗೆ ಹೊಸತಾಗಿ ತಲೆಯೆತ್ತಿದ ಈ ತುಳು ಮನೆತನದ ಪೂರ್ವವೃತ್ತವನ್ನು ಸಂಕ್ಷೇಪವಾಗಿ ಅವಲೋಕಿಸಿ ಆದರ ಮುಂದಿನ ಚರಿತ್ರೆಗೆ ಸಾಗುವ.

ಸಾಳುವ ಮನೆತನದಷ್ಟು ಪ್ರಾಚೀನತೆಯಾಗಲಿ ಪೂರ್ವಪ್ರಸಿದ್ಧಿಯಾಗಲಿ ಈ ತುಳು ಮನೆತನಕ್ಕೆ ಇದ್ದಂತೆ ತೋರುವುದಿಲ್ಲ. ತಾವು ಯಾದವ ಕುಲದವರು ಎಂದು ಇವರು ಮುಂದೆ ಹೇಳಿಕೊಂಡಿರುವರು. ಈ ಮನೆತನದ ಹೆಸರನ್ನು ಮೊದಲು ಮುಂದು ತಂದವನು ಸಾಳುವ ನರಸಿಂಹನ ಕಡುಗಲಿ ದಂಡನಾಯಕನಾದ ಈಶ್ವರನಾಯಕನು. ಈಶ್ವರನ ತಂದೆಯಾದ ತಿಮ್ಮನಾಯಕನೆ ಈ ಮನೆತನದ ಮೂಲಪುರುಷನು. ಈಶ್ವರನ ಮಗನು ನರಸನಾಯಕನು.

ಈತನು ತಂದೆಗಿಂತ ಹೆಚ್ಚು ಪರಾಕ್ರಮಶಾಲಿಯೂ ರಾಜನೀತಿ ವಿಶಾರದನೂ ಆಗಿದ್ದನು. ಈತನು ಬಾಲ್ಯದಿಂದಲೂ ತಂದೆಗೆ ಜೊತೆಯಾಗಿ ಸಾಳುವ ನರಸಿಂಹನ ಅನೇಕ ಸಂಗ್ರಾಮಕಾರ್ಯಗಳಲ್ಲಿ ನೆರವಾದನು. ಬಳಿಕ ಧುರಂಧರನಾಗಿ, ಸಾಮ್ರಾಜ್ಯದ ಮುಖ್ಯ ಸೇನಾಧಿಪತಿಯ ಅಧಿಕಾರವನ್ನು ಪಡೆದು, ಸಾಳುವ ನರಸಿಂಹನ ಹಾಗೂ ಆತನ ಮಗನ ಆಳಿಕೆಗಳಲ್ಲಿ ಸ್ವತಂತ್ರವಾಗಿ ದಂಡಯಾತ್ರೆಗಳನ್ನು ಕೈಕೊಂಡು ಅನೇಕ ವಿಜಯಗಳನ್ನು ಸಂಪಾದಿಸಿದನು. ಈತನ ದಿಗ್ವಿಜಯಗಳು

ಕವಿಗಳ ವರ್ಣನೆಯ ವಿಷಯಗಳಾಗಿವೆ ಈತನು ವಿಜಾಪುರದ ಮತ್ತು ಓರಿಸದ ಅರಸರನ್ನು ಹಿಮ್ಮೆಟ್ಟಿಸಿದನು; ದಕ್ಷಿಣದಲ್ಲಿ ಚೋಳ ದೇಶದಲ್ಲಿ ದಂಡಯಾತ್ರೆಮಾಡಿ ತಂಜಾವೂರನ್ನು ಗೆದ್ದನು; ಮದುರೆಯನ್ನು ಕಿತ್ತು ಕೊಂಡನು; ರಾಮೇಶ್ವರದ ಮೇಲಿಂದ ಲಂಕೆಯವರೆಗೆ ನೂಕಿದನು; ಶ್ರೀರಂಗಪಟ್ಟಣವನ್ನು ಕಸಿದನು; ಮುಹಮ್ಮದೀಯರಿಗೆ ಕೈಸೆರೆಯಾಗಿದ್ದ ಮಾನವದುರ್ಗವನ್ನು (ಮಾನವಿ, ನಿಜಾಮರಾಜ್ಯದ ರಾಯಚೂರು ಜಿಲ್ಲೆ) ಸೆಳೆದುಕೊಂಡನು.

ನರಸನಾಯಕನು ಶಕ್ತಿವಂತನಾಗಿದ್ದನು. ಈತನ ಆಳಿಕೆಯು ಪ್ರಭಾವಶಾಲಿಯಾಯಿತು.[೧] ಈತನು ತನ್ನ ಪ್ರತಾಪದಿಂದ ಸಾಮ್ರಾಜ್ಯದ ಹೊರಹಗೆಗಳನ್ನು ಬಡಿದಟ್ಟಿದನು; ಒಳಹಗೆಗಳ ಸದ್ದನ್ನು ಅಡಗಿಸಿದನು. ಈತನ ನೆರವಿನಿಂದ ಸಾಳುವರ ಆಳಿಕೆಯಲ್ಲಿ ಸಾಮ್ರಾಜ್ಯವು ಕೆಲ ಕಾಲ ಶಕ್ತಿ-ಸ್ವಾಸ್ಥ್ಯ-ಗೌರವಗಳನ್ನು ಪಡೆಯಿತು. ಮುಂದೆ ಈತನಲ್ಲಿ ಸೇರಿದ್ದ ರಾಜ್ಯತೃಷ್ಣೆಯೊಂದು ತಲೆಯೆತ್ತದೆ ಇದ್ದರೆ, ಈತನಿಂದ ಸಾಮ್ರಾಜ್ಯಕ್ಕೆ ಹೆಚ್ಚಿನ ಲಾಭವು ಆಗಬಹುದಾಗಿತ್ತು. ನರಸನಾಯಕನು ದಾನ ಶೀಲನೂ ವಿದ್ಯಾಪ್ರೇಮಿಯೂ ಆಗಿದ್ದನು. ಈತನು ವಿದ್ಯೆಯನ್ನೂ ವಿದ್ಯಾವಂತರನ್ನೂ ಪ್ರೋತ್ಸಾಹಿಸಿದನು. ನಂದಿ ಮಲ್ಲಯ್ಯ, ಘಂಟ ಸಿಂಗಯ್ಯ ಎಂಬ ತೆಲುಗು ಕವಿಗಳು 'ವರಾಹಪುರಾಣಮು' ಎಂಬ ತಮ್ಮ ಕೃತಿಯನ್ನು ಈತನಿಗೆ ಅರ್ಪಿಸಿರುವರು.*

ನರಸನಾಯಕನಿಗೆ ನರಸಣ್ಣನೆಂದೂ ನರಸಒಡೆಯನೆಂದೂ ಕರೆಯುತ್ತಿದ್ದರು. **ಗಜಪತಿರಾಯೇಭಗಂಡಭೇರುಂಡ, ದುಷ್ಟ ರಾಜ್ಞ್ಮೃಗಶಾರ್ದೂಲ** ಮುಂತಾದುವು ಈತನ ಬಿರುದುಗಳಾಗಿದ್ದುವು. ಈತನಿಗೆ ಮೂವರು ಹೆಂಡಂದಿರು. ತಿಪ್ಪಾಂಬಿಕೆಯಲ್ಲಿ ವೀರ ನರಸಿಂಹನು, ನಾಗಲಾದೇವಿಯಲ್ಲಿ ಕೃಷ್ಣದೇವರಾಯನು, ಓಬಾಂಬಿಕೆಯಲ್ಲಿ ಅಚ್ಯುತರಾಯ-ರಂಗರಾಯರು, ಹೀಗೆ ನಾಲ್ವರು ಮಕ್ಕಳು

---

೧ ಈತನ ಚರಿತ್ರೆಯ ಕೆಲವು ವಿವರಗಳನ್ನು ಹಿಂದಿನ 'ವಿಲಾಸ'ದಲ್ಲಿ ನೋಡಬಹುದು.

ಜನಿಸಿದರು. ಸರಸನಾಯಕನು ಮರಣಹೊಂದಲು (೧೫೦೩), ವೀರ ನರಸಿಂಹನು ಆತನ ಸ್ಥಳವನ್ನು ಹಿಡಿದುಕೊಂಡನು.

---

## ೨. ವೀರನರಸಿಂಹ

## ೧೫೦೬ (ಆಕ್ರಮಣ ವರ್ಷ ೧೫೦೩)—೧೫೦೯

ತಂದೆಯ ತರುವಾಯ ತಂದೆಯ ಸ್ಥಾನವನ್ನು ಹಿಡಿದುಕೊಂಡವನಾದರೂ ವೀರನರಸಿಂಹನಿಗೆ ತಂದೆಯ ಸಾಮರ್ಥ್ಯವಾಗಲಿ, ಅಧಿಕಾರವಾಗಲಿ, ಗೌರವವಾಗಲಿ ಪ್ರಾಪ್ತವಾಗಲಿಲ್ಲ. ಆಗ ಸಿಂಹಾಸನಾಧಿಕಾರಿಯಾದ ಸಾಳುವ ಇಮ್ಮಡಿ ನರಸಿಂಹನು ಇನ್ನೂ ಜೀವಿಸಿದ್ದನು. ಆತನು ಕಿರಿಯನಾದ ಈ ವೀರನರಸಿಂಹನ ಪ್ರತಿಷ್ಠೆಗೆ ಹೆಚ್ಚು ಆಸ್ಪದವನ್ನು ಕೊಡದೆ ಸ್ವತಂತ್ರದಿಂದ ರಾಜ್ಯಭಾರವನ್ನು ನಡೆಸಿದನು. ಇಮ್ಮಡಿ ನರಸಿಂಹನು ಮುಂದೆ ಸ್ವಲ್ಪದಿವಸಗಳಲ್ಲಿಯೇ ಮೃತನಾದನು (೧೫೦೬). ಆತನ ಮಕ್ಕಳು ಪ್ರೌಢರೂ ಬಲಿಷ್ಠರೂ ಆಗಿರಲಿಲ್ಲ. ಇದನ್ನರಿತು ಮೊದಲಿನಿಂದ ಹೊಂಚುಹಾಕಿಕೊಂಡಿದ್ದ ವೀರನರಸಿಂಹನು ಸಿಂಹಾಸನವನ್ನು ಕಿತ್ತುಕೊಂಡು ಭುಜಬಲರಾಯನೆಂಬ ಬಿರುದನ್ನು ಧರಿಸಿ ಸಾಮ್ರಾಜ್ಯದ ಅಧಿಪತಿಯಾಗಿ ರಾಜ್ಯವಾಳಲಿಕ್ಕೆ ಪ್ರಾರಂಭಿಸಿದನು.

ಈ ಅತಿಕ್ರಮವು ಜನತೆಗೆ ಸಮ್ಮತವಾಗಲಿಲ್ಲ. ದೇಶದಲ್ಲಿ ಅಸಂತೋಷದ ತೆರೆಗಳು ಎದ್ದುವು ಎಷ್ಟಾದರೂ ಸಾಳುವರ ಆಳಿಕೆಯು ಜನೋಪಕಾರಕವಾಗಿದ್ದಿತು. ಇಮ್ಮಡಿ ನರಸಿಂಹನು ತನ್ನ ಶಾಂತವೂ ಉದಾರವೂ ಆದ ಸ್ವಭಾವದಿಂದಲೂ ಪ್ರಜಾಹಿತಬುದ್ಧಿಯಿಂದಲೂ ಲೋಕಪ್ರಿಯನಾಗಿದ್ದನು. ಇಂತಹ ರಾಜವಂಶವನ್ನು ಸಾಹಸಿಯೂ ತಂತ್ರಗಾರನೂ ಆದ ವೀರನರಸಿಂಹನು ನೆವವಿಲ್ಲದೆ ಮೂಲೆಗುಂಪುಮಾಡಿದುದು ಜನರಿಗೆ ರುಚಿಸಲಿಲ್ಲ. ಅಲ್ಪಕಾಲದಲ್ಲಿಯೆ ರಾಷ್ಟ್ರದಲ್ಲಿ ಅಶಾಂತಿ,

ಅಸಿದ್ಧೇಯುತೆ,ಕ್ಷೋಭೆ ಇವುಗಳ ಬೇಗೆಯು ಎದ್ದಿತು. ಮಂಡಲೇಶ್ವರರೂ ಪ್ರಾಂತಾಧಿಕಾರಿಗಳೂ ವಿರೋಧವೃತ್ತಿಯನ್ನು ತಾಳಿ ಅಲ್ಲಲ್ಲಿ ಪುಂಡಾಟಿಕೆಯನ್ನು ಹೂಡಿದರು. ಕಾದುಕೊಂಡು ಕುಳಿತಿದ್ದ ಓರಿಸದ ಅರಸನು ವಿಜಯನಗರರಾಜ್ಯದಲ್ಲಿ ಹೊಕ್ಕು ಕೊಂಡವೀಡು, ಉದಯಗಿರಿ ಕೋಟೆಗಳನ್ನು ಕೊಸರಿಕೊಂಡನು. ಒಳಗಡೆಯ ಅಶಾಂತಿಯನ್ನು ನಂದಿಸಿ ಮಾಂಡಲಿಕರ, ಸಾಮಂತರ ಈ ಔದ್ಧತ್ಯವನ್ನು ತಗ್ಗಿಸುವುದರಲ್ಲಿ ವೀರ ನರಸಿಂಹನಿಗೆ ಸಾಕುಸಾಕಾಯಿತು. ಆತನ ಬಲವೆಲ್ಲವು ವೆಚ್ಚವಾಯಿತು, ಬೊಕ್ಕಸವು ಬರಿದಾಯಿತು. ಆದರೂ ಅಸಂತೋಷಾಗ್ನಿಯು ಪೂರ್ಣವಾಗಿ ಆರಲಿಲ್ಲ.

ಈ ರೀತಿಯಾಗಿ ವೀರನರಸಿಂಹನ ಅಲ್ಪಕಾಲಿಕವಾದ ಆಳಿಕೆಯು ಗಲಭೆಯಲ್ಲಿಯೆ ಕಳೆದು ಹೋಯಿತು. ಈತನ ಆಡಳಿತವು ಬಲಹೀನವೂ ಅಯಶಸ್ವಿಯೂ ಆಗಿ ಪರಿಣಮಿಸಿ ಈತನು ಪ್ರಜಾಜನರಿಗೆ ಅಪ್ರಿಯನಾದನು. ಪ್ರಜಾದ್ರೋಹದ ಈ ತನ್ನ ಪಾತಕದ ಪರಿಮಾರ್ಜನೆಗಾಗಿಯೇ ಏನೋ, ಈತನು ಕಂಚಿ, ಕಾಲಹಸ್ತಿ, ವೆಂಕಟಾದ್ರಿ, ಅಹೋಬಲ, ಶ್ರೀರಂಗಂ ಮೊದಲಾದ ಹಲವು ಪುಣ್ಯಸ್ಥಳಗಳಲ್ಲಿ ದಾನಾದಿ ಅನೇಕ ಧರ್ಮಕಾರ್ಯಗಳನ್ನು ಮಾಡಿದನು.

ಆದರೂ ಈತನ ಹೃದಯವು ಪರಿಶುದ್ಧವಾಗಲಿಲ್ಲ. ಈತನಿಗೆ ಎಂಟು ವರ್ಷದ ಒಬ್ಬ ಮಗನಿದ್ದನು. ಈತನ ತಮ್ಮನಾದ ಕೃಷ್ಣದೇವರಾಯನು ಪ್ರಬುದ್ಧನೂ ರಾಜಕಾರ್ಯಕುಶಲನೂ ಆಗಿದ್ದು ಈತನ ಆಡಳಿತದಲ್ಲಿ ಆಗಾಗ ನೆರವಾಗುತ್ತಿದ್ದನು. ವೀರನರಸಿಂಹನಿಗೆ ಮರಣಕಾಲವು ಸಮೀಪಿಸಿತು. ತನ್ನ ತರುವಾಯ ತನ್ನ ಮಗುವಿಗೆ ಪಟ್ಟವು ದೊರೆಯದೆ, ಹಿರಿಯನೂ ಸಮರ್ಥನೂ ಆದ ಕೃಷ್ಣದೇವರಾಯನಿಗೆ ದೊರೆವುದು ಎಂಬ ಭಯವು ಈತನನ್ನು ಆವರಿಸಿತು. ಕೃಷ್ಣದೇವರಾಯನನ್ನು ಮಾರ್ಗದಿಂದ ದೂರಮಾಡಿ ತನ್ನ ಮಗುವಿಗೆ ಪಟ್ಟವು ಸ್ಥಿರವಾಗುವಂತೆ ಈತನು ಒಂದು ದುರಾಲೋಚನೆಯನ್ನು ಹೂಡಿದನು. ಮಂತ್ರಿಯಾದ ಸಾಳುವ ತಿಮ್ಮನನ್ನು ಕರೆಸಿ, ತನ್ನ ಹಿಂದೆ ತನ್ನ ಮಗುವಿಗೆ ಪಟ್ಟವನ್ನು

ಕೊಡಿಸಬೇಕೆಂದು ವಿಧಿಸಿ, ಕೃಷ್ಣದೇವರಾಯನ ಕಣ್ಣುಗಳನ್ನು ಕಿತ್ತು ತಂದು ತನಗೆ ತೋರಿಸಲು ಆಜ್ಞಾಪಿಸಿದನು.

ವಿವೇಕಿಯಾದ ಸಾಳುವ ತಿಮ್ಮನು ಕೃಷ್ಣದೇವರಾಯನನ್ನು ಏಕಾಂತದಲ್ಲಿ ಕರೆದೊಯ್ದು ನರಸಿಂಹನ ಕುತಂತ್ರವನ್ನು ಅರುಹಿದನು. ಅದಕ್ಕೆ ಕೃಷ್ಣದೇವರಾಯನು ಹೀಗೆ ಹೇಳಿದನು: "ಹೀಗೆ ಮಾಡಬೇಡಿ; ಇದು ವರೆಗೆ ನಾನು ಯಾವ ಅಪರಾಧವನ್ನೂ ಮಾಡಿಲ್ಲ; ಯಾರ ದ್ರೋಹವನ್ನೂ ಬಗೆದಿಲ್ಲ. ನನಗೆ ರಾಜ್ಯದ ಅಭಿಲಾಷೆಯೂ ಇಲ್ಲ. ನಾನು ಅರಮನೆಯನ್ನು ಬಿಟ್ಟುಹೋಗುವೆನು. ಯೋಗಿಯಾಗಿ ಲೋಕವನ್ನು ಸಂಚರಿಸುವೆನು." ಸಾಳುವ ತಿಮ್ಮನು ಕೃಷ್ಣದೇವ ರಾಯನ ನಿಜವಾದ ಯೋಗ್ಯತೆಯನ್ನು ಚೆನ್ನಾಗಿ ಅರಿತಿದ್ದನು ಈತನೇ ರಾಜ್ಯಕ್ಕೆ ಅರ್ಹನಾಗಿರುವನು ಎಂದು ಆತನು ನಿರ್ಧರಿಸಿ ವೀರನರ ಸಿಂಹನಿಗೆ ಆಡಿನ ಕಣ್ಣುಗಳನ್ನು ಕಿತ್ತು ತಂದು ತೋರಿಸಿದನು. ಅಧಮ ವಾದ ಈ ಕೃತ್ಯದಿಂದ ನರಸಿಂಹನ ಅಪ್ರಿಯತೆಯ ಕೊಡವು ಇನ್ನಿಷ್ಟು ತುಂಬಿತು. ಮುಂದೆ ಬೇಗನೆ ಈತನು ಕಾಲವಶನಾದನು (೧೫೦೯).

———

## ಹನ್ನೆರಡನೆಯ ವಿಲಾಸ

# ೩. ಮಹಾರಾಜ ಶ್ರೀಕೃಷ್ಣದೇವರಾಯ

## (೧೫೦೯-೩೦)

## ೧

## ಕಲಿಂಗ ದಂಡಯಾತ್ರೆ

ವಿಜಯನಗರಸಾಮ್ರಾಜ್ಯಲಕ್ಷ್ಮಿಯ ವಿಲಾಸಗಳನ್ನು ಆಲಿಸುತ್ತಿರುವ ನಮ್ಮ ದೃಷ್ಟಿಯನ್ನು ಈಗ ಆಕೆಯ ಮುಕುಟದೊಳಗಿನ ಅತಿ ದೇದೀಪ್ಯಮಾನವಾದ ಒಂದು ದಿವ್ಯಮಣಿಯು ಎಳೆದುಕೊಳ್ಳುವುದು. ಈ ಮಹಾನ್ ರಾಜವಿಭೂತಿಯ ಚರಿತ್ರೆಯು ಕಲ್ಪಿತಕಥೆಗಿಂತ ಅದ್ಭುತವೂ ನವರಸಪರಿಪ್ಲುತವಾದ ಕಾವ್ಯಕ್ಕಿಂತ ಕಮನೀಯವೂ ಆಗಿದೆ. ಭರತಭೂಮಿಯ ಇತಿಹಾಸಪ್ರಪಂಚದಲ್ಲಿ ಅಜರಾಮರಕೀರ್ತಿಯಿಂದ ರಾರಾಜಿಸುತ್ತಿರುವ ಮಹನೀಯರಾದ ಸಮ್ರಾಜರ ಅಗ್ರಪಂಕ್ತಿಯಲ್ಲಿ ಸ್ಥಾನಾಪನ್ನನಾಗಲು ಕೃಷ್ಣದೇವರಾಯನು ಅರ್ಹನಾಗಿರುವನು. ಇಂತಹ ರಾಜಸಿಂಹನು ಭಾರತೀಯರಲ್ಲಿ ಎಷ್ಟೋ ಕಾಲ ಹಿಂದೆ ಆಗಿರಲಿಲ್ಲ. ಮುಂದೆಯೂ ಆಗಲಿಲ್ಲ. ಈತನ ಕಾಲದಲ್ಲಿ ಕರ್ನಾಟಕ ಸಾಮ್ರಾಜ್ಯದೇವಿಯು ಅತ್ಯುನ್ನತವಾದ ವೈಭವಶಿಖರವನ್ನೇರಿ ವಿರಾಜಿಸಿದಳು.

ಹಿಂದಿನ 'ವಿಲಾಸ'ದ ಕೊನೆಯಲ್ಲಿ ನೋಡಿದಂತೆ, ಕೃಷ್ಣದೇವರಾಯನು ಅಣ್ಣನು ಒಡ್ಡಿದ ಕುತಂತ್ರದಿಂದ ಪಾರಾಗಿ ಪಟ್ಟಕ್ಕೆ ಬಂದ ವೃತ್ತಾಂತವು ರಹಸ್ಯಮಯವಾಗಿದೆ. ಸಾಳುವ ತಿಮ್ಮನು ವೀರನರಸಿಂಹನ ಅಪ್ಪಣೆಯನ್ನು ಮೀರಿ ರಾಯನ ಜೀವವನ್ನು ಉಳುಹಿ ವಿಜಯನಗರಸಾಮ್ರಾಜ್ಯದ ಮೇಲೆ ಅಪಾರವಾದ ಉಪಕಾರವನ್ನು ಮಾಡಿದನು. ಸಾಮ್ರಾಜ್ಯದ ದೊರೆತನವು ಒದವಿದಾಗ ಕೃಷ್ಣದೇವರಾಯನು ಇನ್ನೂ ನವಯುವಕನೆ ಆಗಿದ್ದನು.[೧] ಸಾಳುವ ತಿಮ್ಮಮಂತ್ರಿಯು ಈತನ

---

೧. ಸುಮಾರು ೨೦ ವರ್ಷದವನೆಂದು ನ್ಯೂನಿಝನು ಹೇಳುತ್ತಾನೆ.

ಉದಾತ್ತವಾದ ರಾಜಗುಣಗಳನ್ನು ಪೋಷಿಸಿ ಪ್ರೋತ್ಸಾಹಿಸುವಲ್ಲಿ ಈತ ನಿಗೆ ತಂದೆಯಾಗಿ, ಸೋದರನಾಗಿ, ಸೇವಕನಾಗಿ, ಮಂತ್ರಿಯಾಗಿ ಪರಿಪರಿ ಯಿಂದ ನೆರವಾದನು. ಪರಾಕ್ರಮದಲ್ಲಿ, ಮಹತ್ವಾಕಾಂಕ್ಷೆಯಲ್ಲಿ, ಮಂತ್ರಾಲೋಚನೆಯಲ್ಲಿ ತಿಮ್ಮ ಮಹಾಮಂತ್ರಿಯು ಹಾಲಿನೊಡನೆ ಸಮಿಯಂತೆ ರಾಯನೊಡನೆ ಬೆರೆತು ನಡೆದನು.

ಅಭಿಷೇಕದ ನೀರು ಮಸ್ತಕದ ಮೇಲೆ ಸುರಿಯುತ್ತಿರುವಾಗಲೆ ಈ ರಾಜಪ್ರತಿಭಾಶಾಲಿಯ ತಲೆಯು ರಾಜ್ಯವಿಚಾರಗಳಲ್ಲಿ ಮಗ್ನವಾ ಗಿತ್ತು. ವೀರನರಸಿಂಹನ ಆಳಿಕೆಯು ಸಾಮ್ರಾಜ್ಯಕ್ಕೂ ಜನಾಂಗಕ್ಕೂ ಅಹಿತಕರವಾಗಿದ್ದಿತು. ಸಾಮ್ರಾಜ್ಯವು ಬಲಗುಂದಿತ್ತು. ಭಾಂಡಾರವು ಬರಿದಾಗಿತ್ತು. ವೈರಿಗಳು ಪ್ರಬಲಿಸಿ ಹೊಂಚುಹಾಕಿಕೊಂಡು ಕುಳಿತಿ ದ್ದರು. ಪ್ರಜಾಜನರು ಪರಿತಾಪದಿಂದ ಬೇಯುತ್ತಿದ್ದರು. ಅಸಂತೋ ಷದ ಜ್ವಾಲಾಮುಖಿಯು ಯಾವಾಗ, ಯಾವೆಡೆಯಲ್ಲಿ ಭುಗಿಲೆಂದು ಉರಿದೇಳುವುದೊ ಹೇಳುವಂತಿರಲಿಲ್ಲ. ಈ ಪರಿಸ್ಥಿತಿಯನ್ನೆಲ್ಲ ಸೂಕ್ಷ್ಮ ವಾಗಿ ಪರಿಶೀಲಿಸಿದ ರಾಯನು ಇದನ್ನು ಮೆಟ್ಟಿ ಮೀರಲು ಸಾಕಷ್ಟು ಸಾಮರ್ಥ್ಯವನ್ನು ಸಂಪಾದಿಸುವ ಉದ್ಯೋಗವನ್ನು ನಡೆಸಿದನು.

ಪ್ರಜಾನುರಾಗವೆ ರಾಜ್ಯದ ಮೂಲಾಧಾರವೆಂದರಿತ ರಾಯನು ಮೊದಲು ಪ್ರಜರಿಗೆ ಅಸಹ್ಯವಾಗಿರುವ ಲಗ್ನದ ಕರ ಮುಂತಾದ ತೆರಿಗೆ ಗಳನ್ನು ತೊಡೆದುಹಾಕಿದನು. ಪ್ರಚಂಡವಾದ ಸೇನಾಬಲವಿಲ್ಲದೆ ರಾಜನಿಗೆ ಯಾವುದು ತಾನೆ ಸಾಧ್ಯವು? ಆದುದರಿಂದ ರಾಯನು ಕೂಡಲೆ ಸಾಮ್ರಾ ಜ್ಯದ ಸೇನಾಶಕ್ತಿಯನ್ನು ಸಂವರ್ಧನಗೊಳಿಸಿ, ಅದರಲ್ಲಿ ಸಂಘಟನೆ ಯನ್ನು ಉಂಟು ಮಾಡಲು ಉಪಾಯಗಳನ್ನು ಕೈಕೊಂಡನು. ಪ್ರತಿಯೊಬ್ಬ ಪ್ರಾಂತಾಧಿಕಾರಿಯೂ ಮಂಡಲಾಧಿಪತಿಯೂ ತನತನಗೆ ಸಲ್ಲುವಷ್ಟು ದಂಡಾಳುಗಳನ್ನು ಪೂರ್ಣವಾಗಿ ಒದವಿಸಿಕೊಡಬೇಕು, ಇದನ್ನು ಮೀರಿದಲ್ಲಿ ಬಲವಾದ ತಪ್ಪುದಂಡವನ್ನು ತೆರಬೇಕು, ಎಂದು ಕಟ್ಟಪ್ಪಣೆಯನ್ನು ವಿಧಿಸಿದನು.

ರಾಜ್ಯದ ಆಯವ್ಯಯಗಳನ್ನು ಪರಿಶೋಧಿಸಿ ಬೊಕ್ಕಸವನ್ನು ಸಮೃದ್ಧಗೊಳಿಸಿದನು. ಶಸ್ತ್ರಸನ್ನಾಹಗಳನ್ನು ಸಂಗ್ರಹಿಸಿ ಸಮರ

ಸಾಮಗ್ರಿಯನ್ನು ಸಿದ್ಧಪಡಿಸಿದನು. ಹದಿನೆಂಟು ನಾಡುಗಳ ನಾಯಕರನ್ನು ಕರೆಸಿ ಊಟದವೃತಣವನ್ನು ಕೊಟ್ಟನು. ನೆರೆದ ಆ ಸಂತೋಷಕೂಟದಲ್ಲಿ ಅವರೊಡನೆ ರಾಜ್ಯಾಂಗದ ಎಲ್ಲ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಿ, ತನ್ನ ಉದ್ದೇಶ–ಕಾರ್ಯಕ್ರಮಗಳನ್ನು ವಿಶದಪಡಿಸಿದನು. ಮೂವತ್ತು ಮೈಲುಗಳ ವರೆಗೆ ಅರಿರಾಜ್ಯದಲ್ಲಿ ಸುಗ್ಗಿ ಮನುಷ್ಯ, ಪಶು, ಅನ್ನ ಮುಂತಾದ ಸಾಮಗ್ರಿಯನ್ನು ಹರಣಮಾಡಿಕೊಂಡು, ಶತ್ರುಗಳಿಗೆ ಅಲ್ಲಿ ಯಾವ ಸಹಾಯವೂ ಸಿಕ್ಕದಂತೆ ವ್ಯವಸ್ಥೆಮಾಡಿದನು. ರಾಜಧಾನಿಯ ಸಂರಕ್ಷಣೆಯಗೋಸುಗ ತಕ್ಕ ದಕ್ಷತೆಯನ್ನು ವಹಿಸಿದನು. ಇಂತು ಮಂತ್ರಿ, ನಾಯಕ, ದಂಡು ಮುಂತಾದ ಶಕ್ತಿಗಳಿಂದ ಸುಸಂಘಟಿತವಾದ ವಿಜಯನಗರದ ಮಹಾಸೇನೆಯು ಸಾಮ್ರಾಜ್ಯವನ್ನು ಉದ್ಧರಿಸಲಿಕ್ಕೆ ಸಿದ್ಧವಾಯಿತು.

ಹೀಗೆ ಇತ್ತ ಸೈನ್ಯದ ಸಿದ್ಧತೆಯು ನಡೆದಿರುವಾಗ ಅತ್ತ ಈ ದೇಶದಲ್ಲಿ ಕಾಲುಚಾಚಬೇಕೆಂದು ಹವಣಿಸುತ್ತಿರುವ ಪೋರ್ತುಗೀಜರು ರಾಯನೊಡನೆ ಸಂಧಾನವನ್ನು ನಡೆಸಿದ್ದರು. ಪೋರ್ತುಗೀಜ ಅಧಿಕಾರಿಯಾದ ಅಲ್ಬುಕರ್ಕನು ಕಾಲಿಕತ ಬಂದರವನ್ನು ಮುಸಲ್ಮಾನರಿಂದ ಗೆದ್ದುಕೊಳ್ಳಲಿಕ್ಕೆ ರಾಯನು ತನಗೆ ನೆರವಾಗಬೇಕು, ಹೀಗೆ ಮಾಡಿದಲ್ಲಿ ತಾನು ಮುಂದೆ ಮುಸಲ್ಮಾನರ ವಿರುದ್ಧವಾಗಿ ಕುದುರೆ ಮುಂತಾದವುಗಳ ಸಹಾಯವನ್ನು ಮಾಡುವೆನು ಎಂದು ಹೇಳಿಕಳುಹಿದನು (೧೫೦೯). ದೂರದರ್ಶಿಯಾದ ರಾಯನು ಮೌನವನ್ನು ತಾಳಿದನು. ಅಲ್ಬುಕರ್ಕನು ಮುಂದೆ ಮುಸಲ್ಮಾನರಿಂದ ಗೋವೆಯನ್ನು ಕಸಿದುಕೊಂಡು (೧೫೧೦), ವಿಜಯನಗರದ ಆಯಕಟ್ಟಿನ ಬಂದರವಾದ ಭಟಕಳದಲ್ಲಿ ತಮ್ಮ ವ್ಯಾಪಾರದ ಸಂರಕ್ಷಣಕ್ಕಾಗಿ ಕೋಟೆಯನ್ನು ಕಟ್ಟಿಕೊಳ್ಳಲು ಅಪ್ಪಣೆಯನ್ನು ಬೇಡಿದನು.

ಆಗಂತುಕರ ಈ ಆಕ್ರಮಣವು ರಾಯನ ಮನಸ್ಸಿಗೆ ಬಾರದುದರಿಂದ ಆತನು ಈ ಬೇಡಿಕೆಯನ್ನು ಮನ್ನಿಸಲಿಲ್ಲ. ಹೀಗೆ ಮಾಡಿ ಇಷ್ಟು ಬೇಗ ಆದಿಲಶಹನನ್ನು ಕೆಣಕುವುದೂ ರಾಯನಿಗೆ ಇಷ್ಟವಿರಲಿಲ್ಲ. ಇತ್ತ ಪೋರ್ತುಗೀಜರೊಡನೆ ಕೆಡಿಸಿಕೊಳ್ಳುವುದೂ ಆತನಿಗೆ ಬೇಡಾಗಿದ್ದಿತು.

ಆದುದರಿಂದ ರಾಯನು ಔಪಚಾರಿಕವಾಗಿ ಗೋವೆಯ ವಿಜಯವನ್ನು ಕುರಿತು ಅಭಿನಂದನೆಯನ್ನು ಕಳುಹಿದನು. ಅಷ್ಟರಲ್ಲಿ ಆದಿಲಶಹನು ಪೋರ್ತುಗೀಜರಿಂದ ಗೋವೆಯನ್ನು ಮರಳಿ ಕಸಿದುಕೊಂಡನು. ಆಗ ರಾಯನು ತಟಸ್ಥವೃತ್ತಿಯನ್ನು ಸ್ವೀಕರಿಸಿದನು. ಕೆಲದಿನಗಳಲ್ಲಿ ಅಂತಃ ಕಲಹಗಳಿಂದ ಆದಿಲಶಹನ ಚಿತ್ತವು ವ್ಯಗ್ರವಾಯಿತು ಈ ಸಂಧಿಯನ್ನು ನೋಡಿ, ಅಲ್ಬುಕರ್ಕನು ಮತ್ತೆ ಗೋವೆಯನ್ನು ಕಿತ್ತುಕೊಂಡು ಅಲ್ಲಿಯ ನಿರಪರಾಧಿಗಳಾದ ಆರು ಸಾವಿರ ಮುಸಲ್ಮಾನ ನಿವಾಸಿಗಳನ್ನು ಸಂಹರಿಸಿ ಪುರಪ್ರವೇಶವಮಾಡಿದನು (೧೫೧೦, ದಿಸೆಂಬರ).

ಗೋವೆಯು ಬಹುಕಾಲದಿಂದ ವಿಜಯನಗರದ ಸೊತ್ತಾಗಿದ್ದಿತು. ಮಲ್ಲಿಕಾರ್ಜುನನ ಆಳಿಕೆಯಲ್ಲಿ ಅದು ಕೈಬಿಟ್ಟುಹೋದ ತರುವಾಯ ಅದನ್ನು ತಿರುಗಿ ಸಂಪಾದಿಸಲು ನಡೆದ ಪ್ರಯತ್ನಗಳು ಯಶಸ್ವಿಯಾಗಿರಲಿಲ್ಲ. ಕೃಷ್ಣದೇವರಾಯನೂ ಅದನ್ನು ಬಯಸಿದ್ದನು. ಗೋವೆಯು ವಿಜಯನಗರದ ಪ್ರತಿನಿಧಿಯಾದ ತಿಮ್ಮೋಜನು ಗೇರಸೊಪ್ಪೆಯ ನಾಯಕನ ಬೆಂಬಲದಿಂದ ಕೃಷ್ಣದೇವರಾಯನ ಸೇನಾಸಹಾಯವನ್ನು ದೊರಕಿಸಿ ಗೋವೆಯನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಸಂಧಾನವು ನಡೆದಿತ್ತು. ಅಷ್ಟರಲ್ಲಿ ಅಲ್ಬುಕರ್ಕನು ಇದೀಗ ಹೇಳಿದಂತೆ ಗೋವೆಯನ್ನು ಎರಡನೆಯ ಬಾರಿ ವಶಮಾಡಿಕೊಂಡುದರಿಂದ ರಾಯನ ಈ ಇಚ್ಛೆಯು ಕೈಗೂಡಲಿಲ್ಲ.

ಮಿಂಚಿಹೋದ ಈ ಮಾತಿಗೆ ಚಿಂತಿಸದೆ ರಾಯನು ಇನ್ನೊಂದು ವಿಧದಿಂದ ಪೋರ್ತುಗೀಜರ ಈ ಲಾಭದಿಂದ ಸಾಮ್ರಾಜ್ಯಕ್ಕೆ ಉಪಯೋಗ ಮಾಡಿಕೊಳ್ಳಬೇಕೆಂದು ಯೋಚಿಸಿದನು. ಆತನು ಗೋವೆಯ ಈ ವಿಜಯವನ್ನು ಅಭಿನಂದಿಸಿ ಭಟಕಳದಲ್ಲಿ ಕೋಟೆಯನ್ನು ಕಟ್ಟಿಕೊಳ್ಳಲಿಕ್ಕೆ ಪೋರ್ತುಗೀಜರಿಗೆ ಅನುಮತಿಯನ್ನಿತ್ತನು. ಮುಂದಣ ಸಂಗ್ರಾಮಗಳಲ್ಲಿ ಬೇಕಾಗುವ ಕುದುರೆಗಳನ್ನೆಲ್ಲ ಪೋರ್ತುಗೀಜರು ರಾಯನಿಗೆ ಪೂರಯಿಸಿಕೊಡಬೇಕು, ಆತನ ಹಗೆಗಳಾದ ಮುಹಮ್ಮದೀಯರಿಗೆ ಕೊಡಬಾರದು, ಇದಕ್ಕಾಗಿ ರಾಯನು ಪೋರ್ತುಗೀಜರಿಗೆ ಪ್ರತಿವರ್ಷ ೩೦೦೦೦ ಕ್ರೂಜಾಡೊ ನಾಣ್ಯಗಳನ್ನು ಸಲ್ಲಿಸಬೇಕು ಎಂದು ಮುಂತಾಗಿ

ಒಡಂಬಡಿಕೆಯ ಮಾತುಗಳು ನಡೆದುವು (೧೫೧೪). ಇಂತು ದೂರದೃಷ್ಟಿ ಯಿಂದ ರಾಯನು ಪೋರ್ತುಗೀಜರೊಡನೆ ಬೆಳೆಸಿದ ಈ ಸ್ನೇಹಸಂಬಂಧವು ಮುಂದಿನ ಮಹಾಯುದ್ಧಗಳಲ್ಲಿ ಆತನಿಗೆ ಬಹು ಪ್ರಯೋಜನಕಾರಿಯಾಯಿತು.

ಇಷ್ಟರಲ್ಲಿ ಮೈಸೂರು ಸೀಮೆಯಲ್ಲಿ ನಡೆದಿರುವ ಗಲಭೆಯತ್ತ ರಾಯನು ಹೊರಳಬೇಕಾಯಿತು. ಶಿವಸಮುದ್ರಂ ಮೊದಲಾದ ಪ್ರಾಂತದ ಅಧಿಪತಿಯಾದ ಉಮ್ಮತ್ತೂರಿನ ಮಲ್ಲರಾಯ ಒಡೆಯನು ಕೆಲಕಾಲದಿಂದ ವಿಜಯನಗರದ ಒಡೆತನವನ್ನು ಒಪ್ಪಿಕೊಳ್ಳದೆ ಸ್ವತಂತ್ರನಾಗಬೇಕೆಂದು ಹವಣಿಸಿ ಪುಂಡಾಟಿಕೆಯನ್ನು ಹೂಡಿದ್ದನು (೧೫೧೦). ರಾಯನು ಆತನಿಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿ, ಆತನ ರಾಜ್ಯವನ್ನು ಕಸಿದುಕೊಂಡು ಉಳಿದ ಚಿಕ್ಕ ಪ್ರದೇಶದ ಮೇಲೆ ಆತನ ಮಗನನ್ನು ನೇಮಿಸಿದನು. ಇದರಿಂದ ಮೈಸೂರು ಪ್ರಾಂತವು ಪೂರ್ಣವಾಗಿ ವಿಜಯನಗರದ ಅಧಿಕಾರಕ್ಕೆ ಒಳಪಟ್ಟಿತು.

ಇದರಂತೆ ಪೆನುಗೊಂಡದ ಪ್ರದೇಶವೂ ಅನಾಯಕದ ಸೊಗಡಿಗೆ ಸಿಲುಕಿತ್ತು. ಅಲ್ಲಿಗೆ ಅಧಿಕಾರಿಯಾಗಿ ಕಳುಹಲ್ಪಟ್ಟ ದೇಮರಸಯ್ಯನು ಸಾರ್ವಜನಿಕವಾಗಿ ನಡಗರದ ಯಜ್ಞಸಮಾರಂಭವನ್ನು ನೆರವೇರಿಸಿ, ಜನರಿಗೆ ಅಪ್ರಿಯವಾದ ಕೆಲವು ತೆರಿಗೆಳನ್ನು ತೆಗೆದುಹಾಕಿ, ಜನತೆಯ ಮನಸುಗಳನ್ನು ಸಂತಯಿಸಿದನು (೧೫೧೩). ಶಿವಸಮುದ್ರದ ದಂಡಯಾತ್ರೆಯಿಂದ ಮರಳಿ ಬರುವಾಗ ರಾಯನು ಆದಿಲಶಹನ ಪ್ರದೇಶಗಳಲ್ಲಿ ಹೊಕ್ಕು ಕೆಲವು ಊರುಗಳನ್ನು ಗೆದ್ದುಕೊಂಡನು.

ಈ ಮೇರೆಗೆ ಸಾಮ್ರಾಜ್ಯದ ಒಳಗಡೆಯಲ್ಲಿ ಸ್ವಾಸ್ಥ್ಯವನ್ನು ಸ್ಥಾಪಿಸಿದ ರಾಯನು ಸಾಮ್ರಾಜ್ಯದ ಕಡುಹಗೆಗಳಾದ ಮಹಮ್ಮದೀಯ ಮತ್ತು ಓರಿಸ ರಾಜ್ಯಗಳ ಪೂರ್ಣ ಸಮಾಚಾರವನ್ನು ತೆಗೆದುಕೊಳ್ಳುವ ಕಾರ್ಯದಲ್ಲಿ ನಿರತನಾದನು. ಸಾಮ್ರಾಜ್ಯವತ್ಸಲನಾದ ಸಾಳುವ ನರಸಿಂಹನ ಅಂತ್ಯಕಾಲದಲ್ಲಿ ಅಪೂರ್ಣವಾಗಿ ಉಳಿದ ಆಕಾಂಕ್ಷೆಗಳು ಆತನಿಗೆ ಮತ್ತೆಮತ್ತೆ ನೆನಪಾದುವು. ತನ್ನ ಹಿಂದಿನವರಿಂದ ಪೂರ್ತಿಯಾಗದೆ

ಇದ್ದ ಅವುಗಳನ್ನು ತಾನಾದರೂ ನೆರವೇರಿಸಿ ಕೃತಕೃತ್ಯನಾಗಬೇಕೆಂದು ನಿಶ್ಚಯಿಸಿದನು. ಕಳೆದ ಹತ್ತು ಹನ್ನೆರಡು ವರ್ಷಗಳಲ್ಲಿ ಗೋವಳಕೊಂಡ ಮತ್ತು ಓರಿಸ ಅರಸರ ಉಪಟಳವು ಬೆಳೆಯುತ್ತ ನಡೆದಿತ್ತು. ಅವರು ಒಂದೇಸಮನಾಗಿ ವಿಜಯನಗರದ ಮೇಲೆ ಆಕ್ರಮಣಗಳನ್ನು ಹೂಡಿದ್ದರು. ಕೃಷ್ಣೆಯವರೆಗಿನ ವಿಜಯನಗರದ ಪ್ರದೇಶಗಳನ್ನು ಕಸಿದುಕೊಂಡಿದ್ದರು. ವಿಜಯನಗರ ರಾಜ್ಯದಲ್ಲಿ ಅಸಹ್ಯವಾದ ಹಲವು ಅತ್ಯಾಚಾರಗಳನ್ನು ಎಸಗಿದ್ದರು. ಅವರೀ ಅನ್ಯಾಯಗಳನ್ನು ಸೈರಿಸುವುದೆಂತು? ಈಗೀಗಲಂತೂ ಅವರ ಉರವಣಿಗೆಯು ಅತಿರೇಕಕ್ಕೆ ಹೋಗಿತ್ತು.

ಕೃಷ್ಣದೇವರಾಯನ ಬೆಳೆವ ಶಕ್ತಿಯನ್ನು ಕುಗ್ಗಿಸಬೇಕೆಂಬ ಉದ್ದೇಶದಿಂದ ವಿಜಾಪುರ, ಅಹಮದನಗರ, ಬಿದರ, ಗೋವಳಕೊಂಡ ಇವುಗಳ ಅರಸರು ಓರಿಸದ ಅರಸನೊಡನೆ ಸಂಧಿಯನ್ನು ಮಾಡಿಕೊಂಡು ನಿಶ್ಚಿತವಾದ ಒಂದು ಕಾರ್ಯಕ್ರಮವನ್ನು ಗೊತ್ತುಪಡಿಸಿದ್ದರು. ಮೊದಲು, ವಿಜಾಪುರ ಮೊದಲಾದ ಮುಸಲ್ಮಾನ ಅರಸರು ರಾಯನನ್ನು ಕೆಣಕಿ ಆತನ ರಾಜ್ಯದಲ್ಲಿ ನುಗ್ಗಬೇಕು. ಅಷ್ಟಕ್ಕೆ ಆತನು ಸೋತು ಹೋದರೆ ಲೇಸೈ. ಹಾಗಾಗದೆ ಒಂದುವೇಳೆ ತಾವು ಸೋತರೆ, ಕೆರಳಿದ ರಾಯನು ಕೃಷ್ಣೆಯನ್ನು ದಾಟಿ ಓರಿಸ ರಾಜ್ಯದ ಮೇಲೆ ಧುಮುಕುವುದು ಖಂಡಿತವು. ಆಗ ಆತನನ್ನು ಗಜಪತಿಯು ಉಪಚರಿಸಬೇಕು ಎಂದು ಸಂಕೇತವಾಗಿತ್ತು. ಅದನ್ನನುಸರಿಸಿ ವಿಜಾಪುರ, ಬಿದರ, ಅಹಮದನಗರ, ಗೋವಳಕೊಂಡದ ಅರಸರು ಕೃಷ್ಣೆಯನ್ನು ಇಳಿದು ವಿಜಯನಗರ ರಾಜ್ಯದಲ್ಲಿ ಕೊಳ್ಳೆಯನ್ನಿಟ್ಟು ಅನೇಕ ಅನಾಹೂತಗಳನ್ನು ಆರಂಭಿಸಿದರು. ಉಮ್ಮತ್ತೂರ ದಂಡಯಾತ್ರೆಯಿಂದ ಮರಳಿ ಬರುವಷ್ಟರಲ್ಲಿ ರಾಯನಿಗೆ ಈ ಸುದ್ದಿಯು ತಿಳಿಯಿತು.

ಕಿಡಿಕಿಡಿಯಾದ ರಾಯನು ಸೇನಾನಿಯಾದ ರಾಮಲಿಂಗನನ್ನು ಕರೆಸಿ ಮುಂದಂಡಿನ ನಾಯಕನನ್ನು ಮಾಡಿ ಅರಿಗಳ ಮೇಲೆ ಅಟ್ಟಿದನು. ರಾಮಲಿಂಗನು ಮದುವಣಿಗನ ಉಲ್ಲಾಸದಿಂದ ಹೊರಟು ಶತ್ರುಶಿಬಿರದ ಮೇಲೆ ಅಪ್ಪಳಿಸಿದನು. ಹಗೆಗಳನ್ನು ಹಣಿದು ಅವರ ರಾಹುಟಿಯು

ಹಗ್ಗಗಳನ್ನು ಕೊಯ್ದು ಹಾಕಿ, ಪೂರ್ವಸಂಕೇತದಂತೆ ಗರ್ಜನೆಯನ್ನು ಮಾಡಿದನು. ಮರುಕ್ಷಣದಲ್ಲಿ ಕೃಷ್ಣದೇವರಾಯನ ರಣಭೇರಿಯು ಧೀಂಕಿಡಲಾರಂಭಿಸಿತು. ಐದು ಲಕ್ಷ ಕಾಲಾಳುಗಳು, ಅರವತ್ತುಸಾವಿರ ರಾವುತರು, ಆನೆಗಳು ಮೊದಲಾದ ಮಹಾಸೇನಾಪರಿವಾರದೊಂದಿಗೆ ಉನ್ನತವಾದ ಆನೆಯನ್ನೇರಿದ ರಾಯನು ತ್ವರೆಯಿಂದ ಬಂದು ಅರಿಗಳ ಮೇಲೆ ಎರಗಿದನು. ಅತ್ತ ಸೂಸಿ ಹರಿವ ಹೊಳೆಯು; ಇತ್ತ ರಾಯನ ಬಿರುಬಿರುಸಾದ ಹೊಡೆತವು.

ಆ ಬೇಸಗೆಯ ಬಿಸಿಲಿಗಿಂತ ಮಿಗಿಲೆನಿಸಿದ ರಾಯನ ಪ್ರತಾಪದ ಬೇಗೆಯನ್ನು ಸಹಿಸದಾದ ವೈರಿದಂಡಾಳುಗಳು ಹೊಳೆಯಲ್ಲಿ ಹಾರತೊಡಗಿದರು. ರಾಯನು ಅವರನ್ನು ಬೆಂಬತ್ತಿದನು. ಅರಿಸೈನ್ಯವೆಲ್ಲವು ಚೆದರಿ ಚಲ್ಲಾಪಿಲ್ಲಿಯಾಗಿ ದಿಕ್ಕುಗೆಟ್ಟು ಓಡಿಹೋಯಿತು. ಈ ಪಲಾಯನ ಸಂಭ್ರಮದಲ್ಲಿ ಸತ್ತವರೆಷ್ಟೋ ಕೆಟ್ಟವರೆಷ್ಟೋ ! ವಿರೋಧಿಬಲದ ನಿರ್ದಾಲನವಾಯಿತು. ಸುಲಿಗೆಯು ಹೇರಳವಾಗಿ ರಾಯನ ಕೈಸೇರಿತು. ಯುದ್ಧವು ಸಮಾಪ್ತವಾಗಲು, ರಾಯನು ಓಲಗವನ್ನು ನೆರೆಸಿ ಶೌರ್ಯವನ್ನು ಮೆರೆದ ವೀರರನ್ನು ಅಭಿನಂದಿಸಿ ಉಚಿತವಾಗಿ ಸನ್ಮಾನಿಸಿದನು. ಚತುರನಾದ ರಾಯನು ಮಂತ್ರಿಗಳ ಆಲೋಚನೆಯನ್ನು ಕೇಳಿ, ಕೃಷ್ಣೆಯ ಆಚೆಗೆ ಹಗೆಯನ್ನು ಹಿಂಬಾಲಿಸಲಿಲ್ಲ. ಮಳೆಗಾಲವು ಮುಗಿವನಕ ತಡೆದು ಮುಂದಿನ ಗಜಪತಿರಾಯನ ಮೇಲಿನ ದಂಡಯಾತ್ರೆಯ ಸಿದ್ಧತೆಯಲ್ಲಿ ಕಾಲಕಳೆದನು.

ಅನುಕೂಲ ಸಮಯವು ಬಂದೊಡನೆ ರಾಯನು ಉದಯಗಿರಿಯ ಮೇಲೆ ದಂಡಯಾತ್ರೆ ಮಾಡಿದನು. ಕೋಟೆಯು ಬಹಳ ದುರ್ಭೇದ್ಯವಾಗಿದ್ದಿತು. ಆದಕ್ಕಾಗಿ ರಾಯನು ಬಹಳ ಹೋರಾಡಬೇಕಾಯಿತು. ಮುತ್ತಿಗೆಯು ಒಂದೂವರೆ ವರ್ಷದ ವರೆಗೆ ಬೆಳೆದು ಕೊನೆಗೆ ಕೋಟೆಯು ಸ್ವಾಧೀನವಾಯಿತು. ಗಜಪತಿಯ ಕಕ್ಕನಾದ ತಿರುಮಲರಾವುತರಾಯನು ಸೆರೆಸಿಕ್ಕನು.

ಉದಯಗಿರಿಯ ವಿಜಯದಿಂದ ರಾಯನು ತೃಪ್ತನಾಗಲಿಲ್ಲ. “ ಇದೇನು ಕ್ಷುದ್ರ ವಿಜಯವು ! ಮುಂದೆ ಒಂದುನೂರು ಹರದಾರಿಗಳ

ವರೆಗೆ ಅರಿರಾಜ್ಯದಲ್ಲಿ ದಿಗ್ವಿಜಯಮಾಡಬೇಕೆಂದು ನನ್ನ ಮಹತ್ವಾಕಾಂಕ್ಷೆಯಾಗಿದೆ" ಎಂದು ರಾಯನು ಸಾಳುವ ತಿಮ್ಮಮಂತ್ರಿಗೆ ತಿಳುಹಿದನು. ಹೆಚ್ಚಿನ ಅನ್ನಸಾಮಗ್ರಿಯನ್ನು ಸಂಗ್ರಹಿಸಲು, ದಂಡಾಳುಗಳಿಗೆ ಪೂರ್ಣ ಸಂಬಳಗಳನ್ನು ಕೊಡಲು ಆಜ್ಞಾಪಿಸಿದನು.

ಮುಂದೆ ಆಯಾಸವಿಲ್ಲದೆ ಕಂದಕೂರು ವಶವಾಯಿತು. ಬಳಿಕ ಕೊಂಡವೀಡಿನ ಬಾರಿಯು ಬಂದಿತು. ಇದು ಓರಿಸರಾಜ್ಯದ ಗಂಡಿಸ ಸ್ಥಳವಾದುದರಿಂದ ಗಜಪತಿಯು ಇದರ ಸಂರಕ್ಷಣೆಗೆ ೫ ಲಕ್ಷ ಕಾಲಾಳು, ೨೦ ಸಾವಿರ ಕುದುರೆ, ೧೩೦೦ ಆನೆಗಳೊಂದಿಗೆ ಧಾವಿಸಿದನು. ರಾಜ್ಯದ ಪ್ರಮುಖರಾದ ಎಲ್ಲ ನಾಯಕರೂ ಅಧಿಕಾರಿಗಳೂ ಇಲ್ಲಿ ಸಮ್ಮಿಲಿತರಾಗಿದ್ದು, ವಿಶ್ವಪ್ರಯತ್ನಮಾಡಿ ರಾಯನನ್ನು ನಿರೋಧಿಸಲೇಬೇಕು ಎಂದು ನಿರ್ಧರಿಸಿದ್ದರು. ಇವರ ನೆರವಿಗೆ ಆದಿಲಶಹನು ಮಲ್ಲುಖಾನ, ರಾಯಚೂರ ಉದ್ದಂಡಾಖಾನರೆಂಬ ಇಬ್ಬರು ಸೇನಾನಾಯಕರನ್ನು ಕಳುಹಿದ್ದನು. ಉಭಯ ದಲಗಳ ನಡುವೆ ಒಂದು ಹೊಳೆಯು ಅಡ್ಡವಾಗಿತ್ತು. "ನಾನು ನನ್ನ ಸೈನ್ಯವನ್ನು ನಸು ಹಿಂದಕ್ಕೆ ಸರಿಸಿಕೊಳ್ಳುವೆನು; ನೀವು ಹೊಳೆಯನ್ನು ದಾಟಿ ಬನ್ನಿ" ಎಂದು ರಾಯನು ಗಜಪತಿಗೆ ತಿಳುಹಿದನು.

ಗಜಪತಿಯು ಇದನ್ನು ಮನ್ನಿಸದಿರುವುದನ್ನು ನೋಡಿ, ರಾಯನು ತಾನೇ ಹೊಳೆಯನ್ನು ಇಳಿಯಹೊರಟನು. ಗಜಪತಿಯು ಆತನನ್ನು ಇದಿರಿಸಿದನು. ರಾಯನು ಬಲವಾದ ಆತನ ವಿರೋಧಕ್ಕೆ ಅಳುಕದೆ, ಹೊಳೆಯನ್ನು ದಾಟಿ ಕ್ರೂರವಾಗಿ ಕಾದಿದನು. ಗಜಪತಿಯು ಪರಾಜಿತನಾಗಿ ಪಲಾಯನಸೂಕ್ತವನ್ನು ಹೇಳಿದನು. ಜಯಶಾಲಿಯಾದ ವಿಜಯನಗರಸೇನೆಯು ಬೊಬ್ಬಿರಿಯುತ್ತ ಕೊಂಡವೀಡು ಕೋಟೆಯ ಮೇಲೆ ಅಪ್ಪಳಿಸಿತು. ಮುತ್ತಿಗೆಯು ಎರಡು ತಿಂಗಳು ನಡೆದು ಕೊನೆಗೆ ರಾಯನ ಸೈನಿಕರು ಏಣಿಗಳನ್ನೇರಿ ಕೋಟೆಯನ್ನು ಕಿತ್ತುಕೊಂಡರು. ರಾಜಕುಮಾರ ವೀರಭದ್ರ, ಕಸವಪಾತ್ರ ಮೊದಲಾದ ಪ್ರಮುಖ-ವೀರರು ರಾಯನಿಗೆ ಸೆರೆಸಿಲುಕಿದರು. ದುರ್ಗದ ವ್ಯವಸ್ಥೆ

ಯನ್ನು ತಿಮ್ಮಮಂತ್ರಿಯ ಕಡೆಗೆ ಒಪ್ಪಿಸಿ ರಾಯನು ಗಜಪತಿ ಪ್ರತಾಪರುದ್ರನನ್ನು ಬೆಂಬತ್ತಿ ಮುಂದೆಸಾಗಿದನು.

ಅನಂತರ ರಾಯನು ಶತ್ರುಗಳ ಕನಸುಮನಸಿನಲ್ಲಿ ಇಲ್ಲದಂತೆ ಕೊಂಡಪಲ್ಲಿಯ ಮುಂದೆ ಹಾರಿಸಿಂತನು. ಇದೂ ಕಲಿಂಗನಾಡಿನ ಇನ್ನೊಂದು ಪ್ರಮುಖ ಸ್ಥಳವೂ ಪ್ರಾಂತೀಯ ರಾಜಧಾನಿಯೂ ಆಗಿದ್ದಿತು. ಮೂರು ತಿಂಗಳು ಹೋರಾಡಿ ಕೊನೆಗೆ ರಾಯನ ಮಹಾಬಲದ ಮುಂದೆ ಇದೂ ಕೈಯೂರಿತು. ಇಲ್ಲಿ ಓರಿಸದ ರಾಜಪತ್ನಿಯೂ, ರಾಜಪುತ್ರ ರಾಮಚಂದ್ರದೇವನು, ಪ್ರಮುಖರಾದ ಪಳು ನಾಯಕರು ರಾಯನಿಗೆ ಕೈಸೆರೆಯಾದರು. ಮುಂದೆ ರಾಯನು ಸರಸನೆ ಓರಿಸ ಮತ್ತು ಗೋವಳಕೊಂಡ ರಾಜ್ಯದೊಳಗಿನ ವಿನುಕೊಂಡ, ಬೆಲ್ಲಮಕೊಂಡ, ನಾಗಾರ್ಜುನಿಕೊಂಡ ಮೊದಲಾದ ಕೋಟೆಗಳನ್ನು ಕಿತ್ತುಕೊಂಡನು.

ತಾನು ಹೀಗೆಯೆ ಮುಂದೆ ಮುಂದೆ ಕಲಿಂಗರಾಜ್ಯದ ಒಡಲಲ್ಲಿ ಹೋರಟಿರುವಾಗ, ಗಜಪತಿಯ ಮಿತ್ರನಾದ ಬಿದರ ಸುಲ್ತಾನನು ಹಿಂದಿನಿಂದ ಬಂದು ತನಗೆ ಬಲೆಯನ್ನು ಒಡ್ಡಬಹುದು. ಗಜಪತಿಯ ಪರಾಭವದಿಂದ ತನ್ನ ಮುಂದಿನ ಮಾರ್ಗವಂತೂ ಸುಲಭವಾಗಿದೆ. ಅಷ್ಟರಲ್ಲಿ ಮಗ್ಗುಲಲ್ಲಿಯ ಈ ವೈರಿಯನ್ನು ಚೆನ್ನಾಗಿ ಉಪಚರಿಸುವ. ಎಂದರೆ ತನ್ನ ವಿಜಯರಥವು ನಿರ್ಭಯವಾಗಿ ಮುಂದುವರಿಯಬಲ್ಲುದು. ಎಂದು ರಾಯನು ಆಲೋಚಿಸಿ ಬಿದರ ಸುಲ್ತಾನನ ರಾಜಧಾನಿಯಾದ ಅಹಮದ ನಗರದತ್ತ ತನ್ನ ದಂಡನ್ನು ಹೊರಳಿಸಿದನು. ರಾಯನ ಪ್ರಚಂಡವಾದ ಆಘಾತಕ್ಕೆ ಕಂಗೆಟ್ಟ ಮಹಮ್ಮದೀಯರು ಕೋಟೆಯನ್ನು ಕೈಬಿಟ್ಟು ಹಿಂದಕ್ಕೆ ಕಾಲ್ದೆಗೆದರು. ಅಹಮದನಗರ ಕೋಟೆಯು ನೆಲಸಮವಾಯಿತು. ಅಲ್ಲಿ ಹರಗಿ ಔಡಲವನ್ನು ಬಿತ್ತಿದರು. ಈ ಮೇರೆಗೆ ಬಿದರ ಸುಲ್ತಾನನು ಹಿಂದೆ ವಿಜಯನಗರರಾಜ್ಯದಲ್ಲಿ ಮಾಡಿದ್ದ ಅನಂತ ಅತ್ಯಾಚಾರಗಳ ಸೇಡು ತೀರಿಸಿದಂತಾಯಿತು.

ಈ ಅಹಮದನಗರದ ವಿಜಯದಿಂದ ಉತ್ಸಾಹಿತರಾದ ವಿಜಯನಗರದ ಕಲಿಗಳು ಮತ್ತೆ ಗಜಪತಿಯ ರಾಜ್ಯದಲ್ಲಿ ನುಗ್ಗಿದರು. 'ಹೀಗೆ

ಎಷ್ಟು ದೂರ ಶತ್ರು ಪ್ರದೇಶದಲ್ಲಿ ಪಯಣಮಾಡುವುದು? ಇದು ನಮಗೇ ಒಮ್ಮೆ ಘಾತುಕವಾಗಲಿಕ್ಕಿಲ್ಲವೆ?' ಎಂದು ತಿಮ್ಮಮಂತ್ರಿಯು ಭಯವನ್ನು ಸೂಚಿಸಿದನು. ಪ್ರತಾಪೋನ್ಮಾದಿತನಾದ ರಾಯನು ಅದನ್ನು ಗಣಿಸದೆ ಮುಂದೆ ಸಾಗಿದನು. ಪೂರ್ವಘಟ್ಟಗಳನ್ನು ಇಳಿದು ಹೋಗುತ್ತಿರುವಾಗ, ಗಜಪತಿಯ ಮಿತ್ರನಾದ ಚಿತಾಪಖಾನನು ರಾಯನನ್ನು ಕಣಿವೆಯಲ್ಲಿ ಕೆಣಕಿದನು ಇತ್ತಂಡವಾದ ರಾಯನ ದಂಡಿನ ಇರಿತಕ್ಕೆ ಸಿಕ್ಕು ಆತನು ನುಗ್ಗುನುಗ್ಗಾಗಿ ಓಡಿಹೋದನು. ರಾಯನು ಕಣಿವೆಯ ಮಾರ್ಗಗಳ ಸಂರಕ್ಷಣೆಗೆ ಮೂವತ್ತು ಸಾವಿರ ದಂಡಾಳುಗಳನ್ನು ಇರಿಸಿ, ದೇಶವನ್ನು ಪಾದಾಕ್ರಾಂತಮಾಡುತ್ತ ಮುಂದೆ ನಡೆದು ಸಿಂಹಾಚಲಕ್ಕೆ[೨] ಮುತ್ತಿಗೆಯನ್ನು ಇಟ್ಟನು.

ಇಲ್ಲಿಯ ಅರಮನೆಯಲ್ಲಿ ಸಿಕ್ಕುಬಿದ್ದ ಗಜಪತಿಯು ಎಷ್ಟು ದಿನಗಳಾದರೂ ಹೊರಗೆ ಬರಲೇ ಒಲ್ಲನು. "ತಮ್ಮ ಸ್ವಾಗತಕ್ಕೆಂದು ಎಷ್ಟು ಆತುರನಾಗಿ ನಾನಿಲ್ಲಿ ಕಾದುಕೊಂಡಿದ್ದೇನೆ! ಬೇಗ ದಯಪಾಲಿಸಬೇಕು." ಎಂದು ರಾಯನು ಗಜಪತಿಗೆ ಹಲವು ಕರೆಗಳನ್ನು ಕಳುಹಿದನು. ಆದರೂ ಆತನ ಸುಳಿವೇ ಇಲ್ಲ! ಕೊನೆಗೆ ರಾಯನು ಸಡಗರದಿಂದ ಸಿಂಹಾಚಲವನ್ನು ಪ್ರವೇಶಿಸಿ, ಅಲ್ಲಿ ಆರು ತಿಂಗಳ ವರೆಗೆ ತಂಗಿ, ದೇವಾಲಯಗಳನ್ನು ಕಟ್ಟಿಸಿ ದಾನಗಳನ್ನು ಕೊಟ್ಟನು.

ಅಷ್ಟರಲ್ಲಿ ಕಲಿಂಗರಾಜನು ಬಳಿಯಲ್ಲಿರುವ ಪೊಟ್ಟನೂರಿಗೆ ಪಯಣಮಾಡಿ ರಾಯನನ್ನು ಇದಿರಿಸುವ ಉದ್ಯೋಗವನ್ನು ನಡೆಸಿದ್ದನು. ಪೊಟ್ಟನೂರು ಭದ್ರವಾದ ಸ್ಥಳವೂ ರಾಜ್ಯದ ಒಂದು ಪ್ರಮುಖ ಕೇಂದ್ರವೂ ಆಗಿದ್ದಿತು. ತನ್ನ ಸೇನಾಬಲನನ್ನೆಲ್ಲ ಇಲ್ಲಿ ಒಂದುಗೂಡಿಸಿ ತನ್ನ ಹದಿನಾರು ಮಹಾಪಾತ್ರರ (ಸಾಮಂತರ) ಸಹಾಯವನ್ನು ಪಡೆದು ಕೃಷ್ಣದೇವರಾಯನನ್ನು ಬಲವಾಗಿ ವಿರೋಧಿಸಬೇಕೆಂದು ಪ್ರತಾಪರುದ್ರನು ಸಂಕಲ್ಪಿಸಿದ್ದನು.

ಈಗ ರಾಯನ ಸ್ಥಿತಿಯು ಬಿಕ್ಕಟ್ಟಿನದಾಗಿತ್ತು. ಸುತ್ತಲೂ

---

೨. ಪೊಟ್ಟನೂರಿ–ಸಿಂಹಾದ್ರಿ; ವಿಜಗಾಪಟ್ಟಣದ ಬಳಿಯಲ್ಲಿ.

ಶತ್ರುಗಳು ! ಅಪರಿಚಿತವಾದ ಅರಿರಾಜ್ಯವು ! ದೈವದುರ್ವಿಪಾಕದಿಂದ ಸೋಲು ಒದವಿದರೆ, ಮುಂದೆ ತನ್ನ ಗತಿಯೇನು ? ಈ ವಿಚಾರವು ಕ್ಷಣಹೊತ್ತು ರಾಯನನ್ನು ನೋಯಿಸದೆ ಇರಲಿಲ್ಲ. ಮಂತ್ರಾಲೋಚನೆಗೆ ಸಾಳುವ ಮಂತ್ರಿಯು ಸಿದ್ಧನೆ ಇದ್ದನು. ಮಾನವ ಜೀವಗಳನ್ನು ಬಲಿಗೊಡದೆ ವಿಜಯದೇವಿಯನ್ನು ಒಲಿಸಿಕೊಳ್ಳುವಂತಹ ಅಪೂರ್ವವಾದ ಒಂದು ಹಂಚಿಕೆಯನ್ನು ಆತನು ಸೂಚಿಸಿದನು. ಅದು ರಾಯನಿಗೆ ಮೆಚ್ಚುಗೆಯಾಯಿತು.

ಕೂಡಲೆ ಗಜಪತಿಯ ಹದಿನಾರು ಮಹಾಪಾತ್ರರಿಗೆ ಚಿನ್ನರನ್ನ ಗಳಿಂದ ತುಂಬಿದ ಪೆಟ್ಟಿಗೆಗಳು ಕಾಣಿಕೆಯಾಗಿ ಹೋದುವು. ಅವುಗಳ ಜೊತೆಯಲ್ಲಿ 'ಈ ಮೊದಲು ನಮ್ಮನಿಮ್ಮಲ್ಲಿ ನಡೆದ ಒಡಂಬಡಿಕೆಯಂತೆ ಕಾಣಿಕೆಗಳನ್ನು ಕಳುಹಿದ್ದೇನೆ; ಇವನ್ನು ಸ್ವೀಕಾರಮಾಡಿ ಪೂರ್ವ ಸಂಕೇತದಂತೆ ಸಮರಾಂಗಣದಲ್ಲಿ ಗಜಪತಿಯನ್ನು ತೊಲಗಬೇಕು.' ಎಂಬ ಗುಟ್ಟಿನ ಓಲೆಗಳನ್ನು ಇರಿಸಿದ್ದನು. ಇವುಗಳಲ್ಲಿ ಕೆಲವು ಗಜಪತಿಯ ಕೈಗೆ ಬೀಳುವಂತೆ ಬುದ್ಧಿಪೂರ್ವಕವಾಗಿ ವ್ಯವಸ್ಥೆಯನ್ನು ಮಾಡಲಾಗಿತ್ತು.

ಗಜಪತಿಯು ಈ ಮೋಸದ ಬಲೆಗೆ ಸಿಲುಕಿದನು. ತನ್ನ ಮಹಾಪಾತ್ರರ ಈ ವಿಶ್ವಾಸಘಾತದ ವಾರ್ತೆಯಿಂದ ಆತನು ಹೌಹಾರಿದನು. ಜೀವದಾಸೆಯಿಂದ ಇರುಳಲ್ಲಿ ಯಾರೂ ಅರಿಯದಂತೆ ಗಚ್ಚಹೇಳಿದನು. ಮುಂಜಾವಿನಲ್ಲಿ ಗಜಪತಿಯ ಈ ವಿಚಿತ್ರ ವರ್ತಮಾನವನ್ನು ಕೇಳಿದ ಮಹಾಪಾತ್ರರು ಬೆಪ್ಪಾಗಿ ತಮ್ಮತಮ್ಮ ದುರ್ಗಗಳಿಗೆ ಪ್ರಯಾಣಮಾಡಿದರು. ಇಂತು ರಾಯನು ಒಡ್ಡಿದ ತಂತ್ರವು ಪೂರ್ಣ ಯಶಸ್ವಿಯಾಯಿತು. ಒಂದು ಕತ್ತಿಯನ್ನೂ ಹಿರಿಯದೆ, ಒಂದು ಹನಿ ನೆತ್ತರವನ್ನೂ ಸುರಿಯದೆ. ಪೊಟ್ಟನೂರು ಸ್ವಾಧೀನವಾಯಿತು. ಕಲಿಂಗ ಬಲವು ಚದರಿಹೋಯಿತು. ರಾಯನು ಜಯಜಯಕಾರದೊಂದಿಗೆ ಪುರವನ್ನು ಪ್ರವೇಶಿಸಿದನು. ಅಲ್ಲಿ ತಾಳದ ಮರದೆತ್ತರದ ವಿಜಯಸ್ತಂಭವನ್ನು ನಿಲ್ಲಿಸಿ, ಅದರ ಮೇಲೆ ತನ್ನ ವಿಜಯಗಳನ್ನೂ **ಗಜಪತಿಸಪ್ತಾಂಗಹರಣ** ಎಂಬ ಬಿರುದನ್ನೂ ಕೊರೆಸಿದನು.

ಇಷ್ಟಕ್ಕೆ ಕಲಿಂಗದಂಡನೆಯು ಕೆಲಸವು ಮುಗಿಯಲಿಲ್ಲ. ಪ್ರತಾಪ ರುದ್ರನು ಸೋತು ಶರಣಾಗತನಾಗುವವರೆಗೆ ಆತನನ್ನು ಬಿಡುವರೆ? ಇದೀಗ ಪಾದಾಕ್ರಾಂತವಾದ ಪೊಟ್ಟನೂರನ್ನು ತನ್ನ ಮುಂದಣ ದಂಡ ಯೋಜನೆಗೆ ಮೂಲಸ್ಥಾನವನ್ನು ಮಾಡಿಕೊಂಡು ರಾಯನು ಗಜಪತಿ ಯನ್ನು ಬೆಂಬತ್ತಿದನು. ವಿಜಯನಗರದ ಭಟರು ಓರಿಸದ ಗುಡ್ಡಗಾಡ ಪ್ರದೇಶವನ್ನು ಗೆಲ್ಲುತ್ತ ಅಡ್ಡಬಂದವರನ್ನು ಕೊಚ್ಚುತ್ತ ಮುಂದೆ ಸಾಗಿ ದರು. ಗಜಪತಿಯು ಈಗ ತನ್ನ ರಾಜಧಾನಿಯಾದ ಕಟಕಪುರಿಗೆ ಓಡಿ ಹೋಗಿ, ರಾಯನ ಭೀತಿಯಿಂದ ಕಂಗೆಟ್ಟು ಕ್ಷಣಗಳನ್ನು ಜಪಿಸುತ್ತ ಕುಳಿತಿದ್ದನು. ಕಟಕಪುರಿಯೂ ರಾಯನ ಪ್ರತಾಪಾಗ್ನಿಗೆ ಆಹುತಿಯಾಗಿ ಧಗಧಗನೆ ಸುಡಲಾರಂಭಿಸಿತು. ಗಜಪತಿಯು ಅಲ್ಲಿಂದಲೂ ದಿಕ್ಕುಗೆಟ್ಟು ಓಡಿದನು. ನೆಲವೆ ಎದ್ದು ಆತನನ್ನು ಬಡಿಯಬಂದಂತಾಯಿತು.

ಪ್ರತಾಪರುದ್ರನ ರುದ್ರಪ್ರತಾಪದ ಕೊಬ್ಬೆಲ್ಲ ಕರಗಿ ನೀರುನೀರಾ ಯಿತು. ಆತನು ಹಲ್ಲಲ್ಲಿ ಕಡ್ಡಿಯನ್ನು ಕಚ್ಚಿಕೊಂಡು ಸಂಧಿಗಾಗಿ ಪ್ರಾರ್ಥಿಸಿದನು. ಜಗನ್ಮೋಹಿನಿಯೆಂಬ ತನ್ನ ಮಗಳನ್ನು ರಾಯನಿಗೆ ಮದುವೆಮಾಡಿಕೊಡಲು ಬಯಸಿದನು. ಉದಾರಹೃದಯನಾದ ರಾಯನು ತನ್ನ ಸೆರೆಯಲ್ಲಿದ್ದ ಗಜಪತಿಯ ಹೆಂಡತಿಯನ್ನೂ ತಾನು ಇದುವರೆಗೆ ಗೆದ್ದ ಆತನ ರಾಜ್ಯವನ್ನೂ ಬಿಟ್ಟುಕೊಡುವುದಾಗಿ ತಿಳುಹಿ ದನು. ಗಜಪತಿಯ ಮೇಲಿನ ರಾಯನ ರೋಷವು ಶಾಂತವಾಯಿತು. ಕೃಷ್ಣದೇವ–ಜಗನ್ಮೋಹಿನಿಯರ ಕಲ್ಯಾಣೋತ್ಸವದ ಸಿದ್ಧತೆಯು ನಡೆ ಯಿತು. ನಸು ಹಿಂದೆ ಬದ್ಧವೈರಿಗಳಾದವರು ಅಳಿಯಮಾವಂದಿರಾದರು. ಮಾವನು ಅಳಿಯನಿಗೆ ಹೇರಳವಾಗಿ ಐಸಿರಿಯ ಕಾಣಿಕೆಗಳನ್ನು ಸಮರ್ಪಿ ಸುವುದಲ್ಲದೆ, ಕೃಷ್ಣೆಯ ದಕ್ಷಿಣದ ಪ್ರದೇಶವನ್ನೆಲ್ಲ ವರದಕ್ಷಿಣೆಯಾಗಿ ನೀಡಿದನು. ಮಂಗಲಸಮಾರಂಭವು ವಿಜೃಂಭಣೆಯಿಂದ ನೆರವೇರಿತು. ರಾಯನು ರಾಜಧಾನಿಗೆ ತೆರಳಿದನು.

ಶುಭಪರಿಣಾಮಿಯಾದ ಕಲಿಂಗದ ಈ ಮಹಾದಿಗ್ವಿಜಯವು ಐದು ಆರು ವರ್ಷಗಳ ವರೆಗೆ (೧೫೧೨–೧೫೧೮) ನಡೆಯಿತು. ಈ ಅವಧಿಯಲ್ಲಿ ರಾಯನು ಕ್ರೂರ ಶತ್ರುಗಳಿಂದ ಮುಸುಕಿದ ೧೫೦೦ ಮೈಲುಗಳ ಪ್ರದೇ

ಶವನ್ನು ಆಕ್ರಮಿಸಿದನು. ಸಮರಪರಂಪರೆಯು ಮೂರು ಅಂತಸ್ತು ಗಳಾಗಿ ಸಾಗಿತು. ಮೊದಲನೆಯ ದಂಡಯಾತ್ರೆಯು (೧೫೧೨–೧೩) ಉದಯಗಿರಿಯ ಆಕ್ರಮಣದಿಂದ ಕೊನೆಗಂಡಿತು. ರಾಯನು ತಿರುಪತಿಯ ಮೇಲಿಂದ ರಾಜಧಾನಿಗೆ ಮರಳಿದನು (೧೫೧೪). ಅಲ್ಲಿ ಸ್ವಲ್ಪಕಾಲ ವನ್ನು ಕಳೆದು ಎರಡನೆಯ ದಂಡಯಾತ್ರೆಯನ್ನು ಆರಂಭಿಸಿದನು. ಕೊಂಡವೀಡನ್ನು ಕಿತ್ತುಕೊಂಡು (೧೫೧೫) ಬಿಜವಾಡದ ವರೆಗೆ ವಿಜಯ ಯಾತ್ರೆಯನ್ನು ಬೆಳೆಸಿ ವಿಜಯನಗರಕ್ಕೆ ತಿರುಗಿದನು (೧೫೧೬). ಮುಂದಿನ ಸಲ ರಾಯನು ಕೊಂಡಪಲ್ಲಿ, ಸಿಂಹಾಚಲ, ಪೊಟ್ಟನೂರುಗಳನ್ನು ಪಾದಾ ಕ್ರಾಂತಮಾಡಿ ಕಟಕಪುರಿಯ ವರೆಗೆ ತನ್ನ ವಿಜಯಪತಾಕೆಯನ್ನು ಮೆರೆ ಸಿದನು. ಇಲ್ಲಿಗೆ ಕಲಿಂಗ ದಿಗ್ವಿಜಯವು ಪರಿಸಮಾಪ್ತವಾಯಿತು(೧೫೧೭).

ಈ ವಿಜಯಯಾತ್ರೆಯಿಂದ ಬಿಜವಾಡದ ವರೆಗಿನ ತೀರಪ್ರದೇಶ ವೆಲ್ಲವು ವಿಜಯನಗರಸಾಮ್ರಾಜ್ಯದ ಆಧಿಪತ್ಯಕ್ಕೆ ಒಳಪಟ್ಟಿತು. ಗೆದ್ದ ಪ್ರಾಂತಗಳ ಸುವ್ಯವಸ್ಥೆಗಾಗಿ ಯೋಗ್ಯರಾದ ಅಧಿಕಾರಿಗಳು ನಿಯೋಜಿತ ರಾದರು. ಕೈಬಿಟ್ಟುಹೋದ ಕೊಂಡವೀಡನ್ನು ತಿರುಗಿ ಕಸಿದುಕೊಳ್ಳಲು ಗೋವಳಕೊಂಡದ ಶಹನು ಬಲು ಹೆಣಗಿದನು. ಆದರೆ ರಾಯನ ಆಳಿಕೆ ಯಲ್ಲಿ ಅದು ಸಾಧ್ಯವಾಗಲಿಲ್ಲ. ಮುಂದೆಯೊಮ್ಮೆ ಆ ಪ್ರದೇಶದಲ್ಲಿ ಮಹಮ್ಮದೀಯರ ಹಾವಳಿಯು ಹೆಚ್ಚಾಗಲು ಸಾಳುವ ತಿಮ್ಮನು ಅವರ ಸದ್ದನ್ನು ಅಡಗಿಸಿ ಬಂದನು (೧೫೨೦).

ಕಲಿಂಗದ ಕೆಲಸವು ಮುಗಿದ ಬಳಿಕ ರಾಯನು ಸಾಮ್ರಾಜ್ಯದ ಪಶ್ಚಿಮಭಾಗದತ್ತ ತೆರಳಬೇಕಾಯಿತು. ಅಲ್ಲಿ ತುಳುನಾಡಿನ ಅರಸರು ಬಹುಕಾಲದಿಂದ ಸಾಮ್ರಾಜ್ಯಕ್ಕೆ ಉಪದ್ರವಕಾರಕರಾಗಿದ್ದರು. ರಾಯನು ಈ ನಾಡಿನ ಮೇಲೆ ದಂಡಯಾತ್ರೆಯನ್ನು ಕೈಕೊಂಡು ಮಂಗಳೂರನ್ನು ಮುತ್ತಿದನು. ಅಲ್ಲಿಯ ಅರಸನನ್ನು ಯುದ್ಧದಲ್ಲಿ ಸೋಲಿಸಿ ಆತನ ದೀರ್ಘದ್ರೋಹದ ಪ್ರಾಯಶ್ಚಿತ್ತವಾಗಿ ಆತನ ಸಿರಿಯನ್ನು ಹರಣಮಾಡಿ ಆತನ ರಾಜ್ಯವನ್ನು ತನ್ನ ನಾಯಕರಿಗೆ ಹಂಚಿಕೊಟ್ಟನು (೧೫೧೮).[೩]

೩. ನ್ಯೂನಿಝನು ಈ ರಾಜ್ಯದ ಹೆಸರು catuir ಎಂದು ಹೇಳುವನು. ಇದು ಕಾಟೂರು ಸೀಮೆ ಎಂದರೆ ತುಳುನಾಡು ಆಗಿರಬೇಕೆಂದು ಈಚೆಗೆ ಶ್ರೀ. ಈಶ್ವರದತ್ತರು ಸೂಚಿ ಸಿರುವರು. (A H. J. April 1935, p. 59)

# ಹದಿಮೂರನೆಯ ವಿಲಾಸ

# ೩. ಮಹಾರಾಜ ಶ್ರೀಕೃಷ್ಣದೇವರಾಯ

## (೧೫೦೯-೩೦)

### ೨

### ರಾಯಚೂರ ದಿಗ್ವಿಜಯ

ಕಲಿಂಗ ದಿಗ್ವಿಜಯದಲ್ಲಿ ಕೃಷ್ಣದೇವರಾಯನು ಒಂದು ಹೊಡೆತದಿಂದ ಎರಡು ಕಾರ್ಯಗಳನ್ನು ಸಾಧಿಸಿದನು. ಸಾಮ್ರಾಜ್ಯದ ಪ್ರಬಲ ವೈರಿಯಾದ ಗಜಪತಿಯ ಶಕ್ತಿಯನ್ನು ಪ್ರಾಮುಖ್ಯವಾಗಿ ಮುರಬಡಿವುದಲ್ಲದೆ, ಆತನಿಗೆ ಬೆಂಬಲವಾಗಿದ್ದ ಗೋವಳಕೊಂಡ, ಬಿದರ ಮೊದಲಾದ ಸಾಮ್ರಾಜ್ಯದ ಶತ್ರುಗಳನ್ನೂ ಪಕ್ಕೆಯಲ್ಲಿ ಹಣಿದು ಕೆಡಹಿದನು. ಆದರೆ ಇಷ್ಟರಿಂದ ಸಾಮ್ರಾಜ್ಯದ ಎರಡನೆಯ ಪ್ರಧಾನ ವೈರಿಯಾದ ಮುಹಮ್ಮದೀಯರ ಬಲವು ಸಾಕಷ್ಟು ತಗ್ಗಿರಲಿಲ್ಲ. ಅವರ ಅಬ್ಬರವು ಇನ್ನೂ ಹಿರಿದಾಗಿತ್ತು. ಈ ಹಗೆಗಳಲ್ಲಿ ತೀರ ನೆರೆಯಲ್ಲಿದ್ದ ವಿಜಾಪುರದ ಆದಿಲಶಹನು, ರಾಯನ ಸೆಕೆಯು ತಾಗದೆ ಹಾಗೆಯೆ ಸುಖರೂಪವಾಗಿ ಉಳಿದುಕೊಂಡಿದ್ದನು.

ವಿಜಯನಗರದ ಹಂಬಲದ ನೆಲವಾದ ರಾಯಚೂರು-ಮುದಗಲ್ ಪ್ರದೇಶವು ಆತನ ವಶದಲ್ಲಿಯೆ ಇದ್ದಿತು. ಇದು ವಿಜಯನಗರ ಸಮ್ರಾಜರಿಗೆ ಎಂದಿಗೂ ಅಗೌರವವೆನಿಸುವಂತಹ ಸಂಗತಿಯಾಗಿದ್ದಿತು. ಅದರಲ್ಲಿಯೂ ಕೃಷ್ಣದೇವರಾಯನಂತಹ ಪ್ರತಾಪಮೂರ್ತಿಯ ಹೃದಯಕ್ಕೆ ಇದು ಶಲ್ಯವಾಗಿ ಬಾಧಿಸಿದರೆ ಅದು ಸ್ವಾಭಾವಿಕವೆ. ಇದಲ್ಲದೆ ರಾಯನು ಸಾಳುವ ನರಸಿಂಹನ ಮರಣಕಾಲದ ಆಕಾಂಕ್ಷೆಯನ್ನು ಪೂರ್ಣಗೊಳಿಸಿ ಪಿತೃಋಣದಿಂದ ಮುಕ್ತನಾಗಬೇಕಾಗಿದ್ದಿತು. ಆದುದರಿಂದ ರಾಯನು ಸಾಮ್ರಾಜ್ಯದ ಕೀರ್ತಿಗೆ ಕಲಂಕವಾಗಿ ನಾಲ್ವತ್ತು ವರ್ಷಗಳಿಂದ ಹೆರವರ

ಪಾಲಾಗಿದ್ದ ರಾಯಚೂರು-ಮುದಗಲ್ ಕೋಟೆಗಳನ್ನು ಬೇಗನೆ ಕಸಿದು ಕೊಳ್ಳುವ ಸಂಕಲ್ಪವನ್ನು ಮಾಡಿದನು. ಒಂದು ವರ್ಷದ ವರೆಗೆ ಈ ದಂಡಯಾತ್ರೆಯ ಸಿದ್ಧತೆಯು ನಡೆಯಿತು.

ಸಿದ್ಧತೆಯಂತೂ ಪೂರ್ಣವಾಯಿತು. ಆದರೆ ಈ ಉಭಯ ರಾಜ್ಯಗಳಲ್ಲಿ ಶಾಂತತೆಯು ನೆಲೆಸಿದುದರಿಂದ ಬಹಿರಂಗದಲ್ಲಿ ಕದನಕ್ಕೆ ನಿಮಿತ್ತವೊಂದು ಬೇಕಾಯಿತು. ಈ ನಿಮಿತ್ತವು ದೊರೆವುದು ಅಷ್ಟು ಸುಲಭವಾಗಿರಲಿಲ್ಲ. ಅಷ್ಟರಲ್ಲಿ ಒಂದು ಪ್ರಕರಣವು ಉಪಸ್ಥಿತವಾಗಿ ಕಲಹಕ್ಕೆ ಮಾರ್ಗವನ್ನು ಮಾಡಿಕೊಟ್ಟಿತು. ಸಿದ್ದಿ ಮರ್ಕಾರನೆಂಬವನು ಪೋರ್ತುಗೀಜರೊಡನೆ ನಡೆವ ರಾಯನ ಕುದುರೆಯ ವ್ಯಾಪಾರದಲ್ಲಿ ಮಧ್ಯಸ್ಥನಾಗಿದ್ದನು. ಈತನು ರಾಯನಿಂದ ನಾಲ್ವತ್ತು ಸಾವಿರ ವರಹಗಳನ್ನು ದೋಚಿಕೊಂಡು ಹೋಗಿ ಆದಿಲಶಹನ ರಾಜ್ಯದಲ್ಲಿ ಸೇರಿಕೊಂಡನು. ಆತನಿಗೆ ಒಳಗಿಂದ ಶಹನ ಬೆಂಬಲವಿದ್ದಂತೆ ಕಂಡು ಬಂದಿತು. ಮಿತ್ರ ರಾಷ್ಟ್ರಗಳಲ್ಲಿಯ ಸಂಧಿಯ ನಿಯಮಾನುಸಾರವಾಗಿ ಆತನನ್ನು ತನ್ನ ಕೈಗೆ ಒಪ್ಪಿಸಲು ಆಗ್ರಹಪಡಬೇಕು, ಶಹನು ಹಾಗೆ ಮಾಡದೆ ಇದ್ದಲ್ಲಿ ಅದು ಯುದ್ಧವನ್ನು ಹೂಡಲು ನಿಮಿತ್ತವಾಗುವುದು ಎಂದು ತಿಮ್ಮ ಮಂತ್ರಿಯು ಸೂಚಿಸಿದನು. ಆ ಮೇರೆಗೆ ರಾಯನು ಶಹನಿಗೆ ಸಿದ್ದಿ ಮರ್ಕಾರನನ್ನು ತನಗೆ ಒಪ್ಪಿಸಲು ಕೇಳಿದನು. ಆದಕ್ಕೆ 'ಅವನ ಸುದ್ದಿಯನ್ನೇ ನಾನರಿಯೆನೆ'ಂದು ಶಹನು ಉತ್ತರವಿತ್ತನು.

ಕನಲಿದ ರಾಯನು ಓಲಗವನ್ನು ಕರೆದನು. "ಶಹನ ಈ ಔದ್ಧತ್ಯಕ್ಕಾಗಿ ಆತನ ಮೇಲೆ ದಂಡೋಪಾಯವನ್ನು ಕೈಕೊಳ್ಳಲೇ ಬೇಕು" ಎಂದು ಗದ್ದರಿಸಿ ಹೇಳಿದನು. "ನಿಮಿತ್ತವು ಕ್ಷುದ್ರವಾಗಿದೆ; ಅದರ ಮಾನದಿಂದ ಉಪಾಯವು ಉಗ್ರವಾಗಿದೆ" ಎಂದು ಕೆಲ ನಾಯಕರು ಅರುಹಿದರು. ರಾಯನ ನಿಶ್ಚಯವು ಚಲಿಸಲಿಲ್ಲ. ಸಮರವು ನಿಯತವಾಯಿತು. ನೀತಿನಿಪುಣನಾದ ರಾಯನು ತನ್ನ ಈ ಸಂಗ್ರಾಮದ ಸಂಕಲ್ಪವನ್ನು ಕೂಡಲೆ ಬಿದರ, ಗೋವಳಕೊಂಡ, ಅಹಮದನಗರ, ವರ್ಹಾಡದ ಸುಲ್ತಾನರಿಗೆ ತಿಳುಹಿದನು. ಈ ಸುಲ್ತಾನರು ಆದಿಲಶಹನ

ಅಗ್ಗಳಿಕೆಯನ್ನು ಒಳಗೊಳಗೆ ದ್ವೇಷಿಸುತ್ತಿದ್ದರು. ಆದುದರಿಂದ ರಾಯನ ಈ ಕೃತಿಯಿಂದ ಅವರಿಗೆ ಸಂತೋಷವಾಗಿ, ಅವರು ರಾಯನ ವಿಷಯದಲ್ಲಿ ಸ್ನೇಹಭಾವನೆಯನ್ನು ತಾಳಿದರು. ವಿಜಯನಗರದಲ್ಲಿ ಸೇನೆಯ ಪ್ರಯಾಣಭೇರಿಯು ನಿನಾದಿಸಲಾರಂಭಿಸಿತು.

ಮುಂಬೇಸಗೆಯ ಮುಂಜಾವಿನಲ್ಲಿ ವಿಜಯನಗರದ ಮಹಾಸೇನೆಯು ವಿಜಯೋತ್ಸಾಹದಿಂದ ಹೊರಹೊರಟಿತು(೧೫೨೦,ಫೆಬ್ರುವರಿ). ಬಿಲ್ಲು, ಬಾಣ, ಭಲ್ಲೆ, ಕತ್ತಿ, ಕಠಾರಿ, ತುಬಾಕಿ, ಢಾಲು ಮೊದಲಾದ ಕ್ರೂರ ಆಯುಧಗಳಿಂದ ಕರಾಳವಾದ ಮೂವತ್ತು ಸಾವಿರ ರಾವುತರ ಮುಂದಂಡನ್ನು ಕಾಮನಾಯಕನು ಮುಂದೂಡುತ್ತಿದ್ದನು. ಆತನ ಹಿಂದೆ, ಬೇರೆಬೇರೆ ದಳವಾಯಿಗಳು ಸರಿಮಿಗಿಲೆನಿಸುವ ದಂಡಿನೊಡನೆ ಸಾಲುಸಾಲಾಗಿ ನಡೆದಿದ್ದರು. ಎಲ್ಲಕ್ಕೂ ಹಿಂದೆ ಸಾರವತ್ತಾದ ರಾಯನ ಪಥಕವು ಸಡಗರದಿಂದ ಹೆಜ್ಜೆಯನ್ನಿಡುತ್ತಿತ್ತು. ಇದಲ್ಲದೆ ಮುಂದೆ ಮುಂದೆ ಸಂಚರಿಸುವ ಮಾರ್ಗಶೋಧಕ ಪಥಕಗಳು (scouts), ಪಕ್ಕೆಗಳಲ್ಲಿ ನಡೆದು ಬರುವ ರಕ್ಷಕ ಪಥಕಗಳು (guards), ಬೇರೆಬೇರೆ ಸೇವಾ ಪಥಕಗಳು, ಸಾಮಗ್ರೀ ಪಥಕಗಳು, ಮುಖ್ಯಸೇನೆಗೆ ಸಹಾಯವಾಗಿ ಮಾರ್ಗಕ್ರಮಣ ಮಾಡುತ್ತಲಿದ್ದುವು. ಒಟ್ಟಿನಲ್ಲಿ ಎಲ್ಲ ಸೇನಾಪರಿವಾರವು ಹತ್ತು ಲಕ್ಷವಾಗಿದ್ದು ಅದರಲ್ಲಿ ಏಳೂವರೆ ಲಕ್ಷ ದಂಡಾಳುಗಳೂ ೫೫೦ ಆನೆಗಳೂ ಇದ್ದುವು.

ಈ ಸೇನೆಯು ಹನ್ನೊಂದು ದಳಗಳಲ್ಲಿ ವಿಭಾಗಿಸಲಾಗಿತ್ತು. ಈ ದಂಡು ಮುಂದೆ ಮುಂದೆ ಪಯಣಬೆಳೆಸಿದಂತೆ ಆ ಆ ಪ್ರಾಂತಗಳ ದಂಡಾಳುಗಳ ತಂಡತಂಡಗಳು ಬಂದು ಅದಕ್ಕೆ ಕೂಡುತ್ತಿದ್ದುವು. ಸೈನಿಕರ ಉಡುಪುತೊಡುಪುಗಳು ಚಿತ್ರವಿಚಿತ್ರವಾಗಿಯೂ ಅಚ್ಚುಕಟ್ಟಾಗಿಯೂ ಇದ್ದುವು. ಕಾದುವಾನೆಗಳ ಮೈತುಂಬ ಕವಚವಿದ್ದು, ಮೇಲೆ ನಾಲ್ಕು ನಾಲ್ಕು ಭಟರಿಗೆ ಇಂಬುಳ್ಳ ಭದ್ರವಾದ ತೊಟ್ಟಿಲುಗಳು ಬಿಗಿಯಲ್ಪಟ್ಟಿದ್ದುವು. ಈ ಆನೆಗಳ ಕೋರೆಗಳಿಗೆ ಮಸೆದು ಹದನಮಾಡಿದ ಕೂರಲಗುಗಳನ್ನು ಕಟ್ಟಿದ್ದು, ಅವುಗಳ ಇರಿತವು ಬಹು ಭಯಂಕರವಾಗಿ

ದ್ದಿತು. ಇಂತು ಪ್ರಚಂಡವಾದ ಸೇನೆಯು ತರಂಗತರಂಗವಾಗಿ ನೆಲವನ್ನು ಅದುರಿಸುತ್ತ ಸಾಗಿರಲು, ಅರಿಗಳ ಎದೆಗಳು ಸಡಗಿದುವು.

ರಾಯಚೂರು ಒಂದು ಹರದಾರಿ (ಮೂರು ಮೈಲು) ಉಳಿಯಲು, ಮಲ್ಲಾಬಂಡಿಯ[೧] ಬಳಿಯಲ್ಲಿ ವಿಜಯನಗರಸೈನ್ಯವು ವಿಶ್ರಾಂತಿಗಾಗಿ ಬೀಡುಬಿಟ್ಟಿತು. ಅಲ್ಲಿಂದ ಮುಂದೆ ಪಯಣಮಾಡಿ ರಾಯಚೂರ ಪೂರ್ವದಿಕ್ಕಿಗೆ ತಳವೂರಿ ಕೋಟೆಯನ್ನು ಬಿಗಿಯಾಗಿ ಮುತ್ತಿತು.

ರಾಯಚೂರು ಬಹು ಬಲಿಷ್ಠವಾದ ದುರ್ಗವಾಗಿದ್ದಿತು. ಅದು ಕೃಷ್ಣಾ–ತುಂಗಭದ್ರೆಗಳ ನಡುವಣ ಬಯಲುನಾಡಿನಲ್ಲಿ ನೆಲೆಸಿದ್ದು ಆ ಪ್ರದೇಶದ ಆಧಿಪತ್ಯವನ್ನು ಬೀರುವ ಗಂಡುಮೆಟ್ಟಾಗಿದ್ದಿತು. ಬಲ್ಗಲ್ಲು ಗಳಿಂದ ನಿರ್ಮಿತವಾದ, ಭದ್ರವಾದ ಮೂರು ಗೋಡೆಗಳು ಅದನ್ನು ಸುತ್ತುವರಿದಿದ್ದುವು. ನಡುವೆ ಉನ್ನತವಾಗಿ ಗೋಪುರದಂತೆ ತಲೆಯೆತ್ತಿ ನಿಂತುಕೊಂಡ ಒಳಕೋಟೆಯು. ಇದರಲ್ಲಿ ಹನ್ನೆರಡುಕಾಲ ಹರಿವ ಒಂದು ಜಲಪ್ರವಾಹವು ಇದ್ದಿತು. ಇದಲ್ಲದೆ ಅಲ್ಲಲ್ಲಿ ಹೊಂಡಗಳೂ ಬಾವಿಗಳೂ ವಿಪುಲವಾಗಿರುವುದರಿಂದ ನೀರಿನ ಕೊರತೆಯೆ ಇರಲಿಲ್ಲ.

ಕೋಟೆಯಲ್ಲಿ ಐದು ವರ್ಷಗಳವರೆಗೆ ಸಾಲುವಷ್ಟು ಅನ್ನಸಾಮಗ್ರಿ ಯಿದ್ದಿತು. ಇಲ್ಲಿ ಎಂಟು ಸಾವಿರ ದಂಡಾಳುಗಳು, ನಾನೂರು ಕುದುರೆ ಗಳು, ಇಪ್ಪತ್ತು ಆನೆಗಳು, ಮೂವತ್ತು ಕವಣೆಗಳು (ಕಲ್ಲನ್ನೆಸೆವ ಯಂತ್ರಗಳು) ಇದ್ದುವು. ಇದಲ್ಲದೆ ಇನ್ನೂರು ಹಿರಿಹಿರಿಯವಾದ ಫಿರಂಗಿಗಳು ಸುತ್ತಲೂ ಬಿಗುವಿನ ಕೊತ್ತಳಗಳಲ್ಲಿ ಅಣಿಯಾಗಿ ಇರಿಸಲ್ಪ ಟ್ಟಿದ್ದುವು. ರಾಯನು ಬಂದ ವರ್ತಮಾನವನ್ನು ಕೇಳಿದ ಕೂಡಲೆ, ದುರ್ಗಪಾಲನು ಕೋಟೆಯ ಬಾಗಿಲುಗಳಿಗೆ ಗೋಡೆಯನ್ನೇರಿಸಿ ಕೊನೆಯ ವರೆಗೆ ಕಾದುವ ನಿರ್ಧಾರಮಾಡಿದನು.

ಕೋಟೆಯ ಪೂರ್ವಕ್ಕೆ ಕಾದಾಟವು ಬಿರುಸಾಗಿದ್ದಿತು. ರಾಯನು ಅಲ್ಲಿಯೆ ತನ್ನ ಶಿಬಿರವನ್ನು ಸ್ಥಾಪಿಸಿದನು. ರಾಯನ ನಿವಾಸದ ಸುತ್ತಲು ಭದ್ರವಾದ ಮುಳ್ಳುಬೇಲಿಯನ್ನು ನಿಲ್ಲಿಸಿ, ಅದರ ಸುತ್ತಲು ಬಲವಾದ

೧ ದೀ. ಟಿ. ೧೩.

ಕಾವಲನ್ನು ಇರಿಸಿದರು. ಅದರ ಮುಂಬದಿಯಲ್ಲಿ ಎಲ್ಲ ದಂಡನಾಯಕರ ಅಧಿಕಾರಿಗಳ ಶಿಬಿರಗಳು ನೆಲೆಗೊಂಡಿದ್ದುವು. ವಿಜಯನಗರದ ಈ ಪಾಳ್ಯ ದಲ್ಲಿ ವ್ಯವಸ್ಥಿತವಾದ ಬೀದಿಗಳೂ ಓರಣವಾದ ಪೇಟೆಗಳೂ ಸಮೃದ್ಧ ವಾದ ಅಂಗಡಿಗಳ ಸಾಲುಗಳೂ ವಿಸ್ತಾರಗೊಂಡಿದ್ದುವು. ಇಲ್ಲಿ ಬೇಕಾದ ಸೌಕರ್ಯಗಳು ಒದವುತ್ತಿದ್ದುವು. ಬೇಕಾದ ಸರಕುಗಳು ಮಾರಲಿಕ್ಕೆ ದೊರೆಯುತ್ತಿದ್ದುವು. ಅಗಸರು, ಮೇಳದವರು ಮೊದಲುಗೊಂಡು ಎಲ್ಲ ವಿಧದ ಕೆಲಸಗಾರರು ಅನುಕೂಲರಾಗುತ್ತಿದ್ದರು. ಸೊಗಸಿನ ಎಡೆಯಾದ ಈ ನೆಲೆವೀಡನ್ನು ನೋಡುವವರಿಗೆ ಕ್ಷಣಹೊತ್ತು ತಾವು ಭೀಷಣವಾದ ರಣರಂಗದಲ್ಲಿ ನಿಂತಿರದೆ, ವಿಜಯನಗರ ರಾಜಧಾನಿಯಲ್ಲಿಯೆ ಇರುವೆವೋ ಎಂಬ ಭ್ರಮೆಯು ಉಂಟಾಗುತ್ತಿದ್ದಿತು.

ಇಸ್ಮಾಯಿಲ್ ಆದಿಲಶಹನು ರಾಯನನ್ನು ಸೋಲಿಸಿಯೆ ತೀರು ವೆನು ಎಂಬ ಹಮ್ಮಿನಿಂದ ೧,೨೦,೦೦೦ ಕಾಲಾಳು, ೧೮,೦೦೦ ಕುದುರೆ, ೧೫೦ ಆನೆ, ಎಷ್ಟೋ ಫಿರಂಗಿಗಳು ಒಳಗೊಂಡ ದಂಡಿನೊಂದಿಗೆ ಕೃಷ್ಣೆಯ ಉತ್ತರಕ್ಕೆ ಬಂದು ತಳವೂರಿದನು. ರಾಯನು ಹೊಳೆಯನ್ನು ದಾಟಿ ತನ್ನಮೇಲೆ ಏರಿ ಬರಲಿ ಎಂದು ಶಹನು ಸ್ವಲ್ಪಕಾಲ ಪ್ರತೀಕ್ಷೆಯನ್ನು ಮಾಡಿದನು. ಆದರೆ ರಾಯನು ಉಲುಕಾಡಲಿಲ್ಲ. ಅದಕ್ಕೆ ಆತನು ಹೆದರಿಕೊಂಡಿರುವನು ಎಂದು ಯೋಚಿಸಿ, ಕೊನೆಗೆ ಶಹನೆ ಮುಂದೆ ಸರಿದು ಹೊಳೆಯನ್ನು ದಾಟಿ, ರಾಯನ ಶಿಬಿರದಿಂದ ಒಂಬತ್ತು ಮೈಲು ಅಂತರದಲ್ಲಿ ಬೀಡುಬಿಟ್ಟನು. ಈಗ ಹೊಳೆಯು ಆತನ ಹಿಂಬದಿಗೆ ಐದು ಮೈಲಿನಲ್ಲಿತ್ತು. ಇಲ್ಲಿಂದ ಸಹಾಯಕ ದಳವನ್ನು ಕಳುಹಿ ರಾಯಚೂ ರನ್ನು ಉಳುಹಿಕೊಳ್ಳಬೇಕೆಂದು ಶಹನು ಉದ್ದೇಶಿಸಿದ್ದನು. ಶಹನ ಚಲನ ವಲನಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದ ರಾಯನು ಈ ಸಮಯ ಯವನ್ನು ನೋಡಿಕೊಂಡು, ತನ್ನ ಸೇನೆಯನ್ನು ಏಳು ದಳಗಳಾಗಿ ವಿಭಾ ಗಿಸಿ ಶಹನ ಮೇಲೆ ಎರಗಲು ಆಜ್ಞೆಯಿತ್ತನು.

ಕ್ರಿ. ವ. ೧೫೨೦, ಮೇ ೨೦, ಶನಿವಾರ ಈ ಶುಭದಿನದ ಪ್ರಾತಃ ಕಾಲದಲ್ಲಿ ವಿಜಯನಗರದ ಪಾಳ್ಯವೆಲ್ಲ ಮಂಗಲವಾದ ಸಂಗೀತಧ್ವನಿಯಿಂ

ದಲೂ ರಣವಾದ್ಯಗಳ ನಿನಾದದಿಂದಲೂ ಆನೆ-ಕುದುರೆಗಳ ಹುಂಕಾರ ದಿಂದಲೂ ವೀರಭಟರ ಗರ್ಜನೆಯಿಂದಲೂ ಇಡುಗಿತು. ಅತ್ತ ಶಹನ ಬೀಡಿನಿಂದಲೂ ಮಾರ್ದನಿಯು ಏಳತೊಡಗಿತು. ಮರುಕ್ಷಣದಲ್ಲಿ ವಿಜಯ ನಗರದ ದಂಡಾಳುಗಳು ಅರಿಸೈನ್ಯದ ಮೇಲೆ ಮುಗಿಬಿದ್ದಿರು. ಅವರ ರಭಸಕ್ಕೆ ಶಹನ ದಳಗಳು ತತ್ತರಿಸತೊಡಗಿದುವು. ಅಷ್ಟರಲ್ಲಿ ಶಹನ ಫಿರಂಗಿಗಳು ರಾಯನ ಸೈನಿಕರ ಮೇಲೆ ಬೆಂಕೆಯನ್ನು ಕಾರಲಾರಂಭಿಸಿ ದುವು. ಆ ಅಗ್ನಿಪ್ರಳಯವನ್ನು ಇದಿರಿಸುವವರಾರು ? ಪಟಪಟನೆ ಪ್ರಾಣಗಳು ಹಾರತೊಡಗಿದುವು. ರಾಯನ ದಂಡಿನವರು ಚಲಿಸಲಾರಂ ಭಿಸಿದರು. ಕ್ಷಣದಲ್ಲಿ ಓಡಿಹೋಗುವವರ ಸುಗ್ಗಿಯೆ ಎದ್ದಿತು. ತನ್ನ ದಂಡಾಳುಗಳ ಈ ಹೇಡಿತನವನ್ನು ನೋಡಿ ರಾಯನು ರೊಚ್ಚಿಗೆದ್ದನು. ಓಡಿಹೋಗುವವರನ್ನು ಕುರಿತು ಉಚ್ಚಸ್ವರದಿಂದ ಹೀಗೆ ಭಾಷಣ ಮಾಡಿದನು:

"ಎಲವೊ ದೇಶದ್ರೋಹಿಗಳೆ! ವಿಜಯನಗರದ ವಿಶುದ್ಧವಾದ ಕೀರ್ತಿಗೆ ಕಲಂಕವನ್ನು ತರುವಂತಹ ಇದಾವ ಅಧಮಕೃತಿಯನ್ನು ಇಂದು ನೀವು ಆರಂಭಿಸಿರುವಿರಿ? ಇದೊ! ಇಂದು ನಿಮ್ಮ ಸತ್ವಪರೀ ಕ್ಷೆಯ ಸಮಯವೆ ಒದವಿ ಬಂದಿದೆ. ಇಂದು ವಿಜಯನಗರದ ಮಾನವು ಉಳಿಯಬೇಕು ಇಲ್ಲವೆ ಅಳಿಯಬೇಕು. ಪರಮಾತ್ಮನ ಇಚ್ಛೆಯೆ ಇದ್ದರೆ ಇಂದು ಜಗತೀತಲದ ಮೇಲೆ ಶ್ರೇಷ್ಠನೆನಿಸಿದ ಸಾರ್ವಭೌಮನನ್ನು ಸಮರಾಂಗಣದಲ್ಲಿ ಸಂಹರಿಸಿದೆನು ಎಂದು ಆದಿಲಶಹನು ಹೇಳಿಕೊಳ್ಳುವ ಹೊತ್ತು ಒಂದು ವೇಳೆ ಬಂದರೆ ಬರಬಹುದು; ಆದರೆ, ಆತನನ್ನು ಸೋಲಿ ಸಿದೆನು, ಪರಿಭವಕೆ ಗುರಿಯಾಗಿಸಿದೆನು ಎಂಬ ಜಂಭಕ್ಕೆ ಮಾತ್ರ ಎಂದಿಗೂ ಅವಕಾಶವು ಉಂಟಾಗದು ಎಂಬುದನ್ನು ಗಂಟುಹಾಕಿಕೊಳ್ಳಿರಿ. ವಿಜಯ ನಗರದ ವೀರಭಟರು ಕಡಿದ ಬಂಟರೆ ಅಲ್ಲದೆ, ಓಡಬಂಟರಲ್ಲವೆಂಬುದನ್ನು ಇನ್ನೊಮ್ಮೆ ಲೋಕಕ್ಕೆ ಸಾರಿ ಅರುಹಿರಿ."

ರಾಯನ ಈ ಶಬ್ದಗಳಿಂದ ಸೈನ್ಯದಲ್ಲಿ ಮತ್ತೆ ಸ್ಫೂರ್ತಿಯ ಸಂಚಾರ ವಾಯಿತು. ರಾಯನು ಕುದುರೆಯನ್ನೇರಿ ಕಣದಲ್ಲಿ ಮಿಂಚಿನಂತೆ

ಸಂಚರಿಸುತ್ತ, "ಓಡಿಹೋಗುವವರನ್ನು ಕಡಿದು ಚೆಲ್ಲಿರಿ" ಎಂದು ವಿಧಿಸುತ್ತ, ಹಿಂಬರಿವ ಸೇನೆಯೊಂದಿಗೆ ಅರಿಗಡಣದ ಮೇಲೆ ಆವೇಶದಿಂದ ಎರಗಿದನು. ಒಂದು ನಿಮಿಷದಲ್ಲಿ ಸಮರಾಂಗಣದ ದೃಶ್ಯವೆ ಬೇರೆಯಾಯಿತು. ವಿಜಯನಗರದ ವೀರರ ಉತ್ಸಾಹವು ಮೇರೆವರಿಯಿತು. ವಜ್ರಹತಿಯಂತೆ ದುಸ್ಸಹವಾದ ಅವರ ಪ್ರಹಾರಗಳನ್ನು ತಾಳಲಾರದೆ, ಮಹಮ್ಮದೀಯರು ಹೌಹಾರಿ ಶಿಬಿರಸನ್ನಾಹದ ಪರವೆಯನ್ನು ಸಹ ಮರೆತು ದಿಕ್ಕುಗೆಟ್ಟು ಪಲಾಯನಮಾಡತೊಡಗಿದರು. ಕಾಲಯಮನಂತೆ ರಾಯನು ಅವರನ್ನು ಬಿಡಲೊಲ್ಲನು. ರಾಯನ ಆನೆಗಳು ಪ್ರಳಯ ಕೋಲಾಹಲವನ್ನು ಎಬ್ಬಿಸಿದುವು. ಒಬ್ಬ ವೈರಿಯನ್ನೂ ಜೀವದಿಂದ ಉಳಿಯಗೊಡುವುದಿಲ್ಲವೆಂದು ರಾಯನು ಪ್ರತಿಜ್ಞೆಮಾಡಿದಂತೆ ಭಾಸವಾಯಿತು. ಹೊಳೆಯಲ್ಲಿ ಹಾರಿಕೊಂಡರೂ ಪ್ರಾಣಗಳು ಉಳಿಯದಾದುವು. ಕೊನೆಗೆ ಹಗೆಯು ಸಾಕಷ್ಟು ಹಣ್ಣಾದುದನ್ನು ನೋಡಿ ರಾಯನು ಕತ್ತಿಯನ್ನು ಒರೆಗಾಣಿಸಿದನು.

ಇಸ್ಮಾಯಿಲ ಆದಿಲಶಹನು ಕಾದಾಟದಲ್ಲಿ ಪ್ರತ್ಯಕ್ಷವಾಗಿ ಭಾಗವನ್ನು ವಹಿಸದೆ, ದೂರದಿಂದ ಯುದ್ಧವನ್ನು ನಿರೀಕ್ಷಿಸುತ್ತಿದ್ದನು. ದಂಡಿನ ಈ ದುರ್ದೆಸೆಯನ್ನು ನೋಡಿ, ಆತನ ಅಂಗರಕ್ಷಕನಾದ ಅಸದಖಾನನು "ಜೀವವನ್ನು ಉಳುಹಿಕೊಳ್ಳಲಿಕ್ಕೆ ಇದೀಗ ತಕ್ಕ ಸಮಯವು. ಕಾಲಿಗೆ ಬುದ್ಧಿಯನ್ನು ಹೇಳಿರಿ." ಎಂದು ಆತನಿಗೆ ಜಾಣತನದ ಆಲೋಚನೆಯನ್ನು ಸೂಚಿಸಿದನು. ಒಡನೆ ಶಹನು ಆನೆಯನ್ನು ಆಶ್ರಯಿಸಿ ಕಣದಿಂದ ಜಾರಿಹೋದನು. ಸಕಲ ಸನ್ನಾಹ ಸಾಮಗ್ರಿಯಿಂದ ತುಂಬಿದ ಆತನ ಶಿಬಿರವು ಸುಲಭವಾಗಿ ರಾಯನ ಕೈಗೆ ಸಿಕ್ಕಿತು. "ಹಗೆಗಳನ್ನು ಹಿಂಬಾಲಿಸಿ ಅಸ್ತಮಾನದ ಒಳಗಾಗಿ ಕೆಲಸವನ್ನು ಪೂರ್ತಿಯಾಗಿ ಮುಗಿಸಿಯೆ ಬಿಡುವ" ಎಂದು ರಾಯನ ದಂಡನಾಯಕರು ಹಾತೊರೆದರು. ರಾಯನು ಅವರನ್ನು ತಡೆದು "ಈಗ ಅವರಿಗಾದ ಪ್ರಾಯಶ್ಚಿತ್ತವು ಸಾಕು. ಮುಂದಿನ ರಾಯಚೂರ ಮುತ್ತಿಗೆಗೆ ಸಿದ್ಧರಾಗಿರಿ" ಎಂದು ಹುರಿಗೊಳಿಸಿದನು.

ಇಮ್ಮಡಿಸಿದ ಉತ್ಸಾಹದಿಂದ ರಾಯಚೂರ ಮುತ್ತಿಗೆಯು


ಭೀಮಾ ನದಿ
ವಿಜಾಪುರ
ಕಾಡ್ಲೂರು
ಕೃಷ್ಣಾ ನದಿ
ಆದಿಲಶಹನ ಪಾಳ್ಯ
ವಿಜಯನಗರದ ಸೈನ್ಯ
ರಾಯಚೂರು
ಮುದಗಲ್ಲು
ಮಲ್ಲಾಬಂದಿ
ತುಂಗಭದ್ರಾ ನದಿ
ಆನೆಗುಂದಿ
ವಿಜಯನಗರ

ರಾಯಚೂರ ರಣಭೂಮಿ.

ಮುಂದುವರಿಯಿತು. ಕಾಪಿನ ಭಟರು ಕೋಟೆಯನ್ನು ಎಚ್ಚರದಿಂದ ಕಾಯುತ್ತಿದ್ದರು. ಕೋಟೆಯು ಬೇಗ ವಶವಾಗುವ ಚಿಹ್ನಗಳು ತೋರಲಿಲ್ಲ. ವಿಜಯನಗರದವರು ಕಣ್ಣಲ್ಲಿ ಎಣ್ಣೆಯನ್ನು ಹಾಕಿಕೊಂಡು ಸಂದನ್ನು ಹುಡುಕಿದರೂ ದೊರೆಯಲೊಲ್ಲದು. ಅಷ್ಟರಲ್ಲಿ ಒಬ್ಬ ಪೋರ್ತುಗೀಜ ವೀರನು[೧] ರಾಯನಿಗೆ ಸಹಾಯವಾದುದರಿಂದ ವಿಜಯವು ಸುಲಭವಾಯಿತು. ಈತನು ಕುದುರೆಯ ವರ್ತಕನಾಗಿದ್ದು, ಅದೀಗ ರಾಯನ ಶಿಬಿರಕ್ಕೆ ಬಂದಿದ್ದನು. ರಾಯನು ಈತನನ್ನು ಸತ್ಕರಿಸಿ ತನ್ನಲ್ಲಿ ಇರಿಸಿಕೊಂಡಿದ್ದನು. ಈತನು "ಇಲ್ಲಿಯೆ ಹೀಗೆ ಸ್ವಲ್ಪ ಕೋಟೆಯನ್ನು ಸುತ್ತಿ ಬರುವೆನು" ಎಂದು ಆಗ್ರಹತೊಟ್ಟು ರಾಯನಿಂದ ಅಪ್ಪಣೆಯನ್ನು ಪಡೆದುಕೊಂಡು, ತನ್ನ ಇಪ್ಪತ್ತು ಜನ ಗುರಿಕಾರರೊಂದಿಗೆ ಕೋಟೆಯನ್ನು ನಿಟ್ಟಿಸುತ್ತ ಹೊರಟನು.

ಆಗ ಈ ಗುರಿಕಾರರು ಕೊತ್ತಳಗಳ ಮೇಲೆ ಮೈಮರೆತು ನಿಂತಿದ್ದ ಕಾವಲುಗಾರರನ್ನು ನೋಡಿ, ತಮ್ಮ ತುಬಾಕಿಯ ಗುರಿಯನ್ನಿಟ್ಟು ಹಕ್ಕಿಗಳಂತೆ ಪಟಪಟನೆ ಹೊಡೆದು ಕೆಡಹತೊಡಗಿದರು. ಉಳಿದ ಕಾವಲುಗಾರರು ಹೆದರಿ ಕೋಟೆಯೊಳಗೆ ಓಡಿ ಹೋದರು. ಆಗ ರಾಯನ ದಂಡಾಳುಗಳು ಕೋಟೆಗೆ ಮುಗಿಬಿದ್ದು, ಗೋಡೆಯ ಕಲ್ಲುಗಳನ್ನು ಸಡಿಲಿಸಲಾರಂಭಿಸಿದರು. ಒಳಗೆ ಗೊಂದಲವೇ ಗೊಂದಲವೆದ್ದಿತು. ಹುಡೆಯ ಮೇಲಿನ ತೋಪುಗಳು ಹಾರಿದರೂ ಅವು ಕೋಟೆಯನ್ನು ತಬ್ಬಿಕೊಂಡಿದ್ದ ರಾಯನ ಸೈನಿಕರಿಗೆ ತಾಗದೆ ಹುಸಿಯಾದುವು.

ಮರುದಿನ ಹೆಚ್ಚು ರಭಸದಿಂದ ಏರಾಟವು ನಡೆಯಿತು. ವಿಜಯನಗರದ ಹಾರೆ–ಗುದ್ದಲಿಗಳಿಗೆ ಹೊರ ಕೋಟೆಯು ಅದುರಿ ಅದುರಿ ಬಾಯಿ ಬಿಟ್ಟಿತು. ಕಾವಲುಗಾರರು ಒಳಗೊಳಗೆ ಓಡತೊಡಗಿದರು. ದುರ್ಗಪಾಲನು ಅವರಿಗೆ ಧೈರ್ಯ ಹೇಳುತ್ತ ಮುಂದೆ ಬಂದನು. ಅಷ್ಟರಲ್ಲಿ ವಿಜಯನಗರದ ಒಂದು ಗುಂಡು ಬಂದು ಆತನನ್ನು ನೆಲಕ್ಕುರುಳಿಸಿತು. ದುರ್ಗಪಾಲನ ಪತನದಿಂದ ಅರಿಗಳು ಗರ್ಭಗಳಿತರಾದರು. ದೈನ್ಯದಿಂದ ಕರುಣೆಯನ್ನು ಬೇಡುತ್ತ ರಾಯನಿಗೆ ಮೊರೆಹೊಕ್ಕರು.

---

೧. ಈತನ ಹೆಸರು Christavao de Figueiredo

ರಾಯನು ಮರುದಿನ ಸಡಗರದಿಂದ ಪುರವನ್ನು ಪ್ರವೇಶಿಸಿದನು. ಕೂಡಲೆ ಊರ ಹಿರಿಯರನ್ನು ಕರೆಸಿ "ನನ್ನವರಿಂದ ಊರ ಜನರಿಗೆ ಎಷ್ಟೂ ತೊಂದರೆಯಾಗದು. ಇಷ್ಟವುಳ್ಳವರು ಯಥಾಪ್ರಕಾರ ಸುಖ ವಾಗಿ ಊರಲ್ಲಿ ಇದ್ದುಕೊಳ್ಳಬಹುದು. ಬೇಡಾದವರು ಬಿಟ್ಟು ಹೋಗ ಬಹುದು. ಯಾರ ಪ್ರಾಣಕ್ಕೂ ಧನಕ್ಕೂ ಮಾನಕ್ಕೂ ನನ್ನಿಂದ ಬಾಧೆ ಯಾಗದು." ಎಂದು ಆಶ್ವಾಸನವನ್ನಿತ್ತನು. ರಾಯನ ಈ ಉದಾರ ನೀತಿಯಿಂದ ಜನರು ನಿರ್ಭಯರಾಗಿ ಆತನನ್ನು ಕೊಂಡಾಡಿದರು.

ಆದಿಲಶಹನನ್ನು ಸೋಲಿಸಿದಂದಿನಿಂದ ಇಪ್ಪತ್ತನೆಯ ದಿನಕ್ಕೆ ರಾಯನು ರಾಯಚೂರ ಕೋಟೆಯಲ್ಲಿ ಕಾಲೂರಿದನು.

ರಾಯಚೂರಂತಹ ಬಲುಹಿನ ಕೋಟೆಯನ್ನು ರಾಯನು ಜಯಿಸಿದ ನೆಂಬ ವಾರ್ತೆಯು ದಿಗಂತಗಳಿಗೆ ಪಯಣಮಾಡಿ ಆತನಿಗೆ ಹೆಚ್ಚಿನ ಗೌರವ ವನ್ನು ತಂದು ಕೊಟ್ಟಿತು. ಮಿಕ್ಕ ಸುಲ್ತಾನರು ಆದಿಲಶಹನ ತೇಜೋ ಭಂಗವಾದುದಕ್ಕೆ ಹಿಗ್ಗಿದರು. ಆದರೆ ರಾಯನ ಪ್ರಭಾವವು ಬೆಳೆಯಿತು ಎಂದು ಮತ್ಸರಗೊಂಡರು. ರಾಯನ ಈ ವಿಜಯವನ್ನು ಅಭಿನಂದಿ ಸುತ್ತ, "ನೀವು ಮುಂದೆ ಸಮರವನ್ನು ಸಾಗಿಸಬಾರದು; ಆದಿಲಶಹ ನಿಂದ ಗೆದ್ದುಕೊಂಡುದನ್ನೆಲ್ಲ ಆತನಿಗೆ ತಿರುಗಿ ಸಲ್ಲಿಸಬೇಕು; ನೀವಿದನ್ನು ಮನ್ನಿಸದಿದ್ದರೆ ನಾವೆಲ್ಲರೂ ಆದಿಲಶಹನನ್ನು ಕೂಡಿ ನಿಮ್ಮ ಮೇಲೆ ದಂಡಯಾತ್ರೆಯನ್ನು ಮಾಡಬೇಕಾಗುವುದು;" ಎಂದು ಅವರು ರಾಯ ನಿಗೆ ತಿಳುಹಿದರು.

ಇಂತಹ ಬೆದರಿಕೆಗೆ ರಾಯನು ಸೊಪ್ಪು ಹಾಕುವನೆ? "ನಾನು ಆದಿಲಶಹನಿಗೆ ಮಾಡಿದ ಪಾರುಪತ್ಯವು ತಕ್ಕುದಾಗಿದೆ. ನಾನು ಕೊಂಡು ದರಲ್ಲಿ ಒಂದು ರೆಂಬೆಕಡ್ಡಿಯನ್ನೂ ತಿರುಗಿ ಬಿಡೆನು. ತಾವುಗಳು ಆತನಿ ಗಾಗಿ ಇಷ್ಟೇಕೆ ಆಯಾಸಪಡುವಿರಿ? ಇನ್ನೂ ಕೆಲವು ದಿನಗಳಲ್ಲಿ ನಾನೇ ನಿಮ್ಮ ನಿಮ್ಮಗಳ ಸಂದರ್ಶನಕ್ಕಾಗಿ ಐತರುವೆ;" ಎಂದು ಆತನು ಉತ್ತರ ವನ್ನು ಕಳುಹಿದನು. ಬಳಿಕ ರಾಯನು ಕೆಲದಿನ ರಾಯಚೂರಲ್ಲಿ ನಿಂತು, ಕೋಟೆಯನ್ನು ಭದ್ರಪಡಿಸಿ, ಆ ಪ್ರದೇಶದಲ್ಲಿ ವ್ಯವಸ್ಥೆಯನ್ನು ಸ್ಥಾಪಿಸಿ ರಾಜಧಾನಿಗೆ ಮರಳಿದನು.

ರಾಯಚೂರ ವಿಜಯವು ವಿಜಯನಗರ ಮತ್ತು ಮಹಮ್ಮದೀಯ ರಾಷ್ಟ್ರಗಳ ಚರಿತ್ರೆಯಲ್ಲಿ ಹಲವು ಬಗೆಯಿಂದ ಕ್ರಾಂತಿಕಾರಕವಾಗಿದೆ. ಇದರಿಂದ ವಿಜಯನಗರದ ಪ್ರಭಾವವು ಅತಿಶಯವಾಗಿ ಬೆಳೆಯಿತು. ಇದರಿಂದ ವಿಜಯನಗರ ರಾಷ್ಟ್ರದಲ್ಲಿ ಅಭೂತಪೂರ್ವವಾದ ಶಕ್ತಿ ಸಂಚಾರವಾಗಿ ಅದು ಮುಂದೆ ಆಳಿಯ ರಾಮರಾಯನ ಆಳಿಕೆಯಲ್ಲಿ ಇತೋಪ್ಯಧಿಕವಾದ ವಿಜಯ-ಪರಾಕ್ರಮಗಳನ್ನು ಸಾಧಿಸಲು ಸಮರ್ಥ ವಾಯಿತು. ಮಹಮ್ಮದೀಯ ರಾಷ್ಟ್ರಗಳ ಮೇಲೆ, ವಿಶೇಷವಾಗಿ ವಿಜಾಪುರ ರಾಜ್ಯದ ಮೇಲೆ ಈ ಪರಾಭವದ ಆಘಾತವು ಬಹು ದಾರುಣ ವಾಯಿತು. ಬೆಳೆಯುತ್ತಿರುವ ಅವರ ರಾಜ್ಯಗಳು ಕೆಲಕಾಲ ಕುಗ್ಗಿದಂತಾ ದುವು. ಆದಿಲಶಹನನ್ನಂತೂ ಈ ಪೆಟ್ಟು ನೆಲಕ್ಕೆ ಕಚ್ಚಿರಿಸಿತು. ಅಂಬ ರಕ್ಕೆ ಅಡರುವ ಆತನ ಮಹತ್ವಾಕಾಂಕ್ಷೆಗಳೆಲ್ಲ ಮಾಯವಾಗಿ, ಹೇಗಾ ದರೂ ಮಾನವುಳಿಸಿಕೊಂಡು ಬದುಕಿರಬೇಕಾದರೆ ಆತನಿಗೆ ಕೃತಾರ್ಥ ವಾಯಿತು.

ಕೆಲದಿನಗಳಾಗಲು ಪರಾಭವದ ಅಪಮಾನದಿಂದ ಸಿಡಿಮಿಡಿಗೊಂಡ ಆದಿಲಶಹನು ರಾಯನಲ್ಲಿಗೆ ರಾಯಭಾರಿಯನ್ನು ಕಳುಹಿ, "ನೀವು ನಮ್ಮ ಉಭಯ ರಾಷ್ಟ್ರಗಳಲ್ಲಿಯ ಸಂಧಿಯನ್ನು ಮುರಿದು, ಶಾಂತಿಯನ್ನು ಭಂಗಿಸಿದಿರಿ; ನನ್ನ ರಾಜ್ಯವನ್ನು ಉಧ್ವಸ್ತಗೈದಿರಿ; ಈ ಹಾನಿಯನ್ನು ತುಂಬಿಕೊಡಬೇಕು; ಕೊಂಡ ಸುಲಿಗೆಯನ್ನು ತಿರುಗಿ ಸಲ್ಲಿಸಬೇಕು; ರಾಯಚೂರನ್ನು ಬಿಡಬೇಕು;" ಎಂದು ಕೇಳಿದನು. ಅದಕ್ಕೆ ರಾಯನು "ನಿಮ್ಮ ಮಾತಿಗೆ ನಾನು ಹೊರತಾಗಿಲ್ಲ; ನಿಮ್ಮ ಇಷ್ಟದಂತೆ ಮಾಡುವೆ. ಆದರೆ ನೀವು ಮಾತ್ರ ನನ್ನಲ್ಲಿಗೆ ಬಂದು ನನ್ನ ಕಾಲಿಗೆ ಮುದ್ದಿಡಬೇಕು;" ಎಂದು ತಿಳುಹಿದನು.

ಇದಕ್ಕೆ ಉತ್ತರವಾಗಿ ಶಹನು, "ನಿಮ್ಮ ಇಚ್ಛೆಯು ನನಗೆ ಮಾನ್ಯ ವಿದೆ; ಆದರೆ ನಿಮ್ಮ ರಾಜಧಾನಿಯವರೆಗೆ ಬರಲು ನನಗೀಗ ಅನುಕೂಲ ವಿಲ್ಲ;" ಎಂದು ಅರುಹಿದನು. ಆ ಮೇಲೆ ರಾಯನು "ಬೇಡ, ಬೇಡ; ನನ್ನ ರಾಜ್ಯದ ಸೀಮೆಯ ವರೆಗಾದರೂ ನೀವು ಬನ್ನಿ; ನಾನಲ್ಲಿಗೆ ನಿಮ

ಗಾಗಿ ಕಾಯುವೆ;" ಎಂದು ಹೇಳಿಕಳುಹಿ ಮುದಗಲ್ಲಿಗೆ ಪ್ರಯಾಣ ಮಾಡಿದನು. ಅಲ್ಲಿಂದ ವಿಜಾಪುರಕ್ಕೆ ಬಿಜಯಂಗೈದನು. ಶಹನು ಬರುವ ಚಿಹ್ನಗಳು ತೋರದಿರಲು, ವಿಜಾಪುರವನ್ನು ವಿಧ್ವಂಸಗೊಳಿಸಿ ಮರಳಿ ಮುದಗಲ್ಲಿಗೆ ತಿರುಗಿದನು. ಇದನ್ನು ನೋಡಿ ಶಹನು ವಿಜಾಪುರಕ್ಕೆ ಬಂದನು.

ಮುಂದೆ ಅಸದಖಾನನೆಂಬ ವಿಶ್ವಾಸಘಾತಕನಾದ ವಿಜಾಪುರದ ಸರದಾರನು ಒಡಂಬಡಿಕೆಯ ನೆವವನ್ನು ಮುಂದೆ ಮಾಡಿಕೊಂಡು ರಾಯನಲ್ಲಿಗೆ ಬಂದನು. ಆಗ ಸಲಾಬತಖಾನನೆಂಬ ಸರದಾರನು ರಾಯನ ಸೆರೆಯಲ್ಲಿದ್ದನು. ಆತನಿಗೂ ಅಸದಖಾನನಿಗೂ ಮೊದಲಿನಿಂದ ನಡೆದು ಬಂದ ಬದ್ಧ ವೈರವಿದ್ದಿತು. "ಶಹನ ಈ ಚಾಪಲ್ಯಕ್ಕೆ ಈ ಸಲಾಬತ ಖಾನನೆ ಕಾರಣನು. ಈತನು ಗುಪ್ತವಾಗಿ ಕಳುಹುತ್ತಿರುವ ಸೂಚನೆಯಂತೆ ಶಹನು ವರ್ತಿಸುತ್ತಿರುವನು." ಎಂದು ಹೇಳಿ ಅಸದಖಾನನು ರಾಯನ ಮನಸ್ಸನ್ನು ಕಲುಷಿತವಮಾಡಿ,ಆತನಿಂದ ಸಲಾಬತಖಾನನನ್ನು ಕೊಲ್ಲಿಸಿದನು. ಅಲ್ಲಿಂದ ಅಸದಖಾನನು ಶಹನ ಬಳಿಗೆ ಜಾರಿ ಬಂದು ರಾಯನು ಸಲಾಬತಖಾನನನ್ನು ಕೊಂದ ವರ್ತಮಾನವನ್ನು ಸುಳ್ಳು ಸುಳ್ಳಾಗಿ ಹೇಳಿ, ಶಹನ ಮನಸ್ಸನ್ನು ದೂಷಿತವಮಾಡಿದನು. ಆದರೆ ಮುಂದೆ ಬೇಗನೆ ಆತನ ನೀಚತನವು ಹೊರಬೀಳುವ ಸಂದರ್ಭವು ಬರಲು, ಆತನು ಬೆಳಗಾವಿಗೆ ಓಡಿದನು.

ಇತ್ತ ರಾಯನು ಅಸದಖಾನನನ್ನು ನಂಬಿ, ತನ್ನ ರಾಜ್ಯದ ಗಡಿಯಲ್ಲಿ ಆದಿಲಶಹನಿಗಾಗಿ ಕಾದು ಕಾದು ಬೇಸತ್ತನು. ಕೊನೆಗೆ ಖಾನನ ಮೋಸವು ತಿಳಿಯಲು, ಕಿಡಿಕಿಡಿಯಾಗಿ ಶಹನ ರಾಜ್ಯದಲ್ಲಿ ನುಗ್ಗಿದನು. ಊರುಗಳನ್ನು ಹಾಳುಮಾಡುತ್ತ, ಹಾಗೆಯೆ ಕಲಬುರ್ಗಿಯ ವರೆಗೆ ಸಾಗಿದನು. ಕಲಬುರ್ಗಿಯ ದಂಡನ್ನು ಸೋಲಿಸಿ, ಕೋಟೆಯನ್ನು ನೆಲಸಮಮಾಡಿ, ಮೂಲೆಗುಂಪಾಗಿ ಉಳಿದುಕೊಂಡಿದ್ದ ಬಹಮನೀ ವಂಶದ ರಾಜಕುಮಾರನನ್ನು ಪಟ್ಟಕ್ಕೆ ಕೂಡಿಸಿದನು. ಅಸ್ತಂಗತವಾಗುತ್ತಲಿರುವ ಬಹಮನೀ ಅರಸೊತ್ತಿಗೆಯನ್ನು ಹೀಗೆ ಪುನರುಜ್ಜೀವನ

ಮಾಡುವುದರಿಂದ ತನ್ನ ಪ್ರಭಾವವು ಬೆಳೆದು, ಇದಕ್ಕೆ ಅಂಕಿತ ಅರಸರಾದ ಮಿಕ್ಕ ಸುಲ್ತಾನರ ವರ್ಚಸ್ಸು ತಾನಾಗಿಯೆ ಕಡಿಮೆಯಾಗುವುದೆಂದು ನೀತಿಕುಶಲನಾದ ರಾಯನು ಬಗೆದನು. ಆದರೆ ಈ ಅರಸೊತ್ತಿಗೆಯು ಲ್ಲಿಯೆ ಮೊದಲು ಏನೂ ಜೀವಕಳೆಯಿಲ್ಲದುದರಿಂದ ರಾಯನ ಎಣಿಕೆಯು ಸಫಲವಾಗಲಿಲ್ಲ. ಕಲಬುರ್ಗಿಯ ಮೇಲಿನ ಈ ವಿಜಯದ ಸ್ಮಾರಕ ವಾಗಿ ರಾಯನು 'ಯವನರಾಜ್ಯಸ್ಥಾಪನಾಚಾರ್ಯ' ಎಂಬ ಬಿರು ದನ್ನು ಧರಿಸಿದನು. ಇಷ್ಟೆಲ್ಲವನ್ನು ಮುಗಿಸಿ ರಾಯನು ರಾಜಧಾನಿಗೆ ತೆರಳಿದನು (೧೫೨೧).

ಮುಂದೆ ಮೂರು ನಾಲ್ಕು ವರ್ಷ ಕೃಷ್ಣದೇವರಾಯನು ಯಾವ ತೊಂದರೆಯಿಲ್ಲದೆ ಶಾಂತಿಯಿಂದಲೂ ಸುಖಸಂಕಥಾವಿನೋದದಿಂದಲೂ ರಾಜ್ಯವಾಳಿದನು. ಈ ಕಾಲದಲ್ಲಿ ರಾಯನು ದಕ್ಷಿಣ ರಾಜ್ಯದಲ್ಲಿ ಮಹಾ ಸಂಚಾರ ಹೊರಟು, ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ, ದಾನ ಮೊದಲಾದ ಅನೇಕ ಧರ್ಮಕಾರ್ಯಗಳನ್ನು ಮಾಡಿದನು.

ನಡುವೆ, ಲಂಕೆಯಲ್ಲಿ ರಾಜ್ಯಕ್ರಾಂತಿಯ ಗಲಭೆಯು ಎದ್ದಿತು. ಅಲ್ಲಿಯ ಅರಸನಾದ ವಿಜಯಬಾಹುವು ಪದಚ್ಯುತನಾಗಿ, ಆತನ ಮಕ್ಕಳಲ್ಲಿ ಪಟ್ಟಕ್ಕಾಗಿ ಕಲಹಗಳು ನಡೆದಿದ್ದುವು. ಕೊನೆಗೆ ರಾಯನ ಸಹಾಯದಿಂದ ಹಿರಿಯ ಮಗನಾದ ಭುವನೈಕಬಾಹುವಿಗೆ ಪಟ್ಟವಾಗಿ ಶಾಂತತೆ ಯುಂಟಾಯಿತು (೧೫೨೨-೩).

ಈ ನಡುವೆ ಕಪಟನಟನಾದ ಅಸದಖಾನನು ಸ್ವತಂತ್ರವಾಗಿ ಪೋರ್ತುಗೀಜರಿಂದ ಗೋವೆಯನ್ನು ಕಸಿದುಕೊಳ್ಳಲು ಹೊಂಚುಹಾಕಿ ದನು. ಆತನಿಗೆ ಪ್ರತಿಕಕ್ಷಿಯಾಗಿ ರಾಯನು ಸಾಳುವ ತಿಮ್ಮನನ್ನು ಅಲ್ಲಿಗೆ ಕಳುಹಿದನು. ಆದರೆ ಆತನು ಸೋತು ತಿರುಗಿ ಬರಬೇಕಾಯಿತು. ಮರುವರ್ಷ ಗೋವೆಯು ಅಸಖಾನನ ಕೈಸೇರಿತು (೧೫೨೪).

ತನ್ನ ಹಿಂದೆ ತನ್ನ ಮಗನಿಗೇ ಪಟ್ಟವು ಸ್ಥಿರವಾಗಬೇಕೆಂಬುದು ರಾಯನ ಆಕಾಂಕ್ಷೆಯಾಗಿದ್ದಿತು. ಆದುದರಿಂದ ರಾಯನು ತನ್ನ ಆರು

ವರ್ಷದ ತಿರುಮಲದೇವರಾಯನೆಂಬ ಮಗುವನ್ನು ಬಹು ಸಂಭ್ರಮ ದೊಂದಿಗೆ ಪಟ್ಟಾಧಿಕಾರಿಯಾಗಿಯೂ ಯುವರಾಜನಾಗಿಯೂ ಹುದು ವರಸಾಗಿಯೂ (Co-ruler) ನೇಮಿಸಿದನು. ಮುಂದೆ ಎಂಟು ತಿಂಗಳು ಗಳಲ್ಲಿ ಈತನು ವಿಷಪ್ರಯೋಗದಿಂದ ಮರಣವೈದಿದನು. ಆಗ ರಾಯ ನಿಗಾದ ಶೋಕಕ್ಕೆ ಪಾರಾವಾರವೆ ಇರಲಿಲ್ಲ. ಈ ಕೃತ್ಯದಲ್ಲಿ ಸಾಳುವ ತಿಮ್ಮನ ಮಗನಾದ ತಿಮ್ಮದಣ್ಣಾಯಕನ ಅಂಗವಿದೆಯೆಂದು ರಾಯನಿಗೆ ಬಲವಾದ ಸಂಶಯವು ಬಂದಿತು.

ದಾರುಣವಾದ ದುಃಖಜ್ವಾಲೆಯಿಂದ ಬೆಂದ ರಾಯನು ಸಾಳುವ ತಿಮ್ಮನನ್ನೂ ಅತನ ಇಬ್ಬರು ಮಕ್ಕಳನ್ನೂ ಓಲಗಕ್ಕೆ ಕರೆತರಿಸಿ, ತಿಮ್ಮ ಮಂತ್ರಿಯನ್ನು ಕುರಿತು, “ ಅಪ್ಪಾಜಿ, ನೀವು ನನ್ನ ಹಿರಿಯರು, ನನ್ನ ಗುರುಗಳು, ನನ್ನ ಬಂಧುವು, ನನ್ನ ಸರ್ವಸ್ವವು ನೀವೆ ಎಂದು ನಾನು ಇದುವರೆಗೆ ನಿಮ್ಮನ್ನೇ ನಂಬಿಕೊಂಡಿದ್ದೆನು. ಅಪ್ಪಾಜಿ, ನೀವೇ ನನ್ನ ಪ್ರಾಣದಾತರಲ್ಲವೆ? ನನಗೆ ಈ ಸಾಮ್ರಾಜ್ಯಪಟ್ಟವನ್ನು ಕಟ್ಟಿದವರು ಅಪ್ಪಾಜಿ, ನೀವೆ, ನೀವೇ ಅಲ್ಲವೆ? ಈ ವಿಜಯನಗರಸಾಮ್ರಾಜ್ಯದ ಗೌರವವೆಲ್ಲವು ಅಪ್ಪಾಜಿ, ನಿಮ್ಮದೇ ಅಲ್ಲವೆ? ಹೀಗಿದ್ದು ಅಕಟಾ! ನೀವು, ನೀವು ಕುಳಿತುಕೊಂಡು ಹೀಗೆ ನನ್ನ ಭಾವನೆಗೆ ಭೇದವನ್ನು ಬಗೆಯ ಬೇಕೆ? ” ಎಂದು ವ್ಯಾಕುಲವಾಗಿ ನುಡಿದು ಆ ಮೂವರನ್ನು ಸೆರೆಯ ಲ್ಲಿರಿಸಿದನು. ತಿಮ್ಮಣ್ಣದಣ್ಣಾಯಕನು ಸೆರೆಯಿಂದ ಪಾರಾಗಿ ಬಂಡಾಯ ವನ್ನೆಬ್ಬಿಸಿದನು. ಅದಕ್ಕೆ ರಾಯನು ಅತನನ್ನು ಹಿಡಿದುತರಿಸಿ ವಧಸ್ಥಾನದಲ್ಲಿ ಆ ಮೂವರ ಕಣ್ಣುಗಳನ್ನು ಕೀಳಿಸಿ ಮತ್ತೆ ಬಂಧನದಲ್ಲಿ ರಿಸಿದನು (೧೫೨೪).

ಹೀಗೆ ರಾಯನು ತಿಮ್ಮ ಮಹಾಮಂತ್ರಿಯನ್ನಗಲಿ ನಿರಾಧಾರ ನಾದ ಸುಸಂಧಿಯನ್ನು ನೋಡಿಕೊಂಡು, ಅರ್ಥಹಾನಿ-ಮಾನಹಾನಿಗ ಳೆಂಬ ಇಬ್ಬಗೆಯ ಬೇಗೆಯಿಂದ ಬೇಯುತ್ತಿದ್ದ ಇಸ್ಮಾಯಿಲ ಆದಿಲ ಶಹನು ರಾಯಚೂರನ್ನು ಹಿಡಿದುಕೊಳ್ಳಲು ಹೊರಟನು. ಈ ಸುದ್ದಿ ಯನ್ನು ಕೇಳಿ ರಾಯನು ನಿಮಿಷಮಾತ್ರವೂ ಅಲಸದೆ, ನವಸನ್ನಾಹಿತ

ಸೈನ್ಯದೊಂದಿಗೆ ವಾಯುವೇಗದಿಂದ ರಾಯಚೂರಿಗೆ ಬಂದು ತಲುಪಿದನು (೧೫೨೭). ರಾಯನ ಆಗಮನವಾರ್ತೆಯನ್ನು ಕೇಳಿದೊಡನೆ ಶಹನು ಪಲಾಯನೋತ್ಸಾಹವನ್ನು ಪ್ರಕಟಿಸಿದನು. "ಎಲೇ ಭಾಷೆಗೆ ತಪ್ಪುವವನೆ! ನೀನು ಎರಡುಸಲ ನನ್ನನ್ನು ವಂಚಿಸಿ ಮೋರೆ ತಪ್ಪಿಸಿದೆ. ಜೋಕೆ! ನಿನ್ನನ್ನು ನನ್ನ ಅಡಿಯ ಮೇಲೆ ಉರುಳಾಡುವಂತೆ ಮಾಡಲು ಇನ್ನೊಮ್ಮೆ ದಂಡಯಾತ್ರೆ ಮಾಡುವೆ!" ಎಂದು ರಾಯನು ಆತನಿಗೆ ಹೇಳಿ ಕಳುಹಿದನು.

ಮಳೆಗಾಲವು ಸಮೀಪಿಸಿದುದರಿಂದ ರಾಯನು ರಾಜಧಾನಿಗೆ ಮರಳಿ ಬಂದು ಶಹನ ಶಾಸನದ ಸಿದ್ಧತೆಯನ್ನು ನಡೆಸಿದನು. ಫಿರಂಗಿಗಳ ಹಾಗೂ ರಾವುತರ ದಳಗಳನ್ನು ಹೆಚ್ಚಿಸಿದನು. ಪೋರ್ತುಗೀಜರೊಡನೆ ಸಂಧಾನವನ್ನು ಬೆಳೆಸಿ ಬೆಳಗಾವಿಯನ್ನು ಕಸಿಯಲು ಉದ್ದೇಶಿಸಿದನು. ಇಷ್ಟರಲ್ಲಿ ದೈವದುರ್ವಿಪಾಕದಿಂದ ರಾಯನು ರೋಗಪೀಡಿತನಾಗಿ ಅಕಾಲಮೃತ್ಯುವಶನಾದನು. (೧೫೩೦). [೩]

ವಿ ಜ ಯ ನ ಗ ರ ಸಾ ಮ್ರಾ ಜ್ಯ ದ ಭಾ ಗ್ಯ ರ ವಿ ಯು ಗ ಗ ನ ಮ ಧ್ಯ ದಿಂ ದ ಫ ಕ್ಕ ನೆ ಅ ಸ್ತಾ ಚ ಲ ಕ್ಕಿ ಳಿ ದ ನು!

೩. ಆಗ ರಾಯನ ವಯಸ್ಸು ಸುಮಾರು ೪೨.

## ಹದಿನಾಲ್ಕನೆಯ ವಿಲಾಸ

# ೩. ಮಹಾರಾಜ ಶ್ರೀಕೃಷ್ಣದೇವರಾಯ
# (೧೫೦೯-೩೦)

೩

## ವಿಭೂತಿಮತ್ತ್ವ

ರಾಯನ ನಿಲುವಿಕೆಯು ಮಧ್ಯಮವಾದುದು. ಕೆಂಪಾದ ನ್ಯೆ ಬೆಳಕು. ಶುಭವಾದ ರೂಪು. ಉಕ್ಕಿನಂತಹ ಶರೀರವು, ದುಂಡಾದ ದೇಹ ಯಷ್ಟಿ. ಮೋರೆಯ ಮೇಲೆ ಮೈಲಿಯ ಕಲೆಗಳು. ರಾಯನು ದಿನಾಲು ನಸುಕಿನಲ್ಲೆದ್ದು ಎಳ್ಳೆಣ್ಣೆಯನ್ನು ಕುಡಿದು ಭಾರವನ್ನೆತ್ತುವುದು,ಕತ್ತಿಯ ಕೈ,ಕುದುರೆಯ ಸವಾರಿ ಮೊದಲಾದ ಗರಡಿಯ ಸಾಧಕಗಳನ್ನು ಮಾಡು ವನು.ಆತನದು ಪ್ರಸಾದಪೂರ್ಣವಾದ ವೃತ್ತಿಯು.ಉಲ್ಲಾಸಪ್ರಿಯವಾದ ಸ್ವಭಾವವು. ನಯವಿನಯಸಂಪನ್ನನು, ಆದರಾತಿಥ್ಯಶೀಲನು, ಬಹು ಶ್ರುತನು. ತತ್ವಜ್ಞಾನ ಮೊದಲಾದ ಶಾಸ್ತ್ರೀಯ ವಿಷಯಗಳನ್ನು ಬಹು ಆಸಕ್ತಿಯಿಂದ ಕೇಳುವನು, ಅಂತಹ ಚರ್ಚೆಯಲ್ಲಿ ಭಾಗವಹಿಸುವನು.

ರಾಯನಿಗೆ ಹಲವರು ಹೆಂಡಂದಿರಿದ್ದರು. ಅವರಲ್ಲಿ ಚಿನ್ನಾದೇವಿ, ತಿರುಮಲದೇವಿ, ಓರಸದ ರಾಜಪುತ್ರಿಯಾದ ಜಗನ್ಮೋಹಿನಿ ಈ ಮೂವರು ಪ್ರಮುಖರು.[೧] ರಾಯನಿಗೆ ಎರಡು ಹೆಣ್ಣು, ಎರಡು ಗಂಡು, ಹೀಗೆ ನಾಲ್ವರು ಮಕ್ಕಳು. ಗಂಡುಮಕ್ಕಳಲ್ಲಿ ಹಿರಿಯನಾದ ತಿರುಮಲಯ್ಯನು ಆರುವರ್ಷದವನಿರುವಾಗ ಯುವರಾಜನಾಗಿ ವಿಷ ಪ್ರಯೋಗದಿಂದ ಮೃತನಾದನು. ಎರಡನೆಯವನು ರಾಯನ ಮರಣ ಕಾಲದಲ್ಲಿ ಹದಿನೆಂಟು ತಿಂಗಳ ಮಗುವಾಗಿದ್ದನು. ಹೆಣ್ಣು ಮಕ್ಕಳಲ್ಲಿ ತಿರುಮಲಾಂಬೆಯು (ಅಳಿಯ) ರಾಮರಾಜನನ್ನು ಮದುವೆಯಾಗಿದ್ದಳು.

---

೧. ರಾಯನ ಹಾಗೂ ಆತನ ಪತ್ನಿಯರಾದ ಚಿನ್ನಾ-ತಿರುಮಲದೇವಿಯರ ತಾಮ್ರದ ಮೂರ್ತಿಗಳು ತಿರುಪತಿಯಲ್ಲಿ ಇವೆ.



**ಹಂಪೆಯ ವಿಜಯ ವಿಠ್ಠಲ ದೇವಾಲಯದ ಕಲ್ಯಾಣಮಂಟಪ.**

ಕೃಷ್ಣದೇವರಾಯನು ಕಟ್ಟಿಸಿದುದು.

ಎರಡನೆಯವಳಾದ ವೆಂಗಲಾಂಬೆಯನ್ನು ರಾಮರಾಜನ ತಮ್ಮನಾದ ತಿರುಮಲನಿಗೆ ಕೊಟ್ಟಿತ್ತು.

ರಾಯನಿಗೆ ಹಲವು ಮಂತ್ರಿಗಳಿದ್ದು ಅವರಲ್ಲಿ ಸಾಳುವ ತಿಮ್ಮನು ಹಿರಿಯನೂ ಅತ್ಯಂತ ವಿಶ್ವಾಸಪಾತ್ರನೂ ಆಗಿದ್ದನು.ಆತನಿಗೆ **ಸಾಮ್ರಾಜ್ಯ ಧುರಂಧರ** ಎಂಬ ಬಿರುದು ಇತ್ತು.

ಉತ್ತುಂಗ ಪರಾಕ್ರಮ, ರಾಜನೀತಿಕೌಶಲ್ಯ, ಜಾಗರೂಕತೆ, ರಾಷ್ಟ್ರಾಭಿಮಾನ, ಪ್ರಜಾವಾತ್ಸಲ್ಯ, ಔದಾರ್ಯ, ಪ್ರತಿಭೆ, ಪಾಂಡಿತ್ಯ, ಕಲಾಪ್ರೀತಿ ಮೊದಲಾದ ಉದಾತ್ತ ರಾಜಗುಣಗಳಿಂದ ಆದರ್ಶನರಪತಿ ಯಾದ ಕೃಷ್ಣದೇವರಾಯನ ಇಪ್ಪತ್ತೊಂದು ವರ್ಷದ ಧುರಂಧರವಾದ ಆಡಳಿತದಲ್ಲಿ ವಿಜಯನಗರ ಸಾಮ್ರಾಜ್ಯವು ಅಪೂರ್ವವಾದ ಶಕ್ತಿ ವಿಕಾಸವನ್ನು ಪಡೆಯಿತು. ಈ ಆಳಿಕೆಯ ಸಿಂಹಾವಲೋಕನವನ್ನು ಮಾಡಿ ಇದನ್ನು ಇದರ ಹಿಂದಿನ ಪರಿಸ್ಥಿತಿಗೆ ಹೋಲಿಸಿ ನೋಡಿದರೆ, ರಾಯನ ಅಸಾಧಾರಣವಾದ ಕರ್ತೃತ್ವವು ಒಡೆದು ನಿಲ್ಲುವುದು. ವೀರನರಸಿಂಹನ ಆಳಿಕೆಯ ಕೊನೆಯಲ್ಲಿ ಕ್ಷೀಣಬಲವೂ ವಿದೀರ್ಣವೂ ವಿನಾಶೋನ್ಮು ಖವೂ ಆದ ಸಾಮ್ರಾಜ್ಯವು ಇಂದು ಪೂರ್ಣಬಲದಿಂದಲೂ ಸುಸಂಘಟನೆ ಯಿಂದಲೂ ಪ್ರವರ್ಧಮಾನವಾಗಿದೆ. ಇದರ ಸರ್ವ ಶ್ರೇಯಸ್ಸು ರಾಯ ನಿಗೇ ಸಲ್ಲುವುದು.ರಾಯನು ತಾನು ಕೈಕೊಂಡ ಪ್ರತಿಯೊಂದು ಕಾರ್ಯ ವನ್ನು ಅಸಾಮಾನ್ಯವಾದ ಸಾಹಸ-ಕೌಶಲ್ಯಗಳಿಂದ ನೆರವೇರಿಸಿ ದಿನದಿನಕ್ಕೆ ಸಾಮ್ರಾಜ್ಯದ ಶಕ್ತಿ-ಸ್ಥೈರ್ಯ-ಗೌರವಗಳನ್ನು ಬೆಳೆಸಿದನು. ತನ್ನ ಪೂರ್ವ ಜನೂ ಪರಾಕ್ರಮಶಾಲಿಯೂ ಸಾಮ್ರಾಜ್ಯಪ್ರೇಮಿಯೂ ಆದ ಸಾಳುವ ನರಸಿಂಹನ ಆಕಾಂಕ್ಷೆಗಳು ಆತನ ಕಲ್ಪನೆಗಿಂತಲೂ ಅಧಿಕವಾದ ಪೂರ್ಣ ತೆಯಿಂದಲೂ ಯಶಸ್ಸಿನಿಂದಲೂ ನೆರವೇರಿದುವು. ರಾಯನು ಸಂಪಾದಿ ಸಿದ ಓರಿಸದ ವಿಜಯವು ಅತ್ಯದ್ಭುತವಾಗಿದೆ. ಇದರಿಂದ ಸಾಮ್ರಾಜ್ಯ ದಲ್ಲಿ ವಿಲಕ್ಷಣವಾದ ಶಕ್ತಿ–ಸ್ಫೂರ್ತಿಗಳು ಸಂಚಾರಗೊಂಡುವು. ವಿಜಯ ನಗರದ ವೈರಿಗಳ ಬೆನ್ನೆಲುವೆ ಮುರಿದಂತಾಯಿತು.

ಎರಡನೆಯ ಗುಂಪಿಗೆ ಸೇರಿದ ವಿಜನಗರದ ಬದ್ಧವೈರಿಗಳಲ್ಲಿ ಅಗ್ರ ಗಣ್ಯನಾದ ವಿಜಾಪುರದ ಇಸ್ಮಾಯಿಲ ಆದಿಲಶಹನು ಬಲಾಢ್ಯನೂ

ಮಹತ್ವಾಕಾಂಕ್ಷಿಯೂ ಆಗಿದ್ದನು. ದಕ್ಷಿಣಭಾರತದಲ್ಲಿ ದಿಗ್ವಿಜಯ ಮಾಡಿ ತನ್ನ ರಾಜ್ಯವನ್ನು ವಿಸ್ತಾರಗೊಳಿಸಬೇಕೆಂಬುದು ಆತನ ಪ್ರಬಲ ವಾದ ಮನೋರಥವಾಗಿದ್ದಿತು. ಆದರೆ ರಾಯನು ಆತನಿಗೆ ನೀಡಿದ ಪ್ರಾಣಾಂತಿಕವಾದ ಪ್ರಹಾರದಿಂದ ಆತನ ಜೀವಾಳವೇ ಅದುರಿ, ಆತನ ಮಹತ್ವಾಕಾಂಕ್ಷೆಯೆಲ್ಲವು ಬೇಸಗೆಯ ಮೋಡದಂತೆ ಕರಗಿಹೋಯಿತು. ರಾಯನ ಹೆಸರು ಕೇಳಿದರೆ ಆತನ ಮೈಗೆ ನಡುಗು ಹುಟ್ಟುತ್ತಿತ್ತು. ರಾಯನು ಇನ್ನೂ ಕೆಲಕಾಲ ಜೀವಿಸಿದ್ದರೆ, ಮುಂದೆ ಮತ್ತೆ ತಲೆಯೆತ್ತಿ ಸಾಮ್ರಾಜ್ಯಕ್ಕೆ ಮುಳುವಾದ ಮಹಮ್ಮದೀಯ ರಾಜ್ಯಗಳನ್ನು ಎಂದೂ ನೆಲಬಿಟ್ಟು ಏಳದಂತೆ ಸದೆದು ಮಲಗಿಸುತ್ತಿದ್ದನು ಎಂಬುದರಲ್ಲಿ ಸಂದೇಹ ವಿಲ್ಲ. ಈ ವಿಜಯಗಳಿಂದ ರಾಯನ ಪ್ರತ್ಯಕ್ಷವಾದ ಅಧಿಕಾರವು ಕೃಷ್ಣೆ ಯಿಂದ ಲಂಕೆಯ ವರೆಗಿನ ವಿಸ್ತಾರವಾದ ಪ್ರದೇಶದ ಮೇಲೆ ನಿರ್ವಿಘ್ನ ವಾಗಿ ನೆಲೆಗೊಂಡುದುದಲ್ಲದೆ,ಆತನ ಪ್ರಭಾವವು ಬಹು ದೂರ ದ್ವೀಪಾಂ ತರಗಳಲ್ಲಿಯೂ ಹಬ್ಬಿತು.

ಈ ಆಳಿಕೆಯಲ್ಲಿ ಒಂದೆರಡು ಅಪವಾದದ ಪ್ರಸಂಗಗಳನ್ನುಳಿದು ಸಾಮಾನ್ಯವಾಗಿ ಸಾಮ್ರಾಜ್ಯದ ಅಂತರಂಗದಲ್ಲಿ ಶಾಂತತೆಯು ನೆಲೆಸಿ ದುದರಿಂದ ಜನಾಂಗವು ಸ್ವಾಸ್ಥ್ಯ-ಸೌಖ್ಯಗಳನ್ನು ಅನುಭವಿಸಿತು. ಭೂಮಿಯು ಫಲಭರಿತವಾಯಿತು. ದೇಶವು ಜನಪೂರ್ಣವಾಯಿತು. ರಾಯನು ಜನಹಿತಕ್ಕಾಗಿ ಅನೇಕ ಕೆರೆಕಾಲುವೆಗಳನ್ನು ಕಟ್ಟಿಸಿ ಕೃಷಿ ಯನ್ನು ಸಂವರ್ಧನಗೊಳಿಸಿದನು. ಕೆಲವರ್ಷಗಳ ವರೆಗೆ ತೆರಿಗೆಯಿಲ್ಲ ದಂತೆ ಭೂಮಿಗಳನ್ನು ಕೊಟ್ಟು ಸಾಗುವಳಿಯ ನೆಲವನ್ನು ಹೆಚ್ಚಿಸಿದನು. ಜನರಿಗೆ ಭಾರವಾದ ಕರಗಳನ್ನು ಕಿತ್ತುಹಾಕಿದನು. ಒಳ ಹೊರ ನಾಡಿನ ವ್ಯಾಪಾರವು ಅಭಿವೃದ್ಧಿಪಡೆಯಿತು. ವಿಜಯನಗರದ ವಶದಲ್ಲಿ ಹದಿ ನಾರು ನೂರು ಮೈಲಿನ ಸಮುದ್ರತೀರವಿದ್ದು, ಬಲಿಷ್ಠವಾದ ಎಂಟು ಹತ್ತು ಬಂದರಗಳು ಇದ್ದುವು.

ಅಂತರ್ಗತ ರಾಜ್ಯಪದ್ಧತಿಯು ಸುವ್ಯವಸ್ಥಿತವಾಗಿದ್ದಿತು. ರಾಜ್ಯದ ಬೇರೆ ಬೇರೆ ವಿಭಾಗಗಳಿಗೆ ಕಾರ್ಯದಕ್ಷರಾದ ಅಧಿಕಾರಿಗಳು ನಿಯೋಜಿ

ತರಾಗಿದ್ದರು. ಇಂತಹ ಚಿಕ್ಕದೊಡ್ಡ ಪ್ರಾಂತಾಧಿಕಾರಿಗಳ ಸಂಖ್ಯೆಯು ಸುಮಾರು ಇನ್ನೂರು ಇದ್ದಿತು. ಇವರೆಲ್ಲರು ದಸರೆಯ ಕಾಲಕ್ಕೆ ತಮ್ಮ ತಮ್ಮ ಪ್ರಾಂತಕ್ಕೆ ನಿಯತವಾದ ನಿಧಿಯನ್ನು ತಂದೊಪ್ಪಿಸಬೇಕೆಂದು ಕಟ್ಟಪ್ಪಣೆಯಿದ್ದಿತು. ನೆಲದ ಆದಾಯವು ೧೨೦ ಲಕ್ಷ ವರಹವು ಬರುತ್ತಿತ್ತು. ಇದರ ಅರ್ಧದಷ್ಟು ದಂಡಿನ ವ್ಯವಸ್ಥೆಗೆ ವೆಚ್ಚವಾಗುತ್ತಿತ್ತು. ರಾಯನ ರಾಜ್ಯದಲ್ಲಿ ರತ್ನದ ಕಣಿಯು ಇದ್ದಿತು. ಬೊಕ್ಕಸವು ಯಾವಾಗಲೂ ಸುವರ್ಣರತ್ನಗಳಿಂದ ತುಂಬಿರುತ್ತಿತ್ತು. ವಿಜಯನಗರದ ಸಿರಿವಂತಿಕೆಯು ಅಸೂಯೆಪಡುವಂತಹದಾಗಿತ್ತು. ರಾಯನು ತನ್ನ ಅರಮನೆಯಲ್ಲಿ ಗುಪ್ತವಾದ ಆಪದ್ಧನವನ್ನು ಕಾದಿಡುತ್ತಿದ್ದನಂತೆ.

ರಾಯನು ನ್ಯಾಯದಾನದಲ್ಲಿ ಅತಿಜಾಗರೂಕನಾಗಿದ್ದನು. ದೂರುಗಳನ್ನು ತತ್ಕಾಲದಲ್ಲಿ ವಿಚಾರಿಸಿ ಅಪರಾಧಿಗಳಿಗೆ ತಕ್ಕ ಶಾಸನವನ್ನು ವಿಧಿಸುತ್ತಿದ್ದನು. ಶಾಂತಿಯನ್ನು ಕಾಯುವುದಕ್ಕಾಗಿಯೂ ಅನ್ಯಾಯಗಳನ್ನು ಶೋಧಿಸುವುದಕ್ಕಾಗಿಯೂ ರಕ್ಷಕದಲವು (ಪೋಲಿಸ) ಏರ್ಪಟ್ಟಿತ್ತು. ರಾಯನ ರಾಜ್ಯದಲ್ಲಿ ಗೋವಧೆಯಾಗುತ್ತಿರಲಿಲ್ಲ.

ರಾಯನ ಸೇನಾಬಲವು ಸುಸಂಘಟಿತವಾಗಿದ್ದಿತು. ಅದರಲ್ಲಿ ಕಾಲಾಳುಗಳ ದಳವೆ ಪ್ರಧಾನವಾಗಿದ್ದಿತು. ರಾಯನು ಕುದುರೆಯ ದಳವನ್ನೂ ಫಿರಂಗಿ ದಳವನ್ನೂ ಹೆಚ್ಚಿಸಿದನು. ರಾಯನ ಸೈನ್ಯವು ಸದಾಕಾಲ ಸಿದ್ಧವಾಗಿರುತ್ತಿತ್ತು. ಸೈನ್ಯವು ಊಳಿಗದ ಪದ್ಧತಿಯಿಂದ (Feudal System) ಸಂಗ್ರಹಿಸಲಾಗುತ್ತಿತ್ತು. ಪ್ರತಿಯೊಬ್ಬ ಅಧಿಕಾರಿಯು ತನತನಗೆ ನಿಯತವಾದ ದಂಡನ್ನು ಕೂಡಿಸುತ್ತಿದ್ದನು. ಹೀಗೆ ಸಾಮ್ರಾಜ್ಯದ ಎಲ್ಲ ಭಾಗಗಳಲ್ಲಿ ಸಜ್ಜಾದ ದಂಡುಗಳು **ದಸರೆಯ ವಾರ್ಷಿಕ ಮಹಾಸಮ್ಮೇಲನ ಕಾಲದಲ್ಲಿ** ರಾಜಧಾನಿಯಲ್ಲಿ ನೆರೆಯುತ್ತಿದ್ದುವು. ಆಗ ಈ ಮಹಾಸೇನೆಯ ಪರೀಕ್ಷೆಯು ನಡೆಯುತ್ತಿತ್ತು. ಪ್ರತಿಯೊಬ್ಬ ಸೈನಿಕನು ಬಲಿಷ್ಠನೂ ಶೂರನೂ ಆಗಿರುತ್ತಿದ್ದನು. ರಾಯನ ಸಿದ್ಧ ಸೈನ್ಯವು ಹತ್ತುಲಕ್ಷವಿದ್ದಿತು. ಇದರಲ್ಲಿ ಮೂವತ್ತೈದು ಸಾವಿರವು ಕವಚಧಾರಿಗಳಾದ ರಾವುತರ ದಳವು ಇದ್ದಿತು.

ರಾಯನ ಔದಾರ್ಯವು ಅಮಿತವಾಗಿದ್ದಿತು. ಆತನ ದಾನಗಳು ಹಿಂದಿನ ಎಲ್ಲ ಅರಸರ ದಾನಗಳನ್ನು ಮೀರಿವೆ. ಆತನು ಕಂಚಿ, ತಿರುಪತಿ, ಶ್ರೀಶೈಲ, ಅಹೋಬಲ ಮೊದಲಾದ ಅನೇಕ ತೀರ್ಥಕ್ಷೇತ್ರಗಳಲ್ಲಿ ಅನೇಕ ಬಾರಿ ಮಹಾದಾನಗಳನ್ನು ಮಾಡಿದನು. ದೇವಾಲಯ, ಮಠ, ಸತ್ರ ಮೊದಲಾದವುಗಳಿಗೆ ಜೀರ್ಣೋದ್ಧಾರ, ನಿತ್ಯಪೂಜಾದಿ ಕ್ರಮಗಳು, ಉತ್ಸವ, ವಿದ್ಯಾದಾನ, ಅನ್ನದಾನ ಮುಂತಾದ ಕಾರ್ಯಗಳು ನಡೆಯಬೇಕೆಂದು ಹೇರಳವಾಗಿ ಹಣವನ್ನು ನೀಡಿದನು. ರಾಯನು ಶಿಲ್ಪ, ಕಾವ್ಯ, ಸಾಹಿತ್ಯ, ಸಂಗೀತ ಮೊದಲಾದ ವಿದ್ಯೆಕಲೆಗಳಿಗೆ ಆಶ್ರಯವಿತ್ತು, ಅವುಗಳನ್ನು ಉತ್ಕರ್ಷಗೊಳಿಸಿದನು. ರಾಯನು ಕೃಷ್ಣಸ್ವಾಮಿ, ರಾಮಸ್ವಾಮಿ ಮತ್ತು ವಿಜಯವಿಠ್ಠಲನ ಮನೋಹರವಾದ ಗುಡಿಗಳನ್ನು ಕಟ್ಟಿಸಿ ವಿಜಯನಗರಿಯ ಸೊಬಗನ್ನು ಹೆಚ್ಚಿಸಿದನು.

ರಾಯನು ಓರಿಸದ ದಿಗ್ವಿಜಯದ ನೆನೆವರಿಕೆಗಾಗಿ **ಗೆಲವಿನಮನೆ** ಯೆಂಬ ಭವ್ಯವೂ ದಿವ್ಯವೂ ಆದ ಸಭಾಮಂದಿರವನ್ನು ಕಟ್ಟಿಸಿದನು. [೨] ವಿಜಯನಗರ ಸಾಮ್ರಾಜ್ಯದ ಉತ್ಸವವಾದ ನವರಾತ್ರಿಯ ಉತ್ಸವವೂ ಬೇರೆ ಸಾರ್ವಜನಿಕ ಉತ್ಸವ–ಸಮಾರಂಭಗಳೂ ಇಲ್ಲಿಯೇ ನಡೆಯುತ್ತಿದ್ದುವು. ಈ ಕಟ್ಟಡದಲ್ಲಿ ಜೀವಕಳೆತುಂಬಿಕೊಂಡು ಒಡಮೂಡಿದ ಶಿಲ್ಪಕಲೆಯು ದಕ್ಷಿಣ ಭಾರತದಲ್ಲಿಯೇ ಅಪೂರ್ವವಾಗಿದೆ. ಅದು ಪ್ರಾಚೀನ ಮೆಸೊಪೊಟಾಮಿಯದ ನೆನಿವಾಪಟ್ಟಣದಲ್ಲಿಯ ಶಿಲ್ಪಕಲಾಪ್ರೌಢಿಯನ್ನು ಸರಿದೂಗುವುದೆಂದು ಬಲ್ಲವರು ಹೇಳುತ್ತಾರೆ. ತನ್ನ ತಾಯಿಯ ಸ್ಮಾರಕವಾಗಿ ರಾಯನು ನಾಗಲಾಪುರ ಎಂಬ ಸುಂದರವಾದ ಹೊಸ ಪಟ್ಟಣವನ್ನು ಕಟ್ಟಿಸಿದನು [೩]

---

೨. ಇದರ ಅವಶೇಷಕ್ಕೆ ಈಗ ಮಾನೋಮಿಯ ದಿಬ್ಬವೆನ್ನುತ್ತಾರೆ.

೩. ರಾಯನು ಇದನ್ನು ತನ್ನ ಒಬ್ಬ ಪ್ರೇಮಪಾತ್ರಳ ಹೆಸರಿನಿಂದ ಕಟ್ಟಿಸಿದನೆಂದು ದಂತಕಥೆಯಿದೆ! ಇದು ಈಗಿನ ಬಳ್ಳಾರಿ ಜಿಲ್ಲೆಯಲ್ಲಿಯ ಹೊಸಪೇಟೆಯೆಂದು ಹೇಳುತ್ತಾರೆ. ಈಚೆಗೆ ಒಬ್ಬ ಸಂಶೋಧಕರು ಹೊಸಪೇಟೆಯ ಬಳಿಯ ನಾಗನಹಳ್ಳಿಯೆಂದು ಪ್ರತಿಪಾದಿಸುವರು.



**ಗೆಲವಿನ ಮನೆಯ ಅವಶೇಷ—ಹಂಪೆ.**

ಇದಕ್ಕೆ ಈಗ ಮಹಾನವಮಿಯ ದಿಬ್ಬವೆನ್ನುವರು. ಕೃಷ್ಣದೇವರಾಯನು ಕಟ್ಟಿಸಿದುದು.

(ಪು. ೧೩೩ ನ್ನು ನೋಡಿರಿ)

ಅಸಾಧಾರಣ ಸಂಸ್ಕೃತ ಪಂಡಿತರೂ ಗ್ರಂಥಕಾರರೂ ಆದ ವ್ಯಾಸಯೋಗಿಗಳು ರಾಜಗುರುಗಳೂ ರಾಯನ ಅತಿಶಯವಾದ ಆದರ ಸ್ಥಾನವೂ ಆಗಿದ್ದರು. ಇವರಿಗೆ ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾ ಚಾರ್ಯ ಎಂಬ ಪದವಿಯೂ ಇದ್ದಿತು. ಇವರು ವಿಜಯನಗರದ ಸರಸ್ವತೀಪೀಠಾಧಿಷ್ಠಿತರೂ ವಿಜಯನಗರವಿಶ್ವವಿದ್ಯಾಲಯದ ಕುಲಪತಿ ಗಳೂ ಆಗಿದ್ದರು. ಪ್ರತಿಕೂಲಗ್ರಹಗಳ ಮೂಲಕ ಉಂಟಾಗುವ ಕುಹು ಯೋಗವೆಂಬ ವಿಷಕಾಲದಲ್ಲಿ ಇವರು ವಿಜಯನಗರದ ಸಿಂಹಾಸನದಲ್ಲಿ ಕುಳಿತು ರಾಯನ ಮೇಲಿನ ವಿಪತ್ತನ್ನು ಪರಿಹಾರಮಾಡಿದರು ಎಂದು ಐತಿಹ್ಯವಿದೆ.[೪]

ವಿದ್ಯಾರಣ್ಯರಂತೆ ಶ್ರೀವ್ಯಾಸಯೋಗಿಗಳ ಪುಣ್ಯಾಭಿಭೂತಿಯ ಹೆಸರು ವಿಜಯನಗರ ಸಾಮ್ರಾಜ್ಯದೊಂದಿಗೆ ಚಿರಕಾಲ ಸಂಲಗ್ನವಾಗಿದೆ. ಅತುಲವಾದ ಇವರ ಪ್ರಭಾವದಿಂದ ಮಾಧ್ವಮತದಂತೆ ವಿಜಯನಗರ ಸಾಮ್ರಾಜ್ಯವು ಉಚ್ಛ್ರಾಯವನ್ನು ಪಡೆದಿತು. ವೈರಾಗ್ಯಮೂರ್ತಿ ಗಳಾದ ಇವರು ಕೇವಲ ಲೋಕಸಂಗ್ರಹಕ್ಕಾಗಿ ಸುಮಾರು ಐವತ್ತು ವರ್ಷಗಳವರೆಗೆ ವಿಜಯನಗರದಲ್ಲಿ ವಾಸವಾಗಿ ಪರಿಪರಿಯಿಂದ ಸಾಮ್ರಾ ಜ್ಯದ ಹಿತಚಿಂತನೆಯನ್ನು ಮಾಡಿದರು. ಸಾಳುವ ನರಸಿಂಹ ಮೊದಲಾದ ವಿಜಯನಗರದ ಅರಸರಿಗೆ, ವಿಶೇಷವಾಗಿ ಕೃಷ್ಣದೇವರಾಯನಿಗೆ ಇವರ ಆಧ್ಯಾತ್ಮಿಕ ಬೆಂಬಲದಿಂದಲೂ ಮಂತ್ರಾಲೋಚನೆಯಿಂದಲೂ ಬಹಳ ಸಹಾಯವಾಯಿತು. ಆಜನ್ಮ ಬ್ರಹ್ಮಚಾರಿಯೂ ಅತ್ಯಂತ ಜಿತೇಂದ್ರಿ ಯನೂ ಆದ ಒಬ್ಬ ವಿದ್ವಾನ್ ಬ್ರಾಹ್ಮಣನ ಉಪದೇಶವನ್ನು ಕೃಷ್ಣದೇವ ರಾಯನು ದಿನಾಲು ಕೇಳುವನೆಂದು ನ್ಯೂನಿಝನು ಹೇಳಿರುವನು. ಈತನು ವ್ಯಾಸಯೋಗಿಯೆ ಆಗಿರಬೇಕೆಂದು ಸಂಶೋಧಕರು ಅಭಿಪ್ರಾಯ ಪಟ್ಟಿರುವರು.

ವೆಂಕಟ ತಾತಾರ್ಯರು ರಾಯನಿಂದ ಬಹಳ ಮರ್ಯಾದೆಯನ್ನು ಪಡೆದರು. ಸಾಮ್ರಾಜ್ಯದಲ್ಲಿಯ ಸಕಲ ಶ್ರೀವೈಷ್ಣವರ ಪ್ರಮುಖ ಗುರು ಗಳ ಪದವಿಯನ್ನು ಹೊಂದಿದರು. ಸುಪ್ರಸಿದ್ಧ ಶುದ್ಧಾದ್ವೈತ ಮತ

೪. ವ್ಯಾಸ. ಪ್ರ. ಪು. ೬೩, ೧೧, ೧೫೦.

ಸ್ಥಾಪಕರಾದ ವಲ್ಲಭಾಚಾರ್ಯರು ರಾಯನ ಆಸ್ಥಾನಕ್ಕೆ ಬಂದು ಕನಕಾಭಿಷೇಕದ ಸತ್ಕಾರವನ್ನು ಪಡೆದರಾಗಿ ತಿಳಿಯುತ್ತದೆ.

ರಾಯನು ಸ್ವತಃ ಉಚ್ಚವಿದ್ಯಾಸಂಪನ್ನನೂ ಗ್ರಂಥಕಾರನೂ ಆಗಿದ್ದನು. ಸಂಸ್ಕೃತ, ಕನ್ನಡ, ತೆಲುಗು ಈ ಸಾಹಿತ್ಯಗಳಲ್ಲಿ ಪರಿಣತಮತಿಯಾಗಿದ್ದನು. ಅನೇಕ ಭಾಷಾ-ವಿದ್ಯಾಪಂಡಿತರನ್ನೂ ಕವಿಗಳನ್ನೂ ಲೇಖಕರನ್ನೂ ಪೋಷಿಸಿ ಪ್ರೋತ್ಸಾಹಿಸಿದನು. ಅಲಸಾನಿ ಪೆದ್ದನ್ನ, ನಂದಿ ತಿಮ್ಮಯ್ಯ ಮೊದಲಾದ ಎಂಟು ಕವಿಗಳು ಅಷ್ಟದಿಗ್ಗಜಗಳೆನಿಸಿ ರಾಯನ ಆಸ್ಥಾನವನ್ನು ಅಲಂಕರಿಸಿದ್ದರು. ಅಲಸಾನಿ ಪೆದ್ದನ್ನನಿಗೆ ಆಂಧ್ರಕವಿಪಿತಾಮಹನೆಂಬ ಬಿರುದು ಇತ್ತು. ಈತನು ರಾಯನ ಅತ್ಯಂತ ವಿಶ್ವಾಸಾದರಗಳಿಗೆ ಪಾತ್ರನಾಗಿದ್ದನು.

ರಾಯನು ಮದಾಲಸಾಚರಿತಂ, ರಸಮಂಜರೀ, ಮುಂತಾದ ಐದು ಸಂಸ್ಕೃತ ಗ್ರಂಥಗಳನ್ನು ರಚಿಸಿದನು. ಕಲಿಂಗದಂಡಯಾತ್ರೆಯಲ್ಲಿರುವಾಗ ಶ್ರೀಕಾಕುಲಂ ಎಂಬೂರಿನ[೫] ಆಂಧ್ರಮಧುಸೂದನದೇವನು ರಾಯನ ಕನಸಿನಲ್ಲಿ ಬಂದು ಆಜ್ಞಾಪಿಸಿದಂತೆ, ರಾಯನು ಆಮುಕ್ತಮಾಲ್ಯದ ಎಂಬ ಸುವಿಖ್ಯಾತ ತೆಲುಗು ಕಾವ್ಯವನ್ನು ಬರೆದನು. ಲೊಲ್ಲ ಲಕ್ಷ್ಮೀಧರನು ಜ್ಯೋತಿಷ ಮೊದಲಾದ ಅನೇಕ ಶಾಸ್ತ್ರೀಯ ಗ್ರಂಥಗಳನ್ನು ಬರೆದನು.

ರಾಯನ ಆಳಿಕೆಯಲ್ಲಿ ಕನ್ನಡ ಸಾಹಿತ್ಯವೂ ವಿಕಸಿತವಾಯಿತು. ನರಹರಿತೀರ್ಥರು (೧೨೮೧) ಮತ್ತು ಶ್ರೀಪಾದರಾಯರು (೧೫೦೦) ಇವರುಗಳಿಂದ ಪುರಸ್ಕಾರವನ್ನು ಪಡೆದ ದಾಸಕೂಟ ಸಂಪ್ರದಾಯವು ವ್ಯಾಸರಾಯರಿಂದ ಅಭ್ಯುದಯವನ್ನು ಪಡೆಯಿತು. ಈ ಪರಂಪರೆಯನ್ನು ಮುಂದೆ ಪುರಂದರದಾಸ, ಕನಕದಾಸ ಮೊದಲಾದವರು ಮುಂದುವರಿಸಿದರು. ದಾಸಕೂಟದವರು ಭಕ್ತಿಮಾರ್ಗವನ್ನು ವಿಸ್ತಾರಗೊಳಿಸಿ ಮಧುರವಾದ ಕನ್ನಡ ನುಡಿಯಿಂದ ಎಲ್ಲೆಡೆಯಲ್ಲಿಯೂ ವಿಠ್ಠಲಸಂಕೀರ್ತನೆಯ ಸೊಲ್ಲನ್ನು ಹರಡಿದರು. ಇವರು ರಚಿಸಿದ ಕವನಗಳಿಂದ

೫. ಮಛಲಿಪಟ್ಟಣದ ಬಳಿ.

ಕನ್ನಡ ಸಾಹಿತ್ಯದಲ್ಲಿ ಒಂದು ಬಗೆಯ ಹೊಸರೀತಿಯು ಹುಟ್ಟಿ ಕನ್ನಡದ ಇಂಪು ಸೊಂಪುಗಳು ಹೆಚ್ಚಿದುವು. ಕನಕದಾಸರು ಬರೆದ ಮೋಹನ ತರಂಗಿಣಿಯೆಂಬ ಲಲಿತಕಾವ್ಯದಲ್ಲಿ ಈ ಕಾಲದ ಸಮಾಜದ ಚಿತ್ರವು ಪ್ರತಿಬಿಂಬಿತವಾಗಿದೆ. ಈ ಕಾವ್ಯನಾಯಕನಾದ ಶ್ರೀಕೃಷ್ಣನ ರೂಪದಿಂದ ಕೃಷ್ಣದೇವರಾಯನೆ ವ್ಯಂಗ್ಯವಾಗಿ ವರ್ಣಿಸಲ್ಪಟ್ಟಿರುವನು ಎಂದು ಸಂಶೋಧಕರ ಮತವಿದೆ.

ರಾಯನ ಕನ್ನಡ ಪ್ರೇಮದ ಇಡಕ್ಕೂ ಹೆಚ್ಚಿನ ನಿದರ್ಶನಗಳಿವೆ. ರಾಯನ ಪ್ರೇರಣೆ-ಪ್ರೋತ್ಸಾಹಗಳಿಂದ ತಿಮ್ಮಣ್ಣ ಕವಿಯು ಕನ್ನಡ ಭಾರತದ ಉತ್ತರಭಾಗವನ್ನು ಬರೆದು ಮುಗಿಸಿದನು. **ಕರ್ನಾಟಕ ಕೃಷ್ಣರಾಯಭಾರತಕಥಾಮಂಜರಿ** ಎಂಬ ಹೆಸರಿನಿಂದ ಇದು ಪ್ರಸಿದ್ಧಿ ಪಡೆದಿತು. **ಈ ಗ್ರಂಥವು ರಾಯನ ಕನ್ನಡಾಭಿಮಾನದ ಚಿರಂತನ ಸ್ಮಾರಕವೇ ಆಗಿದೆ.** ವೀರಶೈವ ಕವಿಗಳಲ್ಲಿ ಗುಬ್ಬಿಯ ಮಲ್ಲಣ್ಣಾರ್ಯನು ವೀರಶೈವಾಮೃತ ಪುರಾಣ, ಭಾವಚಿಂತಾರತ್ನ ಎಂಬ ಗ್ರಂಥಗಳನ್ನು ಬರೆದನು.* ಈತನು ಹಿಂದೆ ೮ನೆಯ 'ವಿಲಾಸ'ದಲ್ಲಿ (ಪು. ೭೫) ಉಕ್ತನಾದ ಗುಬ್ಬಿಯ ಮಲ್ಲಣ್ಣನ ಮೊಮ್ಮಗನು. ವಿರೂಪ ರಾಜನು ತ್ರಿಭುವನತಿಲಕವನ್ನು, ನಂಜರಾಜನು ಕುಮಾರರಾಮನ ಕಥೆಯನ್ನು ವೀರಭದ್ರರಾಜನು ವೀರಭದ್ರವಿಜಯ ಮೊದಲಾದ ಗ್ರಂಥ ಗಳನ್ನು ಬರೆದನು.

ಈ ಕಾಲದಲ್ಲಿ ಜನಾಂಗದ ನಾಗರಿಕತೆಯೂ ಜನಜೀವನದ ಸೊಗಸೂ ಬೆಳೆಯಿತು. ವಿದ್ಯಾವಿಭೂಷಿತೆಯರೂ ಕಲಾವತಿಯರೂ ಆದ ಅನೇಕ ಸ್ತ್ರೀಯರು ಪಟ್ಟಣಗಳನ್ನು ಅಲಂಕರಿಸಿದರು. ಕಾವ್ಯ ಸಂಗೀತ, ನೃತ್ಯ, ವಾದನ, ಮಲ್ಲವಿದ್ಯೆ, ರಕ್ಷಾವಿಧಾನ, ಲೇಖನಕಲೆ, ನ್ಯಾಯಪದ್ಧತಿ, ಗಣಿತ ಮೊದಲಾದ ಹಲವು ವಿದ್ಯೆಗಳಲ್ಲಿ ಪರಿಣತೆಯರಾದ ಅನೇಕ ಮಹಿಳೆಯರು ರಾಜಧಾನಿಯಲ್ಲಿಯೂ ಅರಮನೆಯಲ್ಲಿಯೂ ಇದ್ದರು. ಉತ್ಸವಪ್ರಿಯರಾದ ಜನರು ಆಟಪಾಟಗಳಲ್ಲಿಯೂ ನಾಟಕ

* ಈತನ ಹೆಸರು ೬೪ನೆಯ ಪುಟದ ಮೇಲೆ ತಪ್ಪಾಗಿ ಬಂದಿದೆ.

ಪ್ರಹಸನಗಳಲ್ಲಿಯೂ ಆನಂದವನ್ನು ಪಡೆಯುತ್ತಿದ್ದರು. ಬೇಟೆಯು ಹಲವು ಜನರ ವಿನೋದಸಾಧನವಾಗಿದ್ದಿತು.

ನವರಾತ್ರಿಯ ಉತ್ಸವವು ವಿಜಯನಗರ ಸಾಮ್ರಾಜ್ಯದ ಸಾರ್ವಜನೀನವೂ ರಾಷ್ಟ್ರೀಯವೂ ಆದ ಸಂತೋಷಸಮಾರಂಭವಾಗಿದ್ದಿತು. ಈ ಉತ್ಸವವು ಬಹು ವಿಜೃಂಭಣೆಯಿಂದ ನೆರವೇರುತ್ತಿತ್ತು. ಇದರಲ್ಲಿ ಭಾಗಿಯಾಗಲು ಸಾಮ್ರಾಜ್ಯದ ಎಲ್ಲ ಮೂಲೆಗಳಿಂದ ಜನರು ತಂಡತಂಡವಾಗಿ ರಾಜಧಾನಿಗೆ ಬಂದು ಸೇರುತ್ತಿದ್ದರು. ಅದೊಂದು ಅಖಿಲ ಸಾಮ್ರಾಜ್ಯದ ಅನೇಕ ಅಂಗಗಳ, ಭಿನ್ನ ಭಿನ್ನ ಜನಾಂಗಗಳ, ವಿವಿಧ ರೀತಿ-ನೀತಿಗಳ ಮಹಾಸಮ್ಮೇಲನವೆ ಆಗುತ್ತಿತ್ತು. ಆಗ ಎಲ್ಲೆಲ್ಲಿಯೂ ಸೊಬಗು, ಸಿಂಗಾರ, ಸಮೃದ್ಧಿ, ಉತ್ಸವ, ಆನಂದ !

ಪರದೇಶದ ಅನೇಕ ವರ್ತಕರೂ ಪ್ರವಾಸಿಗಳೂ ಈ ಕಾಲದಲ್ಲಿ ವಿಜಯನಗರವನ್ನು ಸಂದರ್ಶಿಸಲು ಬಂದರು. ಅವರು ಜನತೆಯ ಇರುವಿಕೆ, ನಾಗರಿಕತೆ ಮುಂತಾದ ಸನ್ನಿವೇಶಗಳನ್ನು ಕುರಿತು ತಮಗೆ ತೋರಿದ ಅನೇಕ ಸಂಗತಿಗಳನ್ನು ಬರೆದಿರುವರು. ಇಂತಹರಲ್ಲಿ ಬರ್ಬೊಸಾ (೧೫೧೪), ಪೇಸ್ (೧೫೨೦), ನ್ಯೂನಿಝು (೧೫೩೭) ಈ ಮೂವರು ಪೋರ್ತುಗೀಜ ಲೇಖಕರು ಪ್ರಮುಖರಾಗಿರುವರು. ಪೇಸನು ವಿಜಯನಗರವನ್ನು ಹೀಗೆ ಬಣ್ಣಿಸಿರುವನು:

"ಈ ಪುರವನ್ನು ಪ್ರವೇಶಿಸುವಾಗ ಮೊದಲು, ಅದನ್ನು ಸುತ್ತಿಕೊಂಡಿರುವ ಹೊರಕೋಟೆಯ ಗೋಡೆಯೂ ಅದರಲ್ಲಿಯ ಹೆಬ್ಬಾಗಿಲವೂ ಬರುತ್ತವೆ. ಈ ಕೋಟೆಯು ಬಹಳ ಬಲಿಷ್ಠವೂ ಬಹುಗಾತ್ರವಾದ ಕಲ್ಲುಗಳಿಂದ ಕಟ್ಟಿದುದೂ ಆಗಿದೆ. ಈ ಹೆಬ್ಬಾಗಿಲದ ಎರಡೂ ಬದಿಗೆ ಎರಡು ಗೋಪುರಗಳಿವೆ. ಒಳಗೆ ಹೋದ ಕೂಡಲೆ ಎರಡು ಚಿಕ್ಕ ಗುಡಿಗಳು ಕಾಣುವುವು. ಮುಂದಕ್ಕೆ ಹೋದ ಹಾಗೆ ಇದರಂತೆ ಇನ್ನೊಂದು ಅಗಸೆಯ ಬಾಗಿಲವೂ ಇನ್ನೊಂದು ಗೋಡೆಯು ಸುತ್ತೂ ಬರುವುದು. ಇಲ್ಲಿಂದ ಅರಮನೆಯ ವರೆಗೆ ಅನೇಕ ಬೀದಿಗಳೂ ಬಲು ಸೊಗಸಾದ ಮನೆಗಳೂ ನಾಯಕರ ನಿವಾಸಗಳೂ ಮನ್ನೆಯರ ಭವನಗಳೂ



ರಾಮಸ್ವಾಮಿಯ (ಹಜಾರ ರಾಮನ) ದೇವಾಲಯ.

ಕೃಷ್ಣದೇವರಾಯನು ಕಟ್ಟಿಸಿದುದು.

**"One of the most perfect specimens of Hindu temple architecture of Vijayanagara period"**

ಸಾಲುಗೊಂಡಿವೆ. ಈ ಮನೆಗಳು ಚಿತ್ರವಿಚಿತ್ರವಾದ ಆಕೃತಿಗಳಿಂದಲೂ ಅಲಂಕಾರಗಳಿಂದಲೂ ಸಿಂಗಾರವಾಗಿವೆ. ಅರಸುಬೀದಿಯನ್ನು ಹಿಡಿದು ಕೊಂಡು ಹೋಗಿ ಹೋಗಿ ಒಂದು ಅಗಸೆಯ ಬಾಗಿಲನ್ನು ದಾಟಿದರೆ, ಅರಮನೆಯ ಮುಂದಿನ ಅತಿ ಭವ್ಯವಾದ ಪಟಾಂಗಣದಲ್ಲಿ ಕಾಲಿಡುವೆವು. ಅರಮನೆಯ ಕೋಟೆಯನ್ನುಳಿದು ಈ ಪಟ್ಟಣಕ್ಕೆ ಮೂರು ಕೋಟೆಗಳಿವೆ.

"ರಾಜನ ಅರಮನೆಯ ಸುತ್ತಲು ಅತಿಭದ್ರವಾದ ಕೋಟೆಯು ನೆಲೆಗೊಂಡಿದೆ. ಈ ಅರಮನೆಯ ಪ್ರಾಕಾರವು ಲಿಸಬನ್ ಪಟ್ಟಣದ ಕೋಟೆಯ ಸುತ್ತಳತೆಗಿಂತಲೂ ವಿಸ್ತಾರವಾಗಿದೆ.

"ಮೇಲೆ ಹೇಳಿದ ಈ ಬೀದಿಗಳಲ್ಲಿ ಅನೇಕ ವರ್ತಕರ ಮನೆಗಳಿವೆ. ಇಲ್ಲಿ ಭೂಮಂಡಲದ ಮೇಲೆ ಬಯಸಬಹುದಾದ ಎಲ್ಲ ಜಾತಿಯ ಮುತ್ತು, ಮಾಣಿಕ, ರತ್ನ, ಪಚ್ಚೆ, ಇಂದ್ರನೀಲ, ಬೆಲೆಯುಳ್ಳ ಬಟ್ಟೆ ಮುಂತಾದ ಒಡವೆಗಳು ದೊರೆವುವು. ಇಲ್ಲಿ ಪ್ರತಿದಿನವೂ ಸಾಯಂಕಾಲ ದಲ್ಲಿ ಸಂತೆಯು ನೆರೆದು, ಕುದುರೆಗಳು, ಹಣ್ಣುಹಂಪಲ, ಕಟ್ಟಿಗೆ ಮುಂತಾದ ವಿಧವಿಧದ ಪದಾರ್ಥಗಳ ಮಾರಾಟವಾಗುವುದು. ಈ ಸರಕುಗಳನ್ನು ಹೇರಿಕೊಂಡು ಬಂದ ಅಗಣಿತವಾದ ಎತ್ತುಗಳಿಂದ ಪೇಟೆಯ ಬೀದಿಗಳೆಲ್ಲವು ಅಡ್ಡಾಡಲು ಬಾರದಷ್ಟು ಕಿಕ್ಕಿರಿದು ತುಂಬಿ ಹೋಗುತ್ತವೆ.

"ಈ ವಿಜಯನಗರಿಯಲ್ಲಿ ಅನೇಕ ದೇಶವಿದೇಶಗಳ ಜನರು ಏಕತ್ರ ರಾಗಿರುವವರು. ಇಲ್ಲಿಯ ವ್ಯಾಪಾರವು ವಿವಿಧವಾಗಿದೆ, ಅಮಿತವಾಗಿದೆ, ಸಮೃದ್ಧವಾಗಿದೆ. ಒಂದು ಮಗ್ಗಲಿನಿಂದ ನೋಡಿದರೆ, ಈ ಪಟ್ಟಣದ ವಿಸ್ತಾರದ ಕಲ್ಪನೆಯಾಗುವುದು ಸಾಧ್ಯವೆ ಇಲ್ಲ. ನಾನು ಗುಡ್ಡವನ್ನು ಏರಿ ನೋಡಿದಾಗ ಮಾತ್ರ ಇದರ ಎಷ್ಟೋ ಭಾಗವು ಕಣ್ಣಳವಿಗೆ ಬಂದಿತು. ಹೀಗೆ ಕಣ್ಣಿಗೆ ಕಂಡ ಈ ನಗರದ ಭಾಗವು ರೋಮಪಟ್ಟಣದಷ್ಟು ವಿಶಾಲವಾಗಿದೆ. ಈ ನಗರವು ಬಹು ನಯನಮನೋಹರವಾಗಿದೆ. ಅಲ್ಲಲ್ಲಿ ಕಾಲುವೆಗಳೂ ಹರಿದಿವೆ. ಈ ಊರಲ್ಲಿ ಎಷ್ಟು ಜನರು ಇರುವರೆಂಬು ದನ್ನು ಹೇಳಿದರೆ ಕಟ್ಟುಕತೆಯಾಗಿ ತೋರಬಹುದು. ಸ್ವಲ್ಪದರಲ್ಲಿ ಹೇಳು

ವೃದಾದರೆ, ಎಲ್ಲಬಗೆಯ ಸರಕು-ಸಲಕರಣೆ-ಸನ್ನಾಹಗಳಿಂದ ಸಮೃದ್ಧವಾದ ಇಂತಹ ಬೇರೊಂದು ನಗರಿಯು ಭೂಮಂಡಲದ ಮೇಲೆ ಇಲ್ಲ."

---

## ಹದಿನೈದನೆಯ ವಿಲಾಸ

# ೪. ಅಚ್ಯುತದೇವರಾಯ

## (೧೫೩೦-೧೫೪೨)

ಕೃಷ್ಣದೇವರಾಯನ ತರುವಾಯ ಪಟ್ಟಕ್ಕಾಗಿ ಕಲಹಗಳು ಉಂಟಾಗಿ ಅರಮನೆಯಲ್ಲಿ ಮೂರು ಬಣಗಳು ನಿರ್ಮಾಣವಾದುವು. ಈ ಭವಿತವ್ಯವನ್ನು ಶಂಕಿಸಿಯೆ ಕೃಷ್ಣದೇವರಾಯನು ತಾನಿರುವಾಗಲೆ ತನ್ನ ಮಗನಾದ ತಿರುಮಲರಾಯನನ್ನು ಪಟ್ಟಾಧಿಕಾರಿಯಾಗಿ ನೇಮಿಸಿದ್ದನು. ನಾವು ಹಿಂದೆ ನೋಡಿದಂತೆ, ಆತನು ಒಳಹಗೆಗಳ ಕುತಂತ್ರಕ್ಕೆ ಆಹುತಿಯಾದನು. ರಾಯನ ಮರಣಕಾಲದಲ್ಲಿ ರಾಯನ ಇನ್ನೊಬ್ಬ ಮಗನು ಉಳಿದುಕೊಂಡಿದ್ದನು. ಆತನಾಗ ಇನ್ನೂ ಹದಿನೆಂಟು ತಿಂಗಳ ಕೂಸು. ಇದನ್ನು ಕಂಡು ಬಲ್ಲಿದನಾದ ರಾಯನ ತಮ್ಮ ಅಚ್ಯುತ ರಾಯನು ಕೆಲವು ಮಂತ್ರಿಗಳ ಬೆಂಬಲದಿಂದ ವಿಜಯನಗರಸಿಂಹಾಸನವನ್ನೇರಿದನು. ಅಚ್ಯುತರಾಯನಿಗೆ ಆತನ ಬೀಗರಾದ ಸಲಕಮನೆತನದ ಪೆದ್ದತಿರುಮಲರಾಯ, ಚಿನ್ನತಿರುಮಲರಾಯ ಎಂಬ ಬಂಧುಗಳಿಬ್ಬರು ಸಹಾಯರಾಗಿದ್ದರು.

ಅಚ್ಯುತರಾಯನ ಈ ಕೃತ್ಯವು ಕೆಲರ ಮನಸ್ಸಿಗೆ ಬರಲಿಲ್ಲ. ಕೃಷ್ಣದೇವರಾಯನ ಚಿಕ್ಕಮಗುವಿಗೇ ಪಟ್ಟವಾಗಬೇಕೆಂದು ಅವರು ಹಟ ಹಿಡಿದರು. ಈ ಬಾಲರಾಜನ ಸೋದರಮಾವನಾದ ಹುಚ್ಚತಿರುಮಲನು ಈ ಪಕ್ಷವನ್ನು ಪುರಸ್ಕರಿಸಿದನು. ಈ ಗಲಭೆಯಲ್ಲಿ ಸಿಂಹಾಸನದ

ಆಕಾಂಕ್ಷೆಯಿಂದ ಇನ್ನೊಂದು ಪಕ್ಷವು ಮುಂದುವರಿಯಿತು. ಕೃಷ್ಣ ದೇವರಾಯನ ಹೆಂಡಂದಿರಾದ ತಿರುಮಲ-ಚಿನ್ನಾದೇವಿಯರು ತಮ್ಮ ಅಳಿಯಂದಿರ ಮನೆತನಕ್ಕೆ ಪಟ್ಟವಾಗಬೇಕೆಂದು ಆಲೋಚಿಸಿದರು. ಅರವೀಡು ಮನೆತನದ ಸೋದರರಾದ ರಾಮರಾಯನು ಮತ್ತು ತಿರುಮಲನು, ಈ ಇಬ್ಬರು ಅರಸಿಯರ ಕುವರಿಯರಾದ ತಿರುಮಲಾಂಬೆ ಮತ್ತು ವೆಂಗಲಾಂಬೆ ಇವರನ್ನು ಮದುವೆಯಾಗಿದ್ದರು. ಇವರಲ್ಲಿ ಹಿರಿಯನಾದ ರಾಮರಾಯನು ಈಗಾಗಲೆ ತನ್ನ ಸಾಮರ್ಥ್ಯವನ್ನು ತೋರ್ಪಡಿಸಿದುದರಿಂದ ಆತನ ಸಂಬಂಧಿಕರು ಆತನಿಗೆ ರಾಜ್ಯವಾಗ ಬೇಕೆಂದು ಬಗೆದರು.

ಅರಮನೆಯಲ್ಲಿಯ ಈ ತಾಳಗೆಟ್ಟ ಸ್ಥಿತಿಯನ್ನು ನೋಡಿ, ಇಬ್ರಾಹಿಮ ಆದಿಲಶಹನು ರಾಯಚೂರು, ಮುದಗಲ್ ಕೋಟೆಗಳನ್ನು ಮೂರು ತಿಂಗಳುಗಳವರೆಗೆ ಮುತ್ತಿ ತೆಗೆದುಕೊಂಡನು. ಅಲ್ಲಿಂದ ಆತನು ವಿಜಯನಗರ ರಾಜಧಾನಿಯ ಮೇಲೆ ಸಾಗಿಬಂದನು. ಆಗ ಅಲ್ಲಿ ಬಾಲರಾಜನ ಪಕ್ಷವು ಪ್ರಬಲವಾಗಿತ್ತು. ಈ ಪಕ್ಷದ ನಾಯಕನಾದ ಹುಚ್ಚತಿರುಮಲನು ಆತನನ್ನು ಬರಮಾಡಿಕೊಂಡನು. ಆಗ ಅಚ್ಯುತರಾಯನು ರಾಜಧಾನಿಯಲ್ಲಿದ್ದು, ವಿಜಯನಗರದ ಸೇನಾಬಲವು ಆತನ ಅಂಕಿತದಲ್ಲಿ ಇದ್ದಿತು. ಆದರೂ ಆತನು ಅನಿಶ್ಚಿತ ಪರಿಸ್ಥಿತಿಯ ಮೂಲಕ ಔದಾಸೀನ್ಯವನ್ನು ಧರಿಸಿ, ಅಲ್ಪಬಲನಾದ ಆದಿಲಶಹನು ರಾಜಧಾನಿಯನ್ನು ಸಮೀಪಿಸುವಾಗ ಆತನನ್ನು ಇದಿರಿಸದೆ ಸುಮ್ಮನೆ ಇದ್ದನು.

ಹೀಗೆ ಹುಚ್ಚತಿರುಮಲನು ಪ್ರಬಲನಾಗುವುದನ್ನು ಕಂಡು, ರಾಮರಾಯನ ಪಕ್ಷದವರು ಅಚ್ಯುತರಾಯನ ಪಕ್ಷವನ್ನು ಕೂಡಿದರು. ರಾಮರಾಯನ ಜನರು ಅಚ್ಯುತರಾಯನು ರಾಜನಾಗಲು ಸಮ್ಮತಿಸಿದರು. ಅಚ್ಯುತರಾಯನಾದರೂ ರಾಮರಾಯ-ತಿರುಮಲರಲ್ಲಿ ನಂಬಿಕೆಯನ್ನಿಟ್ಟು ಅವರಿಗೆ ಅಧಿಕಾರವನ್ನು ಕೊಟ್ಟನು. ರಾಮರಾಯನು ಅಚ್ಯುತರಾಯನಿಗೆ ವಿರೋಧವಾಗಿ ತಲೆಯೆತ್ತುತ್ತಿರುವ ನಾಯಕರ

ಪುಂಡನನ್ನು ತಗ್ಗಿಸುವ ಕಾರ್ಯದಲ್ಲಿ ಮಗ್ನನಾದನು. ಶಹನು ವಿಜಯ ನಗರವನ್ನು ಸಮೀಪಿಸಿ ನಾಗಲಾಪುರವನ್ನು ನೆಲಸಮಮಾಡಿದನು. ಅಚ್ಯುತರಾಯನು ಆತನಿಗೆ ಕಾಣಿಕೆಯನ್ನು ಸಲ್ಲಿಸಿ ರಾಯಚೂರು, ಮುದಗಲ್ ಕೋಟೆಗಳನ್ನು ಬಿಟ್ಟು ಒಪ್ಪಂದಮಾಡಿಕೊಂಡನು.

ಪಟ್ಟದ ಕಲಹವು ಹಾಗೆಯೆ ಮುಂದುವರಿಯಿತು. ದಿನದಿನಕ್ಕೆ ಹೆಚ್ಚುಹೆಚ್ಚು ನಾಯಕರು ಬಾಲರಾಜನ ಪಕ್ಷವನ್ನು ಸೇರುತ್ತ ಆತ ನನ್ನು ಎತ್ತಿಹಿಡಿದರು. ರಾಮರಾಯನ ವಿರೋಧಿಗಳ ಸಂಖ್ಯೆಯು ಬೆಳೆಯಿತು. ರಾಜ್ಯದಲ್ಲಿ ಪುಂಡಾಟಿಕೆಗಳು ಹೆಚ್ಚಾದುವು. ತಿರುವಾಡಿ (ಮಲಬಾರ) ಪ್ರಾಂತದಲ್ಲಿ ಗಲಭೆಯು ಉಂಟಾಯಿತು. ಅದನ್ನು ಸಂದಿ ಸಲು ರಾಮರಾಯನು ತೆರಳಬೇಕಾಯಿತು. ರಾಮರಾಯನು ಹೋಗು ವಾಗ ಸಲಕಂ ತಿಮ್ಮಯ್ಯನೆಂಬ ತನ್ನ ವಿಶ್ವಾಸದ ಸೇವಕನನ್ನು ರಾಜ ಧಾನಿಯ ರಕ್ಷಣೆಗಾಗಿ ನೇಮಿಸಿದನು.

ರಾಮರಾಯನು ಹೋದಬಳಿಕ, ಈ 'ಸೇವಕ'ನು ಎಲ್ಲ ಅಧಿಕಾರ ವನ್ನು ತಾನೆ ಆಕ್ರಮಿಸಿಕೊಂಡು ರಾಜಧಾನಿಯಲ್ಲಿ ತನ್ನ ಪ್ರಸ್ಥವನ್ನು ಬೆಳೆಸಿದನು. ರಾಮರಾಯನು ಹೇಳಿಕಳುಹಿದ ಸಹಾಯವನ್ನು ನಿರಾ ಕರಿಸಿದನು. ರಾಮರಾಯನು ಬಂಧನದಲ್ಲಿರಿಸಿದ ಬಾಲರಾಜನನ್ನು ಬಿಡುಗಡೆಮಾಡಿ ಹುಚ್ಚತಿರುಮಲನ ಪಕ್ಷವನ್ನು ಕೂಡಿದನು. ಈಗ ಬಾಲರಾಜನ ಪಕ್ಷದಲ್ಲಿ ಅಧಿಕಾರಲೋಲುಪರಾದ ಈ ಮಹತ್ವಾಕಾಂಕ್ಷಿ ಗಳಿಬ್ಬರಲ್ಲಿ—ಈ 'ಸೇವಕ'ನು ಮತ್ತು ಹುಚ್ಚತಿರುಮಲನು ಇವರಲ್ಲಿ— ಸ್ಪರ್ಧೆಯುಂಟಾಯಿತು. ಸ್ವಾರ್ಥಪರರಾದ ಇವರು ಬಾಲರಾಜನನ್ನು ತಮ್ಮ ರಾಜ್ಯತೃಷ್ಣೆಯನ್ನು ತೃಪ್ತಿಗೊಳಿಸುವ ಬರಿಯ ಸಾಧನವನ್ನಾಗಿ ಎಣಿಸಿದರು. 'ಸೇವಕ'ನ ಪ್ರಾಬಲ್ಯವು ಹೆಚ್ಚುವುದನ್ನು ನೋಡಿ ಹುಚ್ಚ ತಿರುಮಲನು ಅವನನ್ನು ಕೊಲ್ಲಿಸಿದನು.

ಈ ವಿಜಯದಿಂದಲೂ ಅನುಯಾಯಿಗಳ ಬೆಂಬಲದಿಂದಲೂ ಮದಾಂಧನಾದ ಹುಚ್ಚತಿರುಮಲನು ಬಾಲರಾಜನ ಕುತ್ತಿಗೆಯನ್ನು ಹಿಚುಕಿ ಕೊಂದು ಸಿಂಹಾಸನವನ್ನು ಆಕ್ರಮಿಸಿದನು. ಮುಂದೆ ಕೆಲ

ದಿನಗಳಲ್ಲಿ ಹುಚ್ಚ ತಿರುಮಲನ ನಿರರ್ಗಲವಾದ ಅನ್ಯಾಯಗಳು ಆತನ ಅನುಯಾಯಿಗಳಿಗೇ ಅಸಹ್ಯವಾಗಿ, ಅವರು ರಾಮರಾಯನ ಸಹಾಯವನ್ನು ಕೋರಿದರು. ಅಸಹಾಯನಾದ ಹುಚ್ಚ ತಿರುಮಲನು ಆದಿಲಶಹನ ನೆರವನ್ನು ಬೇಡಲು ಆತನು ಅಸದಖಾನನನ್ನು ವಿಜಯನಗರಕ್ಕೆ ಕಳುಹಿದನು. ವಿಜಾಪುರದ ಈ ದಂಡು ಕೆಲಕಾಲ ವಿಜಯನಗರದಲ್ಲಿ ನೆಲೆಸಿ ತಿರುಮಲನ ಪ್ರತಿಷ್ಠೆಯನ್ನು ಕಾದು ಹಿಂದಿರುಗಿತು.

ಈ ನಡುವೆ ರಾಮರಾಯನು, ಬಾಲರಾಜನನ್ನು ಕೊಂದುಹಾಕಿದ ಈ ನರಾಧಮನಿಗೆ ಪ್ರಾಯಶ್ಚಿತ್ತವಾಗಲೇಬೇಕು ಎಂದು ಹೇಳುತ್ತ, ಹುಚ್ಚ ತಿರುಮಲನ ವಿರುದ್ಧವಾಗಿ ಜನರ ಮನಸ್ಸುಗಳನ್ನು ಕೆರಳಿಸುತ್ತ ತನ್ನ ಪಕ್ಷದ ಸಂಘಟನೆಯನ್ನು ನಡೆಸಿದ್ದನು. ಅಸದಖಾನನು ರಾಜಧಾನಿಯಿಂದ ತೆರಳುವಷ್ಟರಲ್ಲಿ ರಾಮರಾಯನ ವ್ಯೂಹವು ಸಿದ್ಧವಾಗಿತ್ತು. ಇತ್ತ ತಿರುಮಲನು ತನ್ನ ಅನುಯಾಯಿಗಳೆಲ್ಲ ತನ್ನನ್ನು ತೊರೆದು ಹೋಗಿರುವರೆಂಬುದನ್ನು ಮನಗಂಡು ಸಂಭ್ರಾಂತನಾಗಿ ಅರಮನೆಯಲ್ಲಿ ಅಡಗಿಕೊಂಡನು. ಅರಮನೆಯ ವಸ್ತು-ವಾಹನ ಮೊದಲಾದ ಸ್ಥಿರಚರ ಸಂಪತ್ತು ತನ್ನ ವೈರಿಗಳ ಪಾಲಾಗಬಾರದೆಂಬ ದುರ್ಬುದ್ಧಿಯಿಂದ ಮನ ಬಂದಂತೆ ವಿಧ್ವಂಸಗೊಳಿಸಿ ಆತ್ಮಹತ್ಯೆಮಾಡಿಕೊಂಡು ಪ್ರಾಣಬಿಟ್ಟನು. ಇಲ್ಲಿಗೆ ಐದಾರು ವರುಷಗಳ ವರೆಗೆ ಲಂಬಿಸಿದ ಈ ಪಟ್ಟದ ಕಲಹವು ಸಮಾಪ್ತಿಹೊಂದಿತು (೧೫೪೭). ನಿಷ್ಕಂಟಕವಾದ ವಿಜಯನಗರದ ಸಿಂಹಾಸನವು ಅಚ್ಯುತರಾಯನಿಗೆ ಸ್ಥಿರವಾಯಿತು.

ಹೀಗೆ ರಾಜಧಾನಿಯಲ್ಲಿ ಈ ಗಲಭೆಯು ನಡೆದಿರುವಾಗ, ಅತ್ತ ಓರಿಸದ ಪ್ರತಾಪರುದ್ರನು ಕೃಷ್ಣೆಯನ್ನು ಇಳಿದು ವಿಜಯನಗರರಾಜ್ಯದಲ್ಲಿ ಕೊಳ್ಳೆಯಿಟ್ಟನು. ಗೋವಳಕೊಂಡದ ಕುಲಿ ಕುತುಬಶಹನು ಆತನಿಗೆ ನೆರವಾಗಿ ಕೊಂಡಪಲ್ಲಿ ಮೊದಲಾದ ಕೋಟೆಗಳನ್ನು ಹಿಡಿದುಕೊಂಡನು (೧೫೩೧). ಇವರ ಈ ಆಕ್ರಮಣವನ್ನು ತಡೆಯಲು ಅಚ್ಯುತರಾಯನು ದಂಡಿನೊಂದಿಗೆ ಹೊರಟನು. ಅದನ್ನು ಕಂಡು ಓರಿಸ ಮತ್ತು ಗೋವಳಕೊಂಡದ ದಳಗಳು ಹೆಚ್ಚು ಮುಂದುವರಿಯದೆ ಹಿಂದಕ್ಕೆ

ಸರಿದುವು. ರಾಯನು ಬಿಜಾಪುರದ ವರೆಗೆ ಬಿಜಯಂಗೈದು ಮರಳಿದನು.

ಈ ಸಮಯದಲ್ಲಿ ದಕ್ಷಿಣಪ್ರಾಂತದಲ್ಲಿ ಇನ್ನೊಂದು ಕಿರುಕುಳವು ಉಂಟಾಗಿತ್ತು. ಕಂಚಿ ನಾಡಿನ ಅಧಿಕಾರಿಯಾಗಿದ್ದ ಚೆಲ್ಲಪ್ಪ ವೀರ ನರಸಿಂಹನಾಯಕನು ಉಬ್ಬಾಳುತನದಿಂದ ದೇವಾದಾಯ ಮೊದಲಾದ ಕರಗಳನ್ನು ಅನ್ಯಾಯವಾಗಿ ಎತ್ತುವಳಿಮಾಡಿದನು. ಅದರಿಂದ ಪ್ರಜಾ ಕ್ಷೋಭೆಯುಂಟಾಗಲು ಆತನು ಚೇರ (ತ್ರಾವಣಕೋರ) ರಾಜನನ್ನು ಆಶ್ರಯಿಸಿದನು. ಬಳಿಕ ಇವರಿಬ್ಬರು ಕೂಡಿ ಪಾಂಡ್ಯ ರಾಜನ ಮೇಲೆ ಏರಿಹೋಗಿ ಅವನನ್ನು ದೇಶಭ್ರಷ್ಟಮಾಡಿದರು.

ರಾಯನ ಮಂತ್ರಿಯಾದ ಸಲಕತಿರುಮಲನು ಈ ಉನ್ಮಾರ್ಗಿಗಳ ದಂಡನೆಗೆ ದಂಡಯಾತ್ರೆಯನ್ನು ಕೈಕೊಂಡನು. ಚೇರರಾಜನಾದ ತಿರುವಾಡಿಯು ಸೋತು ಶರಣಾಗತನಾಗಿ ರಾಜದ್ರೋಹಿಯಾದ ಚೆಲ್ಲಪ್ಪನಾಯಕನನ್ನು ಒಪ್ಪಿಸಿದನು. ಆತನನ್ನು ಸೆರೆಯಲ್ಲಿ ಕಂಚಿಗೆ ತಂದರು. ತಾಮ್ರಪರ್ಣೀನದಿಯ ಮೇಲೆ ವಿಜಯನಗರದ ವಿಜಯಧ್ವಜವು ಸ್ಥಾಪಿತವಾಯಿತು. ಪಾಂಡ್ಯರಾಜನು ಕಳೆದುಕೊಂಡ ತನ್ನ ರಾಜ್ಯವನ್ನು ಪಡೆದನು. ಆತನು ತನ್ನ ಮಗಳನ್ನು ರಾಯನಿಗೆ ಮದುವೆಯಾಗಿ ಕೊಟ್ಟನು (೧೫೩೨). ಮದುರೆಯ ನಾಯಕರ ಮನೆತನದ ಮೂಲ ಪುರುಷನಾದ ವಿಶ್ವನಾಥನಾಯಕನು ಈ ದಂಡಯಾತ್ರೆಯಲ್ಲಿ ಭಾಗವನ್ನು ವಹಿಸಿದನು.

ಅಚ್ಯುತರಾಯನು ಕೃಷ್ಣದೇವರಾಯನ ನೀತಿಯನ್ನನುಸರಿಸಿ ಪೋರ್ತುಗೀಜರೊಡನೆ ಸ್ನೇಹಭಾವನೆಯಿಂದ ವರ್ತಿಸಿದನು. ಆದರೆ ಅವರು ಮಾತ್ರ ಆಸದಖಾನನ ತಂತ್ರದಿಂದಲೂ ಸ್ವಾರ್ಥಲೋಲುಪತೆಯಿಂದಲೂ ರಾಯನೊಡನೆ ವಂಚನೆಯಿಂದ ನಡೆದು ರಾಯನ ಶತ್ರುಗಳಾದ ಮಹಮ್ಮದೀಯರೊಡನೆ ಹೆಚ್ಚು ಸಖ್ಯವನ್ನು ಬೆಳಸಿದರು. ಗೋವೆಯ ಮೋಹವು ಈ ವೈಮನಸ್ಯಕ್ಕೆ ಪ್ರಧಾನನಿಮಿತ್ತವಾಯಿತು. ಪೋರ್ತುಗೀಜರು ವಿಜಾಪುರದ ವಶದಲ್ಲಿದ್ದ ಗೋವೆಯನ್ನು ಸಂಪಾದಿಸ

ಲೆಳಸಿ ಬೆಳಗಾವಿಯ ಅಧಿಕಾರಿಯಾದ ಅಸದಖಾನನೊಡನೆ ಸಂಧಾನ ವನ್ನು ನಡೆಸಿದರು.

ಧೂರ್ತನಾದ ಖಾನನು ಅವರಿಗೆ ಆಸೆಯನ್ನು ತೋರಿ ವಿಜಯ ನಗರಕ್ಕೆ ಬಂದನು. ಗೋವೆಯನ್ನು ಬಯಸುತ್ತಿದ್ದ ಅಚ್ಯುತರಾಯನು ಖಾನನನ್ನು ಸಡಗರದಿಂದ ಬರಮಾಡಿಕೊಂಡು ಆತನನ್ನು ಒಲಿಸಿಕೊಳ್ಳಲು ಯತ್ನಿಸಿದನು. ಆದಿಲಶಹನು ಇದನ್ನು ನೋಡಿ ಖಾನನನ್ನು ತನ್ನೆಡೆಗೆ ಅಟ್ಟುವುದಾಗಿ ರಾಯನಿಗೆ ಆಗ್ರಹಪಟ್ಟನು. ಖಾನನು ಎರಡೂ ದಂಡೆಯ ಮೇಲೆ ಕೈಯಿಕ್ಕುತ್ತ, ರಾಯನಿಗೆ ಮೈತ್ರಿಯನ್ನು ಬೀರುತ್ತ ಅತ್ತ ಶಹನೊಡನೆ ಸಂಧಾನವನ್ನು ನಡೆಸಿದನು. ಅಷ್ಟರಲ್ಲಿ ವಿತುಷ್ಟವು ಬೆಳೆದು ವಿಜಯನಗರ–ವಿಜಾಪುರದ ದಳಗಳು ರಾಯಚೂರತ್ತ ತೆರಳಿದುವು. ವಂಚಕಾಗ್ರಣಿಯಾದ ಖಾನನು ಶಹನನ್ನು ಕೂಡಿದನು. ವಿಜಯನಗರ ದವರು ರಾಯಚೂರನ್ನು ಹಿಡಿದುಕೊಂಡರು. ಸಂಶಯಗ್ರಸ್ತನಾದ ಶಹನು ಅದನ್ನು ಅವರಿಗೆ ಬಿಟ್ಟು ರಾಯನೊಡನೆ ಒಡಂಬಡಿಕೆಯನ್ನು ಮಾಡಿಕೊಂಡನು.

ಈ ನಡುವೆ ಆದವಾನಿಕೋಟೆಯ ಸಲುವಾಗಿ ಅಸದಖಾನ ಮತ್ತು ರಾಮರಾಯನ ತಮ್ಮನಾದ ವೆಂಕಟಾದ್ರಿ ಇವರಲ್ಲಿ ಕೊಸರಾಟವು ನಡೆಯಿತು (೧೫೩೬).

ಅಚ್ಯುತರಾಯನಲ್ಲಿ ಕೃಷ್ಣದೇವರಾಯನ ಶೌರ್ಯವಾಗಲಿ, ರಾಜ ನೀತಿಯಾಗಲಿ, ಪ್ರಜಾಹಿತಬುದ್ಧಿಯಾಗಲಿ ಇರಲಿಲ್ಲ. ಆತನ ಆಳಿಕೆಯಲ್ಲಿ ಸಾಮ್ರಾಜ್ಯವು ಅನೇಕ ತೊಂದರೆಗಳಿಗೆ ಈಡಾಯಿತು. ಆಳಿಕೆಯ ಮೊದಲಿನ ಐದಾರು ವರ್ಷಗಳು ಅಂತಃಸ್ಥಕಲಹಗಳಲ್ಲಿ ಕಳೆದುಹೋದುವು. ಇದರಿಂದ ಕೃಷ್ಣದೇವರಾಯನು ನಿತಾಂತಪ್ರಯಾಸದಿಂದ ನಿರ್ಮಾಣ ಮಾಡಿದ ಸಾಮ್ರಾಜ್ಯದ ಬಿಗುವು ಸಡಿಲಾಯಿತು. ಆಡಳಿತದಲ್ಲಿ ದುರ್ಬಲ ತೆಯು ಉಂಟಾಯಿತು. ಸಾಮ್ರಾಜ್ಯದ ಹಗೆಗಳಿಗೆ ಅನುವು ದೊರೆ ಯಿತು. ಕೃಷ್ಣದೇವರಾಯನು ಮಾಡಿದ ಗಾಯಗಳು ಇನ್ನೂ ಮಾಯದೆ ಇರುವ ಓರಿಸ ಮತ್ತು ಮುಹಮ್ಮದೀಯ ಅರಸರು ಮಿಸುಕಾಡುವ

ಪ್ರಯತ್ನಗಳನ್ನು ಮಾಡಿದರೂ ಅವುಗಳಿಂದ ಸಾಮ್ರಾಜ್ಯವಿಸ್ತಾರದ ದೃಷ್ಟಿಯಿಂದ ವಿಶೇಷವಾದ ಹಾನಿಯಾಗಲಿಲ್ಲ. ಆದರೆ ಸಾಮ್ರಾಜ್ಯದ ಪ್ರಭಾವವೂ ಗೌರವವೂ ಕಳೆಗುಂದದೆ ಇರಲಿಲ್ಲ.

ಪರರಾಷ್ಟ್ರೀಯ ರಾಜನೀತಿಗಿಂತಲೂ ಅಂತರ್ಗತವಾದ ಆಡಳಿತದಿಂದ ಅಚ್ಯುತರಾಯನ ಆಳಿಕೆಯು ಪ್ರಜಾಜನರಿಗೆ ಅಪ್ರಿಯವಾಯಿತು. ರಾಯನು ತನ್ನ ಬೀಗರಾದ ಸಲಕಬಂಧುಗಳಿಗೆ ಮಂತ್ರಿಪದವನ್ನು ಕೊಟ್ಟು ಅವರ ಕೈಯಲ್ಲಿ ಯಥೇಷ್ಟವಾದ ಅಧಿಕಾರವನ್ನು ಒಪ್ಪಿಸಿ ಅವರ ಇಚ್ಛೆಯಂತೆ ರಾಜ್ಯಸೂತ್ರಗಳನ್ನು ನಡೆಸಿದನು. ಈ ಸಲಕಬಂಧುಗಳು ರಾಜ್ಯಕಾರ್ಯವನ್ನು ಚೆನ್ನಾಗಿ ಅರಿತವರಾಗಿರಲಿಲ್ಲ. ಇವರು ಧನತೃಷ್ಣೆಯಿಂದಲೂ ಅಧಿಕಾರಮದದಿಂದಲೂ ಸ್ವೈರವಾಗಿ ವರ್ತಿಸಿದರು. ಅವರಿಂದ ಅನೇಕ ಅನ್ಯಾಯಗಳು ಸಂಭವಿಸಿದುವು. ಅಧಿಕಾರಿಗಳ ಮತ್ತು ಪ್ರಜಾವರ್ಗದ ಮನಸುಗಳು ನೊಂದುವು.

ರಾಯನ ನ್ಯಾಯಬುದ್ಧಿಯಾದರೂ ಅಷ್ಟು ಜಾಗ್ರತವಾಗಿರಲಿಲ್ಲ. ಆತನು ಅನೇಕ ಉಪಾಯಗಳಿಂದ ಬೊಕ್ಕಸವನ್ನು ತುಂಬಿದುದಾಗಿರಿಸಿದನು. ರಾಯನಿಗೆ ನವಕೋಟಿ ನಾರಾಯಣನೆಂದೆನ್ನುತ್ತಿದ್ದರು. ದ್ರವ್ಯಲೋಭದಿಂದ ಆತನು ಅಧಿಕಾರಿಗಳನ್ನೂ ನಾಯಕರನ್ನೂ ಪೀಡಿಸಿದನು. ಇದರ ಮುಖ್ಯವಾಗಿ ಅಧಿಕಾರಿಗಳೂ ಮಂಡಲಪತಿಗಳೂ ದುಡ್ಡನ್ನು ಕೂಡಿಸಲು ಪ್ರಜಾಜನರ ಮೇಲೆ ಅತ್ಯಾಚಾರಗಳನ್ನು ನಡೆಸಿದರು. ಕೆಲವೆಡೆ ಅನ್ಯಾಯದ ತೆರಿಗೆಗಳನ್ನೂ ಹೇರಿದರು.

ರಾಯನು ಧನಸಂಗ್ರಹದಲ್ಲಿ ದಕ್ಷತೆಯನ್ನು ತೋರಿದಂತೆ ಧರ್ಮಕಾರ್ಯಗಳಲ್ಲಿ ಔದಾರ್ಯವನ್ನು ಬೀರಿದನು. ಲಕ್ಷ ಹೋಮ ಮೊದಲಾದ ಅನೇಕ ಧಾರ್ಮಿಕ ಮಹಾಸಮಾರಂಭಗಳೂ ಆನಂದನಿಧಿ ಮೊದಲಾದ ಹಲವು ಅಪೂರ್ವ ಮಹಾದಾನಗಳೂ ರಾಯನ ದಾನವೈಭವದ ದ್ಯೋತಕಗಳಾಗಿವೆ. ಈತನು ಕವಿಗಳನ್ನೂ ಪಂಡಿತರನ್ನೂ ಪೋಷಿಸಿ ಸಾಹಿತ್ಯವನ್ನೂ ವಿದ್ಯೆಯನ್ನೂ ಕೆಲಮಟ್ಟಿಗೆ ಪ್ರೋತ್ಸಾಹಿಸಿದನು. ಅಚ್ಯುತಾಭ್ಯುದಯಂ ಎಂಬ ಕಾವ್ಯವನ್ನು ರಚಿಸಿದ ರಾಜನಾಥ

ಡಿಂಡಿಮನು ರಾಯನ ಆಸ್ಥಾನಕವಿಯಾಗಿದ್ದನು. ತಿರುಮಲಾಂಬೆ ಯೆಂಬ ಕವಯಿತ್ರಿಯು ವರದಾಂಬಿಕಾಪರಿಣಯಂ ಎಂಬ ಕಾವ್ಯವನ್ನು ಬರೆದಳು.

ಕನ್ನಡ ಭಾಗವತವನ್ನು ಬರೆದ ಚಾಟು ವಿಠ್ಠಲನಾಥನು ಹಿಂದಿನ ಆಳಿಕೆಯಲ್ಲಿಯೂ ಈ ಆಳಿಕೆಯಲ್ಲಿಯೂ ಬಾಳಿದನು. ಪುರಂದರದಾಸ, ವಾದಿರಾಜ ಮೊದಲಾದ ದಾಸ ಸಾಹಿತಿಗಳು ಈ ಆಳಿಕೆಯಲ್ಲಿಯೂ ಮುಂದಿನ ಆಳಿಕೆಯಲ್ಲಿಯೂ ಬಾಳಿದರು. ಅವರ ನಿರ್ದೇಶವು ಮುಂದಿನ ಆಳಿಕೆಯಲ್ಲಿ ಹೆಚ್ಚು ವಿಸ್ತಾರವಾಗಿ ಬರುವುದು.

ರಾಯನಿಗೆ ಇಬ್ಬರು ಹೆಂಡಂದಿರು. ಇವರಲ್ಲಿ ಸಲಕಬಂಧುಗಳ ಸೋದರಿಯಾದ ವರದಾಂಬಿಕೆಯು ಹಿರಿಯಳು. ಈಕೆಗೆ ವೆಂಕಟಾದ್ರಿ ಯೆಂಬ ಮಗನಾದನು. ಪಾಂಡ್ಯರಾಜಕನ್ಯೆಯು ಎರಡನೆಯ ಹೆಂಡತಿಯು. ಅಚ್ಯುತರಾಯನು ೧೫೪೨ ರಲ್ಲಿ ಮರಣ ಹೊಂದಿದನು.

---

## ಹದಿನಾರನೆಯ ವಿಲಾಸ

## ೫. ಸದಾಶಿವರಾಯ (೧೫೪೨-೭೦)
## ಅಳಿಯ ರಾಮರಾಯ (೧೫೪೨-೬೫)

೧

### ರಾಮರಾಯನ ಸರ್ವಾಧಿಕಾರ

ಅಚ್ಯುತರಾಯನ ತರುವಾಯ ಆತನ ಎಳೆಹರೆಯ ಮಗನಾದ ವೆಂಕಟಾದ್ರಿಗೆ ಪಟ್ಟವಾಯಿತು. ಆದರೆ ಇದು ಹಲವು ಜನರ ಮನಸಿಗೆ ಬರಲಿಲ್ಲ. ಆದುದರಿಂದ ಪಟ್ಟಕ್ಕಾಗಿ ಎಳೆದಾಟವು ಉಂಟಾಯಿತು.

ಇದರಲ್ಲಿ ಮೂರು ಪಕ್ಷಗಳು ನಿರ್ಮಾಣವಾದುವು. ರಾಜ್ಯಪದಾಕಾಂಕ್ಷೆಯಿಂದ ಒಳಸಂಚುಗಳೂ ಹೋರಾಟಗಳೂ ನಡೆದುವು. ರಾಜಮಾತೆಯಾದ ವರದಾಂಬಿಕೆಯು ತನ್ನ ಮಗನಿಗೆ ಸಿಂಹಾಸನವು ಸ್ಥಿರವಾಗಬೇಕೆಂದು ಹವಣಿಸಿದಳು. ಈ ಗೊಂದಲದಲ್ಲಿ ಧೂರ್ತನೂ ಸಾಹಸಿಯೂ ಆದ ಸಲಕ ತಿಮ್ಮನೆಂಬಾತನು[೧] ಮುಂದುವರಿದನು.

ಈತನು, ಹಿಂದಿನ ಆಳಿಕೆಯಲ್ಲಿ ಯೇನಕೇನ ಪ್ರಕಾರೇಣ ತಮ್ಮ ಪ್ರಸ್ಥವನ್ನು ಬೆಳೆಸಿಕೊಂಡು ಪ್ರಬಲರಾಗಿದ್ದ ಸಲಕ ಬಂಧುಗಳನ್ನು ತನ್ನೆಡೆಗೆ ಒಲಿಸಿಕೊಂಡು ಸ್ವಾರ್ಥವನ್ನು ಸಾಧಿಸಲು ಹೊಂಚು ಹಾಕಿದನು. ಮೊದಮೊದಲು ಈತನು ರಾಜಪಕ್ಷವನ್ನು ಸೇರಿದಂತೆ ನಟನೆಯನ್ನು ಮಾಡಿದನು. ಆದರೆ ಸ್ವತಂತ್ರವೂ ಉತ್ಕಟವೂ ಆದ ಬೇರೊಂದು ಸ್ವಾರ್ಥವು ಈತನನ್ನು ಆವರಿಸಿದೆ ಎಂಬ ಸಂಶಯವು ಮುಂದೆ ರಾಜಮಾತೆಗೆ ಬಂದುದರಿಂದ ಆಕೆಯು ಈತನನ್ನು ನಂಬದಾದಳು. ಕೃಷ್ಣದೇವರಾಯನ ಕಿರಿಯ ತಮ್ಮನಾದ ರಂಗರಾಯನಿಗೆ ಸದಾಶಿವರಾಯನೆಂಬ ಮಗನಿದ್ದನು. ಅರಸುಮಕ್ಕಳಲ್ಲಿ ಈತನೆ ಹಿರಿಯನೂ ಪ್ರಬುದ್ಧನೂ ಆಗಿದ್ದುದರಿಂದ ಈತನಿಗೇ ರಾಜ್ಯವಾಗಬೇಕೆಂದು ಅಳಿಯ ರಾಮರಾಯನೂ ಆತನ ಬಂಧುಗಳೂ ಉದ್ಯೋಗವನ್ನು ನಡೆಸಿದರು.

ಸಲಕ ತಿಮ್ಮನು ಯುಕ್ತಿ ಪ್ರಯುಕ್ತಿಗಳಿಂದ ತನ್ನ ಪಕ್ಷವನ್ನು ಬಲಿಸತೊಡಗಿದನು. ಆತನ ಅನುಯಾಯಿಸಂಘವು ಬೆಳೆಯಿತು. ಇದರಿಂದ ಉಳಿದ ಪಕ್ಷದವರಿಗೆ ಭಯವು ಉಂಟಾಯಿತು. ರಾಜಮಾತೆಯಾದ ವರದಾಂಬಿಕೆಗೆ ತನ್ನ ಮಗನ-ಸುರಕ್ಷಿತತೆಯ ವಿಷಯದಲ್ಲಿ ಸಂಶಯವು ಹುಟ್ಟಿ ಆಕೆಯು ತನಗೆ ಸಹಾಯನಾಗಲು ಇಬ್ರಾಹಿಮ ಆದಿಲಶಹನನ್ನು ಬರಮಾಡಿಕೊಂಡಳು. ಧೂರ್ತನಾದ ಸಲಕತಿಮ್ಮನು ಮಾರ್ಗದಲ್ಲಿ ಆತನಿಗೆ ಹೇರಳವಾಗಿ ಹಣವನ್ನು ಸಲ್ಲಿಸಿ ಆತನನ್ನು ತಿರುಗಿ ಕಳುಹಿದನು.

---

೧. ಈ ಸಲಕ ತಿಮ್ಮನು ಅಚ್ಯುತರಾಯನ ಬೀಗರಾದ ಸಲಕ ಬಂಧುಗಳಿಂದ ಭಿನ್ನನು.

ಈ ಗೆಲವಿನಿಂದ ಉಬ್ಬಿದ ಸಲಕ ತಿಮ್ಮನು ತನ್ನ ಪ್ರಬಲ ಪ್ರತಿ ಸ್ಪರ್ಧಿಯಾದ ರಾಮರಾಯನ ಪಕ್ಷವನ್ನು ಮುರಿಬಡಿವ ಉದ್ದೇಶದಿಂದ, ರಾಮರಾಯನನ್ನೂ ಆತನ ಪಕ್ಷದ ಪ್ರಮುಖರನ್ನೂ ಸೆರೆಹಿಡಿಯಲು ಪ್ರಯತ್ನಿಸಿದನು. ರಾಮರಾಯನು ಆತನ ಕೈಯಿಂದ ತಪ್ಪಿಸಿಕೊಂಡು ಜಾರಿ ಹೋದನು. ಸದಾಶಿವರಾಯನು ಈ ಮೊದಲೆ ಜೀವಕ್ಕೆ ಹೆದರಿ ಕೊಂಡವೀಡು ಕೋಟೆಗೆ ಹೋಗಿ ಅಲ್ಲಿ ಸುರಕ್ಷಿತವಾಗಿ ನೆಲೆಸಿದ್ದನು. ಸಲಕ ತಿಮ್ಮನ ರಾಜ್ಯತೃಷ್ಣೆಗೆ ತಡೆಯಿಲ್ಲದಾಯಿತು. ಆತನು ಗುಪ್ತ ವ್ಯೂಹವನ್ನು ರಚಿಸಿ ತನ್ನ ಆಸುರೀ ಲಾಲಸೆಯ ದಾವಾನಲದಲ್ಲಿ ರಾಜ ಕುಮಾರನನ್ನೂ ಆತನ ಅನುಯಾಯಿವರ್ಗವನ್ನೂ ಬಲಿಯಾಗಿ ಅರ್ಪಿಸಿ ಸಿಂಹಾಸನವನ್ನು ಆಕ್ರಮಿಸಲಣಿಯಾದನು !

ಸಲಕ ತಿಮ್ಮನ ಈ ಅತ್ಯಾಚಾರಗಳಿಂದ ಜನರ ಮನಸುಗಳು ಕದಡಿದುವು. ಇತ್ತ ವೆಂಕಟಾದ್ರಿಯೂ ಇಲ್ಲ; ಅತ್ತ ಸದಾಶಿವರಾಯನೂ ಇಲ್ಲ; ನಡುವೆ ರಾಜವಂಶಕ್ಕೆ ಸಂಬಂಧವಿಲ್ಲದ ಈ ರಾಜಕುಲಘಾತಕನು ರಾಜ್ಯವನ್ನು ಅಪಹರಿಸುವನಲ್ಲಾ ! ಎಂದು ನಾಯಕರ ಹೃದಯಗಳು ಕ್ಷುಬ್ಧವಾದುವು. ರಾಜಕುಮಾರ ಸದಾಶಿವರಾಯನೆಡೆಗೂ ಆತನ ಸಹಾಯಕನಾದ ರಾಮರಾಯನೆಡೆಗೂ ಅವರ ಒಲವು ಹರಿಯಿತು.

ಅತ್ತ ಸಲಕ ತಿಮ್ಮನ ಕೈಯಿಂದ ಪಾರಾಗಿ ಹೋದ ರಾಮರಾಯ ನಾದರೂ ಸ್ವಸ್ಥವಾಗಿ ಕುಳಿತಿರಲಿಲ್ಲ. ಆತನು ಮೊದಲು ಪೆನುಗೊಂಡ ದಲ್ಲಿಯೂ ಆ ಮೇಲೆ ಆದವಾನಿ ಪ್ರಾಂತದಲ್ಲಿಯೂ ಸಂಚರಿಸಿ ಗುತ್ತಿ, ಗಂಡೀಕೋಟ, ಕರ್ನೂಲ ಮೊದಲಾದ ಕೋಟೆಗಳನ್ನು ಜಯಿಸಿದನು. ಸೇನಾಬಲವನ್ನು ಸಂಗ್ರಹಿಸಿ ತನ್ನ ಸಾಮರ್ಥ್ಯವನ್ನು ಸಂವರ್ಧಿಸಿ ಕೊಂಡನು. ರಾಮರಾಯನ ಪಕ್ಷವು ಬಲಿಯತೊಡಗಿತು. ರಾಜ್ಯದ ಅನೇಕ ಅಧಿಕಾರಿಗಳೂ ರಾಜಧಾನಿಯಲ್ಲಿಯ ಅನೇಕ ನಾಯಕರೂ ಆತ ನನ್ನು ಕೂಡಿದರು. ರಾಮರಾಯನು ವಿಜಯನಗರದತ್ತ ಸಾಗಿದನು.

ಈ ಗಂಡಾಂತರನ್ನು ನಿರೀಕ್ಷಿಸಿದ ಸಲಕ ತಿಮ್ಮನು ಹೆಚ್ಚಿನ ಆಶೆ ಯನ್ನು ತೋರಿ ಆದಿಲಶಹನನ್ನು ತನ್ನ ಸಹಾಯಕ್ಕೆ ಕರೆದನು. ರಾಮ

ರಾಯನ ಮತ್ತು ಸಲಕ ತಿಮ್ಮ–ಆದಿಲಶಹರ ದಳಗಳು ತುಂಗಭದ್ರೆಯ ದಂಡೆಯ ಮೇಲೆ ಯುದ್ಧಸನ್ನದ್ಧವಾಗಿ ನಿಂತುವು. ಸಲಕ ತಿಮ್ಮನು ಮೊದಲು ರಾಮರಾಯನ ಮೇಲೆ ಏರಾಟವನ್ನು ಹೂಡಬೇಕು, ಬಳಿಕ ಶಹನು ಆತನಿಗೆ ನೆರವಾಗಬೇಕು ಎಂದು ಗೊತ್ತಾಗಿದ್ದಿತು. ರಾಮ ರಾಯನು ಈ ಸಂಕೇತವನ್ನು ಹುಸಿ ಮಾಡಿ ತಾನೆ ಮುಂದೂಡಿ ಮೊದಲು ಶಹನ ಮೇಲೆ ಏರಾಟವನ್ನು ಹೂಡಿದನು. ಅನಿರೀಕ್ಷಿತವಾದ ಈ ಆಘಾತದಿಂದ ಶಹನು ದಿಙ್ಮೂಢನಾದನು. ಅತನ ಸೇನೆಯು ರಾಮ ರಾಯನ ಪ್ರಚಂಡವಾದ ಪ್ರಹಾರಗಳಿಂದ ಕಂಗೆಟ್ಟು ಓಡಲಾರಂಭಿಸಿತು.

ರಾಮರಾಯನ ಎರಡನೆಯ ಹೊಡೆತವು ಸಲಕತಿಮ್ಮನನ್ನು ನೆಲ ಕ್ಕುರುಳಿಸಿತು. ಆ ನರಾಧಮನು ದುಷ್ಟರಾದ ತನ್ನ ಒಡನಾಡಿ ಗಳೊಂದಿಗೆ ಹತನಾದನು. ರಾಮರಾಯನು ರಾಜಧಾನಿಯನ್ನು ಪ್ರವೇಶಿ ಸಿದನು. ಈ ಮುಂಚೆ ಕೊಂಡವೀಡಿನಿಂದ ಗುತ್ತಿಯ ದುರ್ಗದಲ್ಲಿ ತಂದಿ ರಿಸಿದ್ದ ಸದಾಶಿವರಾಯನನ್ನು ಬರಮಾಡಿಕೊಂಡನು. ಸದಾಶಿವ ರಾಯನ ಪಟ್ಟಾಭಿಷೇಕಸಮಾರಂಭವು ಸಡಗರದಿಂದ ನೆರವೇರಿತು (೧೫೪೩). ರಾಮರಾಯನು ಈ ಮೇರೆಗೆ ಅರಾಜಕದ ಗೊಂದಲಕ್ಕೀ ಡಾದ ವಿಜಯನಗರದಲ್ಲಿ ಸುರಾಜ್ಯವನ್ನು ಸ್ಥಾಪಿಸಿ ಸಾಮ್ರಾಜ್ಯವನ್ನು ಸ್ಥಿರಗೊಳಿಸಿದನು. ಇದರಿಂದ ಆತನಿಗೆ **ಸಾಮ್ರಾಜ್ಯಕರ್ನಾಟಕರಾಜ್ಯ ಸ್ಥಾಪನಾಚಾರ್ಯ**ನೆಂಬ ಯಥಾರ್ಥವಾದ ಬಿರುದು ಪ್ರಾಪ್ತ ವಾಯಿತು.

ರಾಮರಾಯನ ಕರ್ತೃತ್ವಬಲದಿಂದ ಸದಾಶಿವರಾಯನಿಗೆ ವಿಜಯ ನಗರದ ಸಿಂಹಾಸನವು ಲಭ್ಯವಾಯಿತು. ಆಗ ಆತನು ಇನ್ನೂ ಎಳೆಯ ನಾಗಿದ್ದನು.[೨] ರಾಮರಾಯನೋ, ಧುರಂಧರ ಕಾರ್ಯಶಾಲಿಯು. ಆದು ದರಿಂದ ಸದಾಶಿವರಾಯನು ಪೂರ್ಣವಾಗಿ ಆತನ ಅಂಕಿತದಲ್ಲಿ ವರ್ತಿಸಿ ದನು. ಮಹತ್ವಾಕಾಂಕ್ಷಿಯೂ ಚತುರನೂ ಆದ ರಾಮರಾಯನು ಸರ್ವರೀತಿಯಿಂದಲೂ ತನಗೆ ಅನುಕೂಲವಾದ ಈ ಪರಿಸ್ಥಿತಿಯನ್ನು

೨. ಆತನ ವಯಸ್ಸು ೧೬ ವರ್ಷಗಳ ಒಳಗೆ ಇದ್ದಿರಬೇಕು.

ಚೆನ್ನಾಗಿ ಉಪಯೋಗಿಸಿಕೊಂಡನು. ಆತನು ದಿನದಿನಕ್ಕೆ ತನ್ನ ಸಾಮರ್ಥ್ಯವನ್ನೂ ಅಧಿಕಾರವನ್ನೂ ಹೆಚ್ಚು ಹೆಚ್ಚು ವಿಸ್ತಾರಗೊಳಿಸಿದನು.

ಮೊದಲಿನ ಏಳೆಂಟು ವರ್ಷಗಳ ವರೆಗೆ ( ೧೫೪೨-೫೦ ) ರಾಮರಾಯನು ರಾಜಕುಮಾರನ ಪಾಲಕನೂ ಪ್ರತಿನಿಧಿಯೂ ಆಗಿ ಸದಾಶಿವರಾಯನ ಹೆಸರಿನಿಂದ ರಾಜ್ಯಭಾರವನ್ನು ನಡೆಸಿದನು. ಅಷ್ಟರಲ್ಲಿ ಸದಾಶಿವರಾಯನು ಪ್ರಬುದ್ಧನಾಗಿ ರಾಜ್ಯದಲ್ಲಿ ಹೆಚ್ಚು ಮನಸ್ಸನ್ನು ಹಾಕಲು ಹವಣಿಸಿದುದರಿಂದ, ರಾಮರಾಯನು ಆತನನ್ನು ಭದ್ರವಾದ ಸ್ಥಳದಲ್ಲಿ ಇರಿಸಿ, ಮೊದಲಿಗಿಂತಲೂ ಹೆಚ್ಚಿನ ಪ್ರತಿಷ್ಠೆಯಿಂದ ಸಮ್ರಾಜನಿಗೆ ಸಮಾನವಾದ ತನ್ನ ಅಧಿಕಾರವನ್ನು ಬೀರುತ್ತ ಸಾಮ್ರಾಜ್ಯವನ್ನು ಆಳತೊಡಗಿದನು.

ನ್ಯಾಯವಾಗಿ ಸಿಂಹಾಸನಕ್ಕೆ ಬಾಧ್ಯಸ್ಥನಾದ ಅರಸನನ್ನು ಈ ರೀತಿಯಾಗಿ ಮೂಲೆಗುಂಪು ಮಾಡಿದುದು ಅನೇಕರಿಗೆ ರುಚಿಸಲಿಲ್ಲ. ಹೆಚ್ಚೇನು ! ರಾಮರಾಯನ ಸೋದರರಾದ ವೆಂಕಟಾದ್ರಿ ತಿರುಮಲರೂ ಆತನ ಈ ವರ್ತನೆಗೆ ಕೆಲಕಾಲ ವಿರೋಧವನ್ನು ತೋರಿದರು. ಈ ಪರಿಸ್ಥಿತಿಯು ಮುಂದೆ ಹತ್ತು-ಹನ್ನೆರಡು ವರ್ಷಗಳ ವರೆಗೆ ನಡೆಯಿತು. (೧೫೫೦-೬೩). ಇಷ್ಟರಿಂದಲೇ ರಾಮರಾಯನು ತೃಪ್ತಿಹೊಂದಲಿಲ್ಲ. ಈ ಅವಧಿಯಲ್ಲಿ ಸರ್ವತಂತ್ರಸ್ವತಂತ್ರತೆಯಿಂದ ಸರ್ವಾಧಿಕಾರಿಯಾಗಿ ಸಾಮ್ರಾಜ್ಯದ ಸೂತ್ರಗಳನ್ನು ಸಾಗಿಸುತ್ತಿದ್ದುದು ಸಾಲದುದಾಗಿ, ಆತನು ಸದಾಶಿವರಾಯನ ಅಧಿಕಾರವನ್ನು ಪೂರ್ಣವಾಗಿ ಹಾರಿಸಿ ಸಮ್ರಾಜನ ಸಕಲ ವೈಭವವನ್ನೂ ಬಿರುದುಗಳನ್ನೂ ಎತ್ತಿಕೊಂಡು ತನ್ನೊಬ್ಬನ ಹೆಸರಿನಿಂದಲೆ ರಾಜ್ಯಕಾರ್ಯಗಳನ್ನು ನಡೆಸಲಾರಂಭಿಸಿದನು. ಈ ಮೇರೆಗೆ ಸದಾಶಿವರಾಯನ ಆಳಿಕೆಯೆಂದರೆ ವ್ಯವಹಾರದಲ್ಲಿ ಪ್ರತ್ಯಕ್ಷವಾಗಿ ರಾಮರಾಯನ ಆಳಿಕೆಯೆ ಆಗಿದೆ ಎಂದು ಹೇಳಬಹುದು.

ಇಷ್ಟಾದರೂ ತನಗೆ ಪಟ್ಟಾಭಿಷೇಕವನ್ನು ಮಾಡಿಸಿಕೊಳ್ಳುವ ಸಾಹಸವು ರಾಮರಾಯನಿಗೆ ಆಗಲಿಲ್ಲ. ರಾಮರಾಯನ ಸೋದರರಲ್ಲಿ ಹಿರಿಯನಾದ ತಿರುಮಲನು ಮಂತ್ರಿಯೂ ಕಿರಿಯನಾದ ವೆಂಕಟಾ

ಧ್ರಿಯೂ ಸೇನಾಪತಿಯೂ ಆಗಿ ರಾಮರಾಯನ ರಾಜ್ಯಕಾರ್ಯದಲ್ಲಿ ಬಹಳ ನೆರವಾದರು.

ರಾಮರಾಯನು ಅರವೀಡು ಮನೆತನದವನು. ಈತನು ಕೃಷ್ಣದೇವರಾಯನ ಅಳಿಯನಾದುದರಿಂದ ಅಳಿಯ ರಾಮರಾಯನೆಂದು ಪ್ರಸಿದ್ಧಿಪಡೆದನು. ಈತನು ಕೃಷ್ಣದೇವರಾಯ–ಅಚ್ಯುತರಾಯರ ಕಾಲದಿಂದಲೂ ಬೇರೆ ಬೇರೆ ಪ್ರಾಂತಗಳ ರಾಜ್ಯಭಾರವನ್ನು ನಡೆಸುತ್ತ ತನ್ನ ಕರ್ತೃತ್ವಶಕ್ತಿಯನ್ನು ಬೀರತೊಡಗಿದ್ದನು. ರಾಮರಾಯನು ಕೆಚ್ಚೆದೆಯ ಕಡುಗಲಿಯಾಗಿದ್ದನು. ಈಗಂತೂ ಸಾಮ್ರಾಜ್ಯದ ಸೂತ್ರಚಾಲಕನಾದ ಈತನು ಸಾಮ್ರಾಜ್ಯದ ಒಳಹೊರ ಹಗೆಗಳ ಪುಂಡನ್ನು ಹಣಿದು ಸಾಮ್ರಾಜ್ಯದಲ್ಲಿ ಶಾಂತತೆಯನ್ನು ಸ್ಥಾಪಿಸಿ, ಪರರಾಷ್ಟ್ರಗಳಲ್ಲಿ ಸಾಮ್ರಾಜ್ಯದ ಪ್ರಭಾವವನ್ನು ಹಬ್ಬಿಸಿ, ಸಾಮ್ರಾಜ್ಯದ ವೈಭವವನ್ನು ಹೆಚ್ಚಿಸುವ ಕಾರ್ಯದಲ್ಲಿ ಪೂರ್ಣವಾಗಿ ನಿರತನಾದನು.

ಈ ಆಳಿಕೆಯ ಆರಂಭದಲ್ಲಿ ತ್ರಾವಣಕೋರ ಪ್ರಾಂತದಲ್ಲಿ ಮತ್ತೆ ಅಶಾಂತಿಯುಂಟಾಯಿತು. ತಿರುವಾಡಿಯ ರಾಜನಾದ ಉಣ್ಣೀಕೇರಳ ವರ್ಮನು ಅವಿಧೇಯನಾದನು. ಆತನನ್ನು ದಂಡಿಸಲು ರಾಮರಾಯನ ಅಣ್ಣನ ಮಗನಾದ ವಿಠ್ಠಲನು ಹೊರಟನು. ಮಧುರೆಯ ಮಂಡಲಾಧಿಕಾರಿಯಾದ ವಿಶ್ವನಾಥನಾಯಕನೂ ಕೆಳದಿಯ ಸದಾಶಿವ ನಾಯಕನೂ ಆತನಿಗೆ ಸಹಾಯವಾದರು. ವಿಜಯನಗರದ ಸೈನ್ಯವು ಕೇರಳ ದೇಶವನ್ನು ಹೊಕ್ಕಿತು; ಆದರೆ ಕೇರಳ ದೇಶದಲ್ಲಿ ವಾಸವಾಗಿದ್ದ ಸೆಂಟ ಫ್ರಾನ್ಸಿಸ್ ಝವಿಯರ್ ಎಂಬ ಸತ್ಪುರುಷನ ಮಧ್ಯಸ್ಥಿಕೆಯಿಂದ ರಕ್ತಪಾತದ ಪ್ರಸಂಗವು ಬರದೆ ಶಾಂತಿಪುರಸ್ಸರವಾಗಿ ಈ ದಂಡಯಾತ್ರೆಯು ಕೊನೆಗಂಡಿತು (೧೫೪೩–೪೪).

ಇದಾದ ಕೆಲವು ದಿನಗಳಲ್ಲಿ ಅರಗನಾಡಿನಲ್ಲಿ ಗಲಭೆಯುಂಟಾಯಿತು. ಚಂದ್ರಗುತ್ತಿಯ ನಾಯಕನು ಸ್ವೈರವಾಗಿ ವರ್ತಿಸತೊಡಗಿದ್ದುದರಿಂದ ಸಾಮ್ರಾಜ್ಯದ ಅಧಿಕಾರಕ್ಕೆ ಬಾಧೆಯುಂಟಾಯಿತು. ಸದಾಶಿವನಾಯಕನು ಆ ಪುಂಡರನ್ನು ದಂಡಿಸಿ ಅರಗಪ್ರಾಂತದಲ್ಲಿ ಮತ್ತೆ ವಿಜಯನಗರದ ಶಾಸನವನ್ನು ಅಳವಡಿಸಿದನು (೧೫೫೦).

ಅತ್ತ ಪೋರ್ತುಗೀಜರೊಡನೆ ಬೇರೆ ವಿಧದ ಸಂಬಂಧಗಳು ಉಂಟಾದುವು. ಪೋರ್ತುಗೀಜರು ಕೃಷ್ಣದೇವರಾಯನೊಡನೆ ಪೂರ್ಣ ಸಖ್ಯದಿಂದ ನಡೆದುಕೊಂಡಿದ್ದರು ಈ ಸ್ನೇಹವು ಆತನ ತರುವಾಯ ಉಳಿದಿರಲಿಲ್ಲ. ಯಾವ ಉಪಾಯದಿಂದಲಾದರೂ ತಮ್ಮ ಸಾಮರ್ಥ್ಯ ವನ್ನು ಬೆಳೆಸಿ ಈ ದೇಶದಲ್ಲಿ ತಮ್ಮ ಧರ್ಮ ಮತ್ತು ರಾಜ್ಯ ಇವುಗಳ ಪ್ರಸಾರವನ್ನು ಮಾಡಬೇಕೆಂಬ ಆಶೆಯು ಈಗೀಗ ಪ್ರಬಲವಾಗಿ ಅವರನ್ನು ಆವರಿಸಿತ್ತು. ಈ ನೀತಿಗೆ ಅನುಗುಣವಾಗಿ ಗೋವೆಯ ಅಧಿಕಾರಿಯಾದ ಮಾರ್ಟಿನ್ ಆಲಫೊನ್ಸೊ ಡಿಸೋಜನು ತಿರುಪತಿ ದೇವಾಲಯವನ್ನು ಸುಲಿದು ಅಲ್ಲಿಯ ಅಪಾರವಾದ ದ್ರವ್ಯವನ್ನು ಅಪ ಹರಿಸಲು ದಂಡನ್ನು ಕಳುಹಿದನು. ಆದರೆ ರಾಮರಾಯನ ಜಾಗರೂ ಕತೆಯಿಂದ ಆತನ ಈ ಉದ್ದೇಶವು ಸಫಲವಾಗಲಿಲ್ಲ (೧೫೪೪).

ಮುಂದೆ ಕೆಲದಿನಗಳಲ್ಲಿ ವಿಜಯನಗರ ಮತ್ತು ಪೋರ್ತುಗೀಜರು ಇವರಲ್ಲಿ ಸ್ನೇಹದ ಸಂಧಾನಗಳು ನಡೆದುವು. ಪೋರ್ತುಗೀಜರು ಕುದುರೆ ಗಳನ್ನೆಲ್ಲ ವಿಜಯನಗರದವರಿಗೇ ಪೂರಯಿಸತಕ್ಕದು; ವಿಜಾಪುರದವರಿಗೆ ಎಷ್ಟೂ ಕಳುಹಕೂಡದು. ವಿಜಯನಗರದ ಸರಕುಗಳು ಹೊನಾವರ, ಬಸರೂರ ಮಾರ್ಗವಾಗಿ ಪೋರ್ತುಗೀಜ ವರ್ತಕರ ಮುಖಾಂತರ ಸಮುದ್ರಪ್ರದೇಶಗಳಿಗೆ ಮಾರಾಟಕ್ಕೆ ಹೋಗುವಂತೆಯೂ ವಿಜಯ ನಗರದ ಬಟ್ಟೆ, ಕಬ್ಬಿಣ, ಸೋರುಪ್ಪು ಮೊದಲಾದ ಪದಾರ್ಥಗಳನ್ನು ವಿಜಾಪುರ ರಾಜ್ಯದಲ್ಲಿ ಹೋಗಗೊಡದೆ ಅಂಕೋಲಾ, ಹೊನಾವರ ಮಾರ್ಗವಾಗಿ ಪೋರ್ತುಗೀಜ ವರ್ತಕರಿಗೆ ದೊರೆವಂತೆಯೂ ನೋಡಿಕೊಳ್ಳಬೇಕು. ವಿಜಾಪುರದ ಆದಿಲಶಹನೊಡನೆ ಯುದ್ಧವನ್ನು ಹೂಡಿ ಆತನ ಪ್ರದೇಶವನ್ನು ಕಸಿದುಕೊಳ್ಳಬೇಕು. ಮುಂತಾದ ಅಂಶ ಗಳು ಈ ಸಂಧಾನದಲ್ಲಿ ನಿರ್ದಿಷ್ಟವಾಗಿದ್ದುವು (೧೫೪೬-೪೭). ಆದರೆ ಮುಂದೆ ಅಲ್ಪಾವಧಿಯಲ್ಲಿಯೇ ಪೋರ್ತುಗೀಜರು ಆದಿಲಶಹನೊಡನೆ ಮೈತ್ರಿಯ ಸಂಬಂಧವನ್ನು ಬೆಳೆಸಿ ಸ್ವತಂತ್ರವಾಗಿ ಒಪ್ಪಂದವನ್ನು ಮಾಡಿಕೊಂಡುದರಿಂದ ( ೧೫೪೮ ) ಈ ಒಡಂಬಡಿಕೆಯು ಪ್ರಯೋಜನ ಕಾರಿಯಾಗಿ ಪರಿಣಮಿಸಲಿಲ್ಲ.

ಈ ನಡುವೆ ಪಶ್ಚಿಮ ದಂಡೆಯ ಮೇಲೆ ಕಣ್ಣಿಟ್ಟಿದ್ದ ಪೋರ್ತುಗೀಜರು ವಿಜಯನಗರದ ಕೆಲವು ಚಿಕ್ಕ ಚಿಕ್ಕ ಮಾಂಡಲಿಕ ರಾಜ್ಯಗಳಲ್ಲಿ ಆಕ್ರಮಣಗಳನ್ನು ಆರಂಭಿಸಿದ್ದರು. ಅವರು ಭಟಕಳದ ಮೇಲೆ ಎರಡು ಸಲ (೧೫೪೩ ಮತ್ತು ೧೫೪೮)ದಾಳಿಯನ್ನಿಟ್ಟರು. ಅಲ್ಲಿಯ ರಾಣಿಯು ಬಹಳ ಶೌರ್ಯದಿಂದ ಕೆಲಕಾಲ ಪೋರ್ತುಗೀಜರನ್ನು ಪ್ರತಿಭಟಿಸಿದಳು. ಆದರೆ ಕೊನೆಗೆ ಆಕೆಯು ಸೋತು ಕಾಣಿಕೆಯನ್ನು ಕೊಡಲೊಪ್ಪ ಬೇಕಾಯಿತು. ಮುಂದೆ ಉಲ್ಲಾಳದ ರಾಣಿಯ ಮೇಲೆಯೂ ಅದೇ ಪ್ರಸಂಗವು ಒದಗಿತು (೧೫೫೬). ಪೋರ್ತುಗೀಜರು ಮಂಗಳೂರನ್ನು ಸುಲಿದರು. ಅಲ್ಲಿಯ ಹಿಂದು ದೇವಾಲಯವನ್ನು ಹಾಳುಮಾಡಿದರು. ಮುಂದೆ ಅವರು ಅಲ್ಲಿ ಕೋಟೆಯನ್ನು ಕಟ್ಟಿಸಿದರು (೧೫೬೬).

ಅತ್ತ ಪೂರ್ವ ದಂಡೆಯ ಸಮಾಚಾರವನ್ನು ವಿಚಾರಿಸುವ. ಮದ್ರಾಸದ ಬಳಿಯ ಮೈಲಾಪುರ ಎಂಬಲ್ಲಿ ಪೋರ್ತುಗೀಜರು ಸೆಂಟ ಥೋಮ ಎಂಬ ಪಾಳ್ಯವನ್ನು ಕೆಲಕಾಲ ಹಿಂದೆ ಸ್ಥಾಪಿಸಿಕೊಂಡಿದ್ದರು (೧೫೨೨). ಇಲ್ಲಿ ಸ್ವಲ್ಪ ದಿನಗಳಲ್ಲಿ ಅವರ ವ್ಯಾಪಾರವು ಅಭಿವೃದ್ಧಿಹೊಂದಿ, ಈಸ್ಥಳದ ಮಹತ್ವವು ಬೆಳೆಯಿತು. ಇಲ್ಲಿಯ ಪಾದ್ರಿಗಳು ನೆರೆಹೊರೆಯ ಹಿಂದು ದೇವಾಲಯಗಳನ್ನು ಹಾಳುಮಾಡಿ ತಮ್ಮ ಪ್ರಾರ್ಥನಾಮಂದಿರಗಳನ್ನು ಕಟ್ಟಿಕೊಳ್ಳುವ ಉಪಕ್ರಮಗಳನ್ನು ಹೂಡಿದ್ದರು (೧೫೪೮). ರಾಮರಾಯನು ಈ ಕಾಲದಲ್ಲಿ ಪೋರ್ತುಗೀಜರ ಸಖ್ಯವನ್ನು ಬಯಸುತ್ತಿದ್ದನಾದುದರಿಂದ ಅತ್ತ ಹೆಚ್ಚು ಲಕ್ಷವನ್ನು ಪೂರಯಿಸಲಿಲ್ಲ. ಆದರೆ ನಡುವೆ ಒಮ್ಮೆ ಆತನು ಒಬ್ಬ ಪೋರ್ತುಗೀಜ ಕುಚೋದ್ಯಗಾರನ ಮೋಸದ ಮಾತುಗಳನ್ನು ನಂಬಿ ಧನದ ಆಸೆಯಿಂದ ಈ ಪಾಳ್ಯದ ಮೇಲೆ ದಂಡೆತ್ತಿ ಹೋದನು. ಆಗ ಪಾಳ್ಯದ ಹಿರಿಯರು ಸಾಮೋಪಚಾರವನ್ನು ಮುಂದೆಮಾಡಿದರು. ಅದನ್ನು ಮನ್ನಿಸಿ ಆತನು ಸಿಕ್ಕಷ್ಟು ಕಪ್ಪವನ್ನು ಸೆಳೆದುಕೊಂಡು ತಿರುಗಿದನು.

ಮುಂದೆ ಬರುಬರುತ್ತ ಈ ಪಾಳ್ಯದ ಕಾರ್ಯಕಲಾಪಗಳು ಇನ್ನೂ ಹೆಚ್ಚಾಗಿ ಬೆಳೆದುವು. ಸ್ವಲ್ಪಕಾಲದಲ್ಲಿ ಇದು ದ್ವೀಪಾಂತರದ

ವ್ಯಾಪಾರದ ಕೇಂದ್ರವಾಗಿ ಘನತೆಯನ್ನು ಪಡೆಯಿತು. ಪೂರ್ವದಂಡೆಯ ಪ್ರದೇಶದಲ್ಲಿ ಹುಟ್ಟುವ ನಯವಾದ ಬಟ್ಟೆಗಳನ್ನು ಪೋರ್ತುಗಾಲ ದೇಶಕ್ಕೂ ಮಲಕ್ಕಾ ದ್ವೀಪಕ್ಕೂ ಕಳುಹಿ ಕಳುಹಿ ಇಲ್ಲಿಯ ವರ್ತಕರು ಧನಾಢ್ಯರಾದರು.

ಇದಲ್ಲದೆ ಆಚೆಗೆ ಪೂರ್ವದಂಡೆಯ ದಕ್ಷಿಣ ತುದಿಯಲ್ಲಿಯೂ ಪೋರ್ತುಗೀಜರ ವರ್ಚಸ್ಸು ಈ ಕಾಲದಲ್ಲಿ ಬೆಳೆಯುತ್ತಲಿತ್ತು. ಈ ಪ್ರದೇಶಕ್ಕೆ ಮೀನದ ದಂಡೆಯೆಂದು ಹೆಸರು. ಇಲ್ಲಿ ಪಾರವ ಎಂಬ ಮೀನಗಾರ ಜನಾಂಗವು ವಾಸಿಸುತ್ತಿದ್ದಿತು. ಈ ಪಾರವರು ಕ್ರಿಸ್ತ ಧರ್ಮವನ್ನು ಸ್ವೀಕರಿಸುವುದಲ್ಲದೆ ಇವರ ನಾಯಕನಾದ ಪುನ್ನೈ ಕಯಾಲನು ಪೋರ್ತುಗೀಜರ ಅಂಕೆಯಲ್ಲಿದ್ದನು. ಈ ಪ್ರಾಂತದಲ್ಲಿ ವಿಜಯನಗರದ ಅಧಿಕಾರಿಯಾಗಿದ್ದ ವಿಠ್ಠಲನಿಗೆ ಇವರಿಂದ ಉಪದ್ರವ ಗಳು ಉಂಟಾದುವು. ಆದುದರಿಂದ ವಿಠ್ಠಲನು ಪಾರವರು ಮತ್ತು ಪೋರ್ತುಗೀಜರು ಈ ಉಭಯರ ಪಾರುಪತ್ಯಕ್ಕಾಗಿ ದಂಡಯಾತ್ರೆಯನ್ನು ಹೊರಡಿಸಿದನು. ಇವರು ಬೇಗನೆ ವಿಜಯನಗರದ ಉಗ್ರಶಾಸನಕ್ಕೆ ಗುರಿಯಾಗಿ ವಿನಮ್ರರಾದರು (೧೫೪೪).

ಆದರೆ ಹೀಗೆ ಕುಂದಿದಂತೆ ತೋರಿದ ಬೆಂಕೆಯು ನಂದಲಿಲ್ಲ. ಮುಂದೆ ಸ್ವಲ್ಪ ದಿನಗಳಲ್ಲಿ ಪೋರ್ತುಗೀಜರು ಮತ್ತು ಪಾರವರು ಮತ್ತೆ ವಿಜಯ ನಗರಕ್ಕೆ ತೊಂದರೆಯನ್ನು ಕೊಡಲು ಆರಂಭಿಸಿದರು (೧೫೪೯). ಕೋರಿಯ ಎಂಬ ಪೋರ್ತುಗೀಜ ನಾಯಕನು ರಾಮೇಶ್ವರದ ಬಳಿಯಲ್ಲಿ ದಂಡನ್ನು ಸಜ್ಜುಮಾಡಿಕೊಂಡು ಕುಳಿತು ಅಲ್ಲಿಗೆ ಹೋಗುಬರುವ ಯಾತ್ರಿಕರಿಂದ ತಲೆಪಟ್ಟಿಯನ್ನು ಎತ್ತುವುದು ಮೊದಲಾದ ಹಿಂಸೆಯನ್ನು ನಡೆಸಿದನು. ವಿಠ್ಠಲನು ಕೂಡಲೆ ದಂಡನ್ನು ಕಳುಹಲು ಕೋರಿ ಯನು ಪಲಾಯನ ಹೇಳಿದನು. ಇಷ್ಟರಿಂದಲೆ ಈ ತಿಕ್ಕಾಟವು ಕೊನೆ ಗಾಣಲಿಲ್ಲ. ಪೋರ್ತುಗೀಜರೂ ಪಾರವರೂ ವಿಜಯನಗರದವರೊಡನೆ ವೈರವನ್ನು ಮುಂದುವರಿಸಿದರು. ಕಡೆಗೆ ವಿಠ್ಠಲನು ಪ್ರಬಲವಾದ ದಂಡಯೋಜನೆಯನ್ನು ಕೈಕೊಂಡು ಹಗೆಗಳ ಪುಂಡನ್ನು ಸದೆದಿಕ್ಕಿ

ಅವರ ಮೇಲೆ ಕಪ್ಪವನ್ನು ಹೇರಿದನು. ಈ ವಿಜಯಗಳ ಸ್ಮಾರಕವಾಗಿ ರಾಮರಾಯನು **ಕನ್ಯಾಕುಮಾರೀ ವಿಜಯಸ್ತಂಭಸ್ಥಾಪನಾಚಾರ್ಯ** ಎಂಬ ಬಿರುದನ್ನು ಧರಿಸಿದನು.

ಈ ನಡುವೆ ಲಂಕೆಯ ರಾಜ್ಯದೊಡನೆ ಕಲಹಪ್ರಸಂಗವು ಉಂಟಾಯಿತು. ಕಂಡಿಯ ರಾಜನು ಪ್ರತಿವರ್ಷವು ವಿಜಯನಗರಕ್ಕೆ ಕಪ್ಪವನ್ನು ಸಲ್ಲಿಸುತ್ತಿದ್ದನು. ವಾಡಿಕೆಯಂತೆ ಆತನು ಅದನ್ನು ತೆರದೆ ಇದ್ದುದರಿಂದ ವಿಠ್ಠಲನು ಮದುರೆಯ ವಿಶ್ವನಾಥನಾಯಕನೊಂದಿಗೆ ದಂಡಯಾತ್ರೆಯನ್ನು ಮಾಡಿ ಆತನಿಂದ ಮೊದಲಿನಂತೆ ಕಪ್ಪವನ್ನು ಸೆಳೆದುಕೊಂಡನು (೧೫೪೬).

ಮುಂದೆ ಕೆಲವು ವರ್ಷಗಳು ಗತಿಸಲು ಕಂಡಿಯ ರಾಜನಿಂದ ಬರುವ ಕರಭಾರವು ಮತ್ತೆ ನಿಂತುಹೋಯಿತು. ಎಂದಿನಂತೆ ಆತನನ್ನು ಮತ್ತೆ ವಿಜಯನಗರಕ್ಕೆ ವಿಧೇಯನನ್ನಾಗಿ ಮಾಡಲು ಮದುರೆಯ ವಿಶ್ವನಾಥನಾಯಕನ ಮಗನಾದ ಕೃಷ್ಣಪ್ಪನಾಯಕನು ದಂಡಯಾತ್ರೆಯನ್ನು ಹೊರಡಿಸಿದನು. ಅತ್ತ ಕಂಡಿಯ ರಾಜನೂ ದೊಡ್ಡ ಸೇನೆಯನ್ನು ನೆರೆಸಿ ವಿಜಯನಗರವನ್ನು ಇದಿರಿಸುವ ಸಿದ್ಧತೆಯನ್ನು ಮಾಡಿದನು. ಪೋರ್ತುಗೀಜರ ದಳವೂ ಕಂಡಿಯ ಸೇನೆಗೆ ನೆರವಾಯಿತು. ಪುಟ್ಟಲಂ ಎಂಬೂರ ಬಳಿಯಲ್ಲಿ ಕಾಳೆಗವೆಸಗಿತು. ಕಂಡಿಯ ರಾಜನು ಸೋತು ರಣಾಂಗಣದಲ್ಲಿ ಮಡಿದನು. ಕೃಷ್ಣಪ್ಪನಾಯಕನು ಲಂಕೆಯ ರಾಜ್ಯದ ಮೇಲೆ ವಿಜಯನಗರದ ಅಧಿಕಾರವನ್ನು ಸ್ಥಾಪಿಸಿ ಹಿಂದಿರುಗಿದನು (೧೫೬೩).

---

## ಹದಿನೇಳನೆಯ ವಿಲಾಸ

# ೫. ಸದಾಶಿವರಾಯ (೧೫೪೨-೭೦)
# ಅಳಿಯ ರಾಮರಾಯ (೧೫೪೨-೬೫)

೨

## ಮಹಮ್ಮದೀಯರೊಡನೆ ಪ್ರಸಂಗಗಳು

ಈ ಮೇರೆಗೆ ರಾಮರಾಯನ ಆಡಳಿತದಲ್ಲಿ ಸಾಮ್ರಾಜ್ಯದ ಅಂತರ್ಗತ ಉಪಸರ್ಗಗಳು ನಂದುತ್ತ ಸಾಮ್ರಾಜ್ಯದ ಪ್ರಭಾವವು ದಕ್ಷಿಣಕ್ಕೆ ಲಂಕೆಯ ವರೆಗೆ ಪ್ರಸ್ಥಾಪಿತವಾಗುತ್ತಿರಲು,ಅತ್ತ ಉತ್ತರದಲ್ಲಿ ಮಹಮ್ಮದೀಯ ರಾಜ್ಯಗಳೊಡನೆ ಕೆಲವು ಅಪೂರ್ವವಾದ ಸನ್ನಿವೇಶಗಳು ಉಂಟಾದುವು. ಈ ಕಾಲದಲ್ಲಿ ಈ ಸುಲ್ತಾನರ ಸ್ಥಿತಿಯು ಸಮಾಧಾನಕರವಾಗಿರಲಿಲ್ಲ. ಅವರಲ್ಲಿ ಕೆಲರು ಬಹಳ ದುರ್ಬಲರಾಗಿದ್ದರು. ಅವರೊಳಗೆ ಪರಸ್ಪರ ಮತ್ಸರ–ದ್ವೇಷಗಳೂ ಬೆಳೆದಿದ್ದುವು. ಅವರಲ್ಲಿಯ ಅಂತಃಕಲಹಗಳು ಮೇಲಿಂದ ಮೇಲೆ ವಿಕೋಪಕ್ಕೆ ಹೋಗಿ ಅವರು ರಾಮರಾಯನ ಸಹಾಯವನ್ನು ಬೇಡುತ್ತಿದ್ದರು.

ಈ ಸುಲ್ತಾನರಲ್ಲೊಬ್ಬನೂ ವಿಜಯನಗರದ ನೆರೆಯಲ್ಲಿದ್ದವನೂ ಆದ ವಿಜಾಪುರದ ಆದಿಲಶಹನು ವಿಜಯನಗರಕ್ಕೆ ಪ್ರತಿಸ್ಪರ್ಧಿಯಾಗಿದ್ದನು. ಈ ಆಳಿಕೆಯ ಆರಂಭದಲ್ಲಿ ನಡೆದ ಪಟ್ಟದ ಗಲಭೆಯ ಸಂಧಿಯನ್ನು ನೋಡಿಕೊಂಡು ಇಬ್ರಾಹಿಮ ಆದಿಲಶಹನು ಆದವಾನಿ ಕೋಟೆಯ ಮೇಲೆ ದಂಡನ್ನು ಕಳುಹಿದನು. ಇದನ್ನು ಇದಿರಿಸಿ ಆದವಾನಿಯನ್ನು ಕಾಯಲು ವೆಂಕಟಾದ್ರಿಯು ಪಯಣಬೆಳೆಸಿದನು. ಶಹನ ಸೇನಾಪತಿಯಾದ ಅಸದಖಾನನು ವಿಜಯನಗರದ ಬಲವನ್ನು ನೋಡಿ ಕಪಟೋಪಾಯವನ್ನು ಹುಡುಕಿದನು. ಆತನು ಹಿಂದೆಗೆವಂತೆ ನಟಿಸಲು ವೆಂಕಟಾದ್ರಿಯು ಅಜಾಗರೂಕತೆಯಿಂದ ಆತನನ್ನು ಬೆಂಬತ್ತಿದನು. ಆಗ

ಖಾನನು ಥಕ್ಕನೆ ಹೊರಳಿ ವೆಂಕಟಾದ್ರಿಯ ಮೇಲೆ ಬಲವಾಗಿ ಎರಗಿದನು. ಎಲ್ಲ ಸನ್ನಾಹ-ಸಾಮಗ್ರಿಯನ್ನು ತೊಲಗಿ ವೆಂಕಟಾದ್ರಿಯು ಓಡಿಹೋಗುವ ಪ್ರಸಂಗವು ಬಂದಿತು. ಮುಂದೆ ಎರಡೂ ರಾಜ್ಯಗಳ ನಡುವೆ ಶಾಂತಿಸಂಧಾನವು ನಡೆಯಿತು (೧೫೪೨).

ಮುಂದೆ ಕೆಲ ದಿನಗಳು ಹೋದಬಳಿಕ ತಂತ್ರಪಟುವಾದ ಆದಿಲಶಹನು ಗೌಪ್ಯವಾಗಿ ಅಹಮುದನಗರದ ನಿಜಾಮುಶಹನ ಮನಸವನ್ನೊಲಿಸಿ ವಿಜಯನಗರ ಮತ್ತು ಬಿದರ ರಾಜ್ಯಗಳ ಮೇಲೆ ಬೇರೆಬೇರೆಯಾಗಿ ಏರಾಟಮಾಡುವ ಹಂಚಿಕೆಯನ್ನು ಹಾಕಿದನು. ಆ ಮೇರೆಗೆ ಆದಿಲಶಹನು ವಿಜಯನಗರ ರಾಜ್ಯದಲ್ಲಿ ಕೊಳ್ಳೆಯಿಟ್ಟನು.ಬಿದರದ ಸುಲ್ತಾನನು ನಿಜಾಮುಶಹನ ಪೆಟ್ಟಿನಿಂದ ಕಂಗೆಟ್ಟು ವಿಜಾಪುರಕ್ಕೆ ಓಡಿಬರಲು ಆದಿಲಶಹನು ಆತನನ್ನು ಸೆರೆಯಲ್ಲಿರಿಸಿದನು. ಈ ಅನಾಹೂತಕ್ಕೆ ನಿಜಾಮುಶಹನೆ ಪ್ರಧಾನಪುರುಷನೆಂದು ರಾಮರಾಯನು ಕಂಡು ಅಹಮುದನಗರದ ಮೇಲೆ ಉಗ್ರವಾದ ದಂಡೋಪಾಯವನ್ನು ಕೈಕೊಂಡನು.

ಮಾರ್ಗದಲ್ಲಿ ತಾನು ಗೋವಳಕೊಂಡದ ಸಮಾಚಾರವನ್ನು ತೆಗೆದುಕೊಳ್ಳಬೇಕು, ತಿರುಮಲನು ಬಿದರವನ್ನು ಉಪಚರಿಸಬೇಕು, ಸೊನ್ನಲಾಪುರದ (ಸೋಲಾಪುರ) ಹಂಡೆ ಹನುಮಪ್ಪನಾಯಕನು ಅಹಮುದನಗರವನ್ನು ಸೂರೆಗೊಳ್ಳಬೇಕು ಎಂಬ ಯೋಜನೆಯು ನಿರ್ಧರಿಸಲಾಯಿತು. ಮೂರೂ ಸುಲ್ತಾನರ ಮೇಲೆ ಪ್ರಚಂಡವಾದ ಅಭಿಯೋಗಸತ್ರವು ಆರಂಭವಾಯಿತು. ವಿಜಯನಗರದವರು ಕಲ್ಯಾಣಪಟ್ಟಣವನ್ನು ಕಿತ್ತುಕೊಂಡು ಹಾಳುಮಾಡಿದರು. ಬಿದರ ಮತ್ತು ಗೋವಳಕೊಂಡದ ಶಹರು ಸೋತು ದಿಕ್ಕುಗೆಟ್ಟು ಓಡಿದರು. ಅತ್ತ ಹನುಮಪ್ಪನಾಯಕನು ಅಹಮುದನಗರವನ್ನು ಪಾದಾಕ್ರಾಂತಮಾಡಿ ಹರಗಿ ಔಡಲವನ್ನು ಬಿತ್ತಿಸಿದನು. ನಿಜಾಮುಶಹನು ನಾಯಕನಿಗೆ ಕೈಸೆರೆಯಾದನು. ಶಹನ ಕೊಬ್ಬೆಲ್ಲವೂ ಅಡಗಿ ಆತನು ಜರ್ಜರಿತನಾದನು. ಬಳಿಕ ಆತನು ರಾಮರಾಯನ ಕರುಣೆಯಿಂದ ಬಿಡುಗಡೆಹೊಂದಿ ಭಗ್ನಮನೋರಥನೂ ಬದ್ಧವೈರನೂ ಆಗಿ ತನ್ನ ರಾಜ್ಯಕ್ಕೆ ಹೋದನು.

ಅನಂತರ ಸ್ವಲ್ಪದಿನಗಳಲ್ಲಿ ರಾಮರಾಯನು ನಿಜಾಮುಶಹ ಮತ್ತು ಕುತುಬಶಹ ಇವರೊಡನೆ ಸೇರಿ ಆದಿಲಶಹನನ್ನು ಹಣಿವ ಹಂಚಿಕೆಯನ್ನು ಹಾಕಿದನು. ರಾಮರಾಯನು ರಾಯಚೂರ ಮೇಲೆ ಕಣ್ಣಿಟ್ಟನು. ನಿಜಾಮ ಮತ್ತು ಕುತುಬಶಹರು ತಾವು ಕಳೆದುಕೊಂಡ ಪ್ರಾಂತಗಳನ್ನು ಮರಳಿ ಗಳಿಸಲು ಎಳಸಿದರು. ಈ ಮೇರೆಗೆ ಕುತುಬಶಹನು ಕಲಬುರ್ಗಿಯ ವರೆಗಿನ ಪ್ರಾಂತವನ್ನು ಹಿಡಿದುಕೊಂಡನು. ನಿಜಾಮಶಹನು ವಿಜಾಪುರ ರಾಜ್ಯದಲ್ಲಿ ನುಗ್ಗಿ ಕೋಲಾಹಲವನ್ನು ಎಬ್ಬಿಸಿದನು. ರಾಮರಾಯನು ರಾಯಚೂರ ಮೇಲೆ ಕಳುಹಿದ ವೆಂಕಟಾದ್ರಿಯು ಭೀಮಾತೀರದಲ್ಲಿ ಆದಿಲಶಹನನ್ನು ಸೋಲಿಸಿದನು. ಇದರಿಂದ ಹಣ್ಣಾದ ಆದಿಲಶಹನು ಅಸದಖಾನನ ಆಲೋಚನೆಯಂತೆ ರಾಮರಾಯನೊಡನೆ ಒಡಂಬಡಿಕೆಯನ್ನು ಮಾಡಿಕೊಂಡನು. ಹೀಗೆ ರಾಮರಾಯನನ್ನು ಒಡೆದುಕೊಂಡಬಳಿಕ ನಿರಾಧಾರರಾದ ನಿಜಾಮ ಮತ್ತು ಕುತುಬಶಹರ ಮೇಲೆ ಖಾನನು ಹೋರಾಟವನ್ನು ಹೂಡಿ ಅವರನ್ನು ಪರಾಭವಕ್ಕೆ ಈಡು ಮಾಡಿದನು (೧೫೪೪).

ಮುಂದೆ ನಾಲ್ಕು ವರ್ಷಗಳು ಹೋಗುತ್ತಿರಲು, ತನ್ನ ಹಗೆಯಾದ ಅಸದಖಾನನ ಮರಣದಿಂದ ಹುರಿಗೊಂಡ ನಿಜಾಮಶಹನು ರಾಮರಾಯನ ಸಹಾಯವನ್ನು ಬಯಸಿ ಆದಿಲಶಹನೊಡನೆ ಹೋರಾಟವನ್ನು ಹೂಡಿದನು. ಕೈಬಿಟ್ಟು ಹೋಗಿದ್ದ ಕಲ್ಯಾಣಪಟ್ಟಣಕ್ಕಾಗಿ ಆಸೆಪಡುತ್ತಿರುವ ರಾಮರಾಯನು ಇಂತಹ ಸಂಧಿಯನ್ನು ಇದಿರು ನೋಡುತ್ತಿದ್ದನು. ಈ ಸಮಯದಲ್ಲಿ ಬಿದರದ ಶಹನು ಆದಿಲಶಹನ ಮೈತ್ರಿಯನ್ನು ಸಂಪಾದಿಸಿದ್ದನು. ರಾಮರಾಯನ ಅಪ್ಪಣೆಯಂತೆ ಕೆಳದಿಯ ಸದಾಶಿವನಾಯಕನು ವಿಜಯನಗರದ ಸೇನಾಧಿಪತ್ಯವನ್ನು ವಹಿಸಿ ಕಲ್ಯಾಣದತ್ತ ಸಾಗಿದನು. ನಿಜಾಮಶಹನು ಆತನನ್ನು ಕೂಡಿದನು. ಮಾರ್ಗದಲ್ಲಿ ವಿಜಾಪುರದ ದಳವು ಇವರ ಮೇಲೆ ಎರಿಬಂದಿತು. ಅದನ್ನು ಇವರು ಚೆನ್ನಾಗಿ ಹಣಿದು ಮುಂದೆ ಸಾಗಿದರು. ರಾಮರಾಯನು ಸಹಾಯಕ ದಳದೊಡನೆ ಬಂದು ಇವರನ್ನು ಕೂಡಿದನು.

ಈ ಮೂರೂ ದಳದವರು ಕಲ್ಯಾಣವನ್ನು ತಲುಪಿ ಆ ಕೋಟೆ

ಯನ್ನು ಬಲವಾಗಿ ಮುತ್ತಿದರು. ಆದಿಲಶಹನು ಹೊರಗೆ ನಿಂತು ಅತಿ ಶಯದ ಸಾಹಸವನ್ನು ಹೂಡಿ ಹಗೆಗಳನ್ನು ಬಹುವಿಧದ ಬಾಧೆಗೆ ಗುರಿ ಮಾಡಿದನು. ಆದರೂ ಮುತ್ತಿಗೆಗಾರರು ಹಿಂಜರಿಯಲಿಲ್ಲ. ಅವರು ಒಮ್ಮೆ ಸಮಯವರಿತು ಫಕ್ಕನೆ ಆತನ ಮೇಲೆ ಮುಗಿಬಿದ್ದರು. ಆದಿಲ ಶಹನು ಭಂಗಪಟ್ಟು ಓಡಿಹೋದನು. ಬಳಿಕ ಕಲ್ಯಾಣದ ಮೇಲೆ ಕಡುತರವಾದ ಏರಾಟವು ನಡೆಯಿತು. ಕಲ್ಯಾಣಕೋಟೆಯು ಎರಡ ನೆಯ ಬಾರಿ ರಾಮರಾಯನ ವಶಕ್ಕೆ ಬಂದಿತು. ಈ ವಿಜಯದ ಕುರು ಹಾಗಿ ರಾಮರಾಯನು **ಕಲ್ಯಾಣನಗರಸಾಧಕ, ಕಲ್ಯಾಣಪುರವರಾ ಧೀಶ್ವರ** ಎಂಬ ಬಿರುದುಗಳನ್ನು ಧರಿಸಿದನು (೧೫೪೮).

ಬಳಿಕ ಎರಡು ವರ್ಷಗಳಾಗುವಷ್ಟರಲ್ಲಿ ಗೋವಳಕೊಂಡದ ರಾಜ್ಯ ದೊಳಗೆ ಗಲಭೆಯುಂಟಾಗಿ ರಾಮರಾಯನು ಅದರಲ್ಲಿ ಮನಸುಹಾಕುವ ಸಂದರ್ಭವು ಒದಗಿತು. ಜಮುಶೀದ ಕುತುಬಶಹನಿಗೆ ಹುಚ್ಚು ಹಿಡಿ ಯಿತು. ಆತನ ಇಬ್ಬರು ಹಿರಿಯ ಮಕ್ಕಳು ಆತನ ಕೈಯೊಳಗಿಂದ ಪಾರಾಗಿ ಬಿದರಕ್ಕೆ ಓಡಿಹೋದರು. ಅವರಲ್ಲಿ ಒಬ್ಬನಾದ ಹೈದರ ಖಾನನು ಮರಣಹೊಂದಿದನು. ಎರಡನೆಯವನಾದ ಇಬ್ರಾಹಿಮನಿಗೆ ಬರೀದಶಹನಿಂದ ತನ್ನ ಸುರಕ್ಷಿತತೆಯ ಬಗೆಗೆ ಭಯವು ಉಂಟಾಗಲು, ಆತನು ರಾಮರಾಯನಲ್ಲಿಗೆ ಓಡಿಬಂದು ಆಶ್ರಯವನ್ನು ಪಡೆದನು. ಅತ್ತ ಗೋವಳಕೊಂಡದಲ್ಲಿ ಜಮುಶೀದಶಹನು ಮರಣಹೊಂದಲು ಕೆಲವು ಸರ ದಾರರು ಆತನ ಚಿಕ್ಕಮಗುವನ್ನು ಪಟ್ಟಕ್ಕೆ ಕುಳ್ಳಿರಿಸಿ ರಾಜ್ಯವಾಳ ಬೇಕೆಂದು ಪ್ರಯತ್ನಿಸಿದರು. ಇದು ಪ್ರಜೆಗಳಿಗೆ ಸಮ್ಮತವಾಗಲಿಲ್ಲ. ಆಗ ರಾಮರಾಯನು ಇಬ್ರಾಹಿಮನನ್ನು ವೆಂಕಟಾದ್ರಿಯೊಂದಿಗೆ ಗೋವಳಕೊಂಡಕ್ಕೆ ಕಳುಹಿ ಆತನಿಗೆ ಪಟ್ಟವನ್ನು ಕಟ್ಟಿಸಿದನು (೧೫೫೦).

ಮರುವರ್ಷ ಆದಿಲಶಹನು ಕಲ್ಯಾಣವನ್ನು ಕಸಿಯಲು ಸಜ್ಜಾಗು ತ್ತಿರುವುದನ್ನು ನೋಡಿ ರಾಮರಾಯನೂ ನಿಜಾಮಶಹನೂ ಒಂದಾದರು. ರಾಮರಾಯನು ರಾಯಚೂರು-ಮುದಗಲ್ ಕೋಟೆಗಳನ್ನು ಕಿತ್ತು ಕೊಂಡನು. ವೆಂಕಟಾದ್ರಿಯ ಸಹಾಯದಿಂದ ನಿಜಾಮಶಹನು

ಸೋಲಾಪುರವನ್ನು ಗೆದ್ದುಕೊಂಡನು. ಅಷ್ಟರಲ್ಲಿ ನಿಜಾಮಶಹ ಮತ್ತು ವೆಂಕಟಾದ್ರಿ, ಇವರ ನಡುವೆ ವಿತುಷ್ಟವು ಉಂಟಾಗಲು ವೆಂಕಟಾದ್ರಿಯು ವಿಜಯನಗರಕ್ಕೆ ತಿರುಗಿದನು.

ಮುಂದೆ ಬೇಗನೆ ಅಹಮದನಗರದ ಬುರ್ಹಾಣ ನಿಜಾಮಶಹನು ಮರಣಹೊಂದಿದನು. ಆತನ ಪಟ್ಟಕ್ಕೆ ಬಂದ ಹುಸೇನಶಹನು ಆದಿಲ ಶಹನೊಡನೆ ಒಪ್ಪಂದವನ್ನು ಮಾಡಿಕೊಂಡನು (೧೫೫೧). ಈ ಸಮರ ದಿಂದ ರಾಮರಾಯನ ಬಹುದಿನಗಳ ಮನೋರಥವು ಸಿದ್ಧಿಸಿತು. ರಾಯ ಚೂರು-ಮುದಗಲ್ ಕೋಟೆಗಳೂ ಅವುಗಳ ನೆರೆಯ ಪ್ರದೇಶವೂ ರಾಮ ರಾಯನಿಗೆ ಸ್ವಾಧೀನವಾದುವು. ಈ ವಿಜಯಗಳ ದ್ಯೋತಕವಾಗಿ ರಾಮರಾಯನು **ವಿಜಯಪುರ** (ವಿಜಾಪುರ) **ಭಯದಾಯಕ, ರಾಚೂರುರಾಜ್ಯಹರಣಧುರ್ಯ, ಮುದುಗಂಟಿ** (ಮುದಗಲ್) **ದುರ್ಗಾಧಿನಾಯಕ** ಎಂಬ ಬಿರುದುಗಳನ್ನು ತಳೆದನು.

ಅನಂತರ ನಾಲ್ಕುವರ್ಷಗಳು ಗತಿಸಲು, ನಿಜಾಮಶಹನು ಕಲ ಬುರ್ಗಿಯನ್ನು ಕಸಿವ ಉದ್ದೇಶದಿಂದ ಕುತುಬಶಹನ ಸ್ನೇಹವನ್ನು ಸಂಪಾ ದಿಸಿ ಕಲಬುರ್ಗಿ ಕೋಟೆಯನ್ನು ಮುತ್ತಿದನು. ಒಂದು ತಿಂಗಳು ಕಳೆ ದರೂ ಕೋಟೆಯು ವಶವಾಗಲೊಲ್ಲದು. ಇತ್ತ ಹಣ್ಣಾದ ಆದಿಲಶಹನು ರಾಮರಾಯನ ನೆರವನ್ನು ಬೇಡಿದನು. ನಯಕೋವಿದನಾದ ರಾಮ ರಾಯನು ಕುತುಬಶಹನಿಗೆ ಮೇಲೆ ಮೇಲೆ ನಯವಾದ ಓಲೆಯನ್ನು ಕಳುಹಿ ಒಳಗೊಳಗಿಂದ ತಿರುಮಲನಿಗೆ ಆತನ ರಾಜ್ಯವನ್ನು ಉಧ್ವಸ್ತ ಮಾಡಲು ಅಟ್ಟಿ ತಾನು ಕಲಬುರ್ಗಿಯತ್ತ ಸಾಗಿದನು.

ಈ ಯುಕ್ತಿಯಿಂದ ಯುದ್ಧದ ಬಣ್ಣವು ಬೇರೆಯಾಯಿತು. ತನ್ನ ರಾಜ್ಯದ ಮೇಲಿನ ಈ ಗಂಡಾಂತರವನ್ನು ಕಂಡು ಭಯಭೀತನಾದ ಕುತುಬಶಹನು ನಿಜಾಮಶಹನನ್ನು ತೊಲಗಿ ತನ್ನ ರಾಜ್ಯಕ್ಕೆ ತೆರಳಿದನು. ಒಂಟಿಗನಾದ ನಿಜಾಮಶಹನು ರಾಮರಾಯನನ್ನು ಇದಿರಿಸಲಾರದೆ ಕಲಬುರ್ಗಿಯ ಮುತ್ತಿಗೆಯನ್ನು ಕಿತ್ತುಕೊಂಡು ಹೊರಟುಹೋದನು (೧೫೫೫).

ಈ ನಡುವೆ ಐನುಲ್ಮುಲ್ಕ ಎಂಬ ವಿಜಾಪುರದ ಸರದಾರನು ಬಂಡಾಯವನ್ನು ಹೂಡಿದನು. ಇಬ್ರಾಹಿಮಶಹನು ಆತನ ಶಾಸನಕ್ಕೆ ರಾಮರಾಯನ ಸಹಾಯವನ್ನು ಬೇಡಿದನು. ರಾಮರಾಯನ ಆಜ್ಞೆಯ ಮೇರೆಗೆ ವೆಂಕಟಾದ್ರಿಯು ಆ ಪುಂಡುಗಾರನನ್ನು ಚೆನ್ನಾಗಿ ದಂಡಿಸಿ ವಿಜಾಪುರರಾಜ್ಯಕ್ಕೆ ಶಾಂತಿಯನ್ನು ಒದಗಿಸಿಕೊಟ್ಟನು (೧೫೫೫).

ಈ ಮಾತಿಗೆ ಎರಡು ವರ್ಷಗಳಾದುವು. ವಿಜಾಪುರದ ಇಬ್ರಾಹಿಮಶಹನು ತೀರಿಕೊಂಡು ಆತನ ಎಳೆಹರೆಯದ ಮಗನಾದ ಅಲೀ ಆದಿಲಶಹನು ಪಟ್ಟಕ್ಕೆ ಬಂದನು. ಈ ಸಂಧಿಯನ್ನು ನೋಡಿಕೊಂಡು ನಿಜಾಮಶಹನು ಕಲಬುರ್ಗಿಯ ಮೇಲೆ ದಂಡೆತ್ತಿ ಬಂದನು. ಅಲೀ ಶಹನು ವಿಜಯನಗರಕ್ಕೆ ಓಡಿಬಂದು ರಾಮರಾಯನ ಆಸರವನ್ನು ಕೋರಿದನು.

ಅದೀಗ ಮಗನನ್ನು ಕಳೆದುಕೊಂಡ ದುಃಖದಲ್ಲಿದ್ದ ರಾಮರಾಯನು ಆತನನ್ನು ಮಗನಾಗಿ ಮನ್ನಿಸಿ, ಆತನಿಗೆ ಬೇಕಾದ ನೆರವನ್ನು ನೀಡಿ ನಿಜಾಮಶಹನ ಪಾರುಪತ್ಯಕ್ಕೆ ಹೊರಟನು. ವಿಜಯನಗರದವರು ಅಹಮದನಗರ ಪ್ರದೇಶವನ್ನು ಉಧ್ವಸ್ತಮಾಡಿದರು. ನಿಜಾಮಶಹನು ರಾಜಧಾನಿಯನ್ನು ಬಿಟ್ಟು ಪೈಠಣಕ್ಕೆ ಪಲಾಯನ ಮಾಡಿದನು. ಕೊನೆಗೆ ನಿಜಾಮಶಹನು ರಾಮರಾಯನನ್ನು ಸಮಾಧಾನ ಪಡಿಸಿ ಅಲೀಶಹನಿಗೆ ಕಲ್ಯಾಣವನ್ನು ಕೊಟ್ಟು ಒಡಂಬಡಿಕೆಯನ್ನು ಪಡೆದುಕೊಂಡನು (೧೫೫೭).

ಬಳಿಕ ಸ್ವಲ್ಪ ದಿನಗಳಲ್ಲಿ ಅಲೀಶಹನ ಮೇಲೆ ಇನ್ನೊಂದು ಅಂತಃಸ್ಥ ಸಂಕಟವು ಉದ್ಭವಿಸಿತು. ಅಲೀಶಹನ ಕಕ್ಕನಾದ ಶಹಜಾದಾ ಅಬ್ದುಲ್ಲಾ ಅಥವಾ ಮಿಆಲೆಖಾನ ಎಂಬವನು ಆಸದಖಾನನಿಂದ ಉತ್ತೇಜನ ಪಡೆದು ಗೋವೆಯಲ್ಲಿ ಆಶ್ರಯಕ್ಕೆ ಹೋಗಿದ್ದನು. ಮುಂದೆ ಆತನು ಪೋರ್ತುಗೀಜರಿಂದ ಸಾಹಾಯ್ಯವನ್ನು ಸಂಪಾದಿಸಿ, ನಿಜಾಮಶಹನಿಂದಲೂ ಕಲಬುರ್ಗಿಯ ಸರದಾರರಿಂದಲೂ ಬೆಂಬಲವನ್ನು ಪಡೆದು ತಾನೆ ರಾಜನೆಂದು ಸಾರುತ್ತ ವಿಜಾಪುರದ ಮೇಲೆ ದಂಡೆತ್ತಿ ಬಂದನು.

ಇದರಿಂದ ಆರ್ತನಾದ ಅಲೀಶಹನ ಬಿನ್ನಹದ ಮೇರೆಗೆ ರಾಮರಾಯನು ದಂಡನ್ನು ಕಳುಹಿ ಈ ಆಗಂತುಕನ ಪಾರುಪತ್ಯಮಾಡಿ ವಿಜಾಪುರದ ಸಿಂಹಾಸನವನ್ನು ಸ್ಥಿರಗೊಳಿಸಿದನು (೧೫೫೭).

ತನ್ನ ಪ್ರತಿಸ್ಪರ್ಧಿಯಾದ ಆದಿಲಶಹನಿಂದ ಹೀಗೆ ಹಲವು ಸಲ ಸೋತು ಹೋದ ನಿಜಾಮುಶಹನು ಈ ಅಪಮಾನದಿಂದ ಬೇಯುತ್ತಿದ್ದನು. ಆತನು ಕುತುಬಶಹನನ್ನು ಕೂಡಿಕೊಂಡು ಆದಿಲಶಹನಿಂದ ಕಲ್ಯಾಣ ವನ್ನು ಮರಳಿ ಕಸಿಯಲು ಹವಣಿಸಿದನು. ಅಲೀಶಹನು ಮತ್ತೆ ರಾಮ ರಾಯನ ಸಹಾಯವನ್ನು ಪಡೆದುಕೊಂಡು ಅಹಮುದನಗರದ ಮೇಲೆ ದಾಳಿಯಿಟ್ಟನು. ಈ ಮೊದಲೇ ನಡೆದು ಬಂದ ಒಡಂಬಡಿಕೆಯಂತೆ ಕುತುಬಶಹನು ಬಹಿರಂಗದಲ್ಲಿ ಅಲೀಶಹನೊಡನೆ ಸ್ನೇಹವನ್ನು ನಟಿಸುತ್ತ ಒಳಗಿಂದೊಳಗೆ ನಿಜಾಮುಶಹನಿಗೆ ಬೇಕಾದ ಸಹಾಯವನ್ನು ಪೂರಯಿ ಸುತ್ತಿದ್ದನು. ಆದರೂ ನಿಜಾಮುಶಹನು ರಾಜಧಾನಿಯನ್ನು ಬಿಟ್ಟು ಹೋಗುವ ಪ್ರಸಂಗವು ಬಂದಿತು.

ರಾಮರಾಯನು ಮತ್ತು ಅಲೀಶಹನು ಕೂಡಿ ಅಹಮುದನಗರ ವನ್ನು ಬಿರುಸಾಗಿ ಮುತ್ತಿದರು. ಎರಡು ತಿಂಗಳುಗಳಾದರೂ ಕುತುಬ ಶಹನು ಕೋಟೆಯೊಳಗೆ ಕಳುಹುತ್ತಿದ್ದ ಸನ್ನಾಹ ಮತ್ತು ಅನ್ನಸಾಮುಗ್ರಿ ಇವುಗಳ ಬಲದಿಂದ ಕೋಟೆಯು ವಶವಾಗಲೊಲ್ಲದು. ಒಂದು ಕಡೆ ಯಿಂದ ಅಲೀಶಹನು, ಈ ಪ್ರಸಂಗದಲ್ಲಿ ರಾಮರಾಯನು ಮುತ್ತಿಗೆ ಯನ್ನು ಸಡಿಲಿಸಬಾರದೆಂದು, ಇನ್ನೊಂದು ಕಡೆಯಿಂದ ಕುತುಬಶಹನು, ರಾಮರಾಯನು ಮುತ್ತಿಗೆಯನ್ನು ತೊರೆಯಬೇಕೆಂದು, ಹೀಗೆ ಇಬ್ಬರೂ ಸಂಧಾನವನ್ನು ನಡೆಸುತ್ತ ರಾಮರಾಯನಿಗೆ ಆಮಿಷಗಳನ್ನು ನೀಡಿ ದರು. ಕೊನೆಗೆ ಕೊಂಡಪಲ್ಲಿಯ ಪ್ರದೇಶವನ್ನು ತೆಗೆದುಕೊಂಡು ಮುತ್ತಿಗೆಯನ್ನು ಮುಗಿಸಬೇಕು ಎಂದು ಕುತುಬಶಹನು ಮಾಡಿದ ಅರಿಕೆ ಯನ್ನು ಮನ್ನಿಸಿ ರಾಮರಾಯನು ಅಹಮುದನಗರದ ಮುತ್ತಿಗೆಯನ್ನು ಕಿತ್ತು ಹಿಂದಿರುಗಿದನು (೧೫೫೭).

ಮರುವರ್ಷ ಹುಸೇನ ನಿಜಾಮುಶಹನು ಇಬ್ರಾಹಿಮುಕುತುಬ

ಶಹನಿಗೆ ತನ್ನ ಮಗಳನ್ನು ಮದುವೆಯಾಗಿ ಕೊಟ್ಟನು. ಲಗ್ನಸಮಾರಂಭವು ಮುಗಿಯುತ್ತಲೆ ಅಳಿಯ-ಮಾವಂದಿರು ಕೂಡಿ ಕಲ್ಯಾಣವನ್ನು ಮುತ್ತಿದರು. ಅಲೀ ಆದಿಲಶಹನು ಎಂದಿನಂತೆ ರಾಮರಾಯನಿಗೆ ಮೊರೆ ಹೊಕ್ಕನು. ಸ್ವಲ್ಪ ದಿನಗಳಲ್ಲಿ ಬಿದರದ ಅಲೀ ಬರೀದಶಹನೂ ವರ್‍ಹಾಡದ ಬುರ್‍ಹಾಣ ಇಮಾದಶಹನೂ ಅಲೀಶಹನ ಪಕ್ಷಕ್ಕೆ ಕೂಡಿದರು. ಹಗೆಗಳ ಈ ಅಬ್ಬರಕ್ಕೆ ಮಳೆ-ಬಿರುಗಾಳಿಗಳ ಆರ್ಭಟವೂ ಸೇರವಾಗಿ ನಿಜಾಮ ಶಹನು ಬಲು ಬವಣೆಗೆ ಗುರಿಯಾದನು.

ಅತ್ತ ರಾಮರಾಯನು ಗೋವಳಕೊಂಡ ರಾಜ್ಯದ ಮೇಲೆ ಅಟ್ಟಿದ ವೆಂಕಟಾದ್ರಿಯು ಕೊಂಡಪಲ್ಲಿ, ಮಛಲಿಪಟಂ, ದೇವರಕೊಂಡ, ಗಂಡೀಕೋಟ, ಪಾನಗಲ್ ಮೊದಲಾದ ಕೋಟೆಗಳನ್ನು ಸೆಳೆದುಕೊಂಡನು. ಇದರಿಂದ ಕುತುಬಶಹನು ವ್ಯಾಕುಲನಾದನು. ರಾಮರಾಯನ ಯುಕ್ತಿಚಾತುರ್ಯದಿಂಲೂ ಪರಾಕ್ರಮಸಾಮರ್ಥ್ಯದಿಂದಲೂ ತಮ್ಮ ಪ್ರಯತ್ನಗಳೆಲ್ಲವು ವ್ಯರ್ಥವಾದುವು ಎಂದು ಮನಗಂಡ ನಿಜಾಮ ಮತ್ತು ಕುತುಬಶಹರು ಕಲ್ಯಾಣದ ಮುತ್ತಿಗೆಯನ್ನು ಬಿಟ್ಟು ತೆರಳಿದರು. ರಾಮರಾಯನ ಆಗ್ರಹದ ಮೇರೆಗೆ ನಿಜಾಮಶಹನು ರಾಮರಾಯನಲ್ಲಿಗೆ ಬಂದು, ಆತನ ಕೈಯಿಂದ ತಾಂಬೂಲವನ್ನು ಸ್ವೀಕರಿಸಿ ತನ್ನ ಅಧೀನತ್ವವನ್ನು ಒಪ್ಪಿಕೊಳ್ಳಬೇಕಾಯಿತು (೧೫೫೮).

ಈ ಮೇರೆಗೆ ರಾಮರಾಯನು ಸದಾಶಿವರಾಯನ ಹೆಸರಿನಿಂದ ವಿಜಯನಗರ ಸಾಮ್ರಾಜ್ಯವನ್ನು ಆಳುತ್ತ ಸುಮಾರು ಇಪ್ಪತ್ತೈದು ವರ್ಷಗಳು ಕಳೆದು ಹೋದುವು. ಈ ಅವಧಿಯಲ್ಲಿ ರಾಮರಾಯನ ಪ್ರತಾಪ-ಪರಾಕ್ರಮಗಳಿಂದ ರಾಷ್ಟ್ರದಲ್ಲಿ ಅಂತರ್ಗತ ಸುವ್ಯವಸ್ಥೆಯು ನೆಲೆಗೊಂಡು ಸಾಮ್ರಾಜ್ಯದ ಪ್ರಭಾವವು ಪರರಾಷ್ಟ್ರಗಳಲ್ಲಿಯೂ ಸ್ಥಾಪಿತವಾಯಿತು.

ಇನ್ನೂರು ವರ್ಷಗಳಿಂದ ಎಡೆಬಿಡದೆ ವಿಜಯನಗರಕ್ಕೆ ಪಕ್ಕೆಯೊಳಗಿನ ಮುಳ್ಳಾಗಿ ಬಾಧೆಯನ್ನು ಕೊಡುತ್ತಿದ್ದ ಉತ್ತರದ ಮಹಮ್ಮದೀಯ ರಾಜ್ಯಗಳು ಈ ಕಾಲದಲ್ಲಿ ಹತಪ್ರಭವಾಗಿ ರಾಮರಾಯನ

ಕೈಗೊಂಬೆಗಳಾಗಿ ಕುಣಿಯುತ್ತಿರುವ ಸೋಜಿಗದ ನೋಟವು ಕಂಗೊಳಿಸಿತು. ವಿಜಾಪುರ, ಅಹಮದನಗರ, ಗೋವಳಕೊಂಡ, ಬಿದರ ಇವುಗಳ ಅರಸರು ರಾಮರಾಯನ ಉನ್ನತವಾದ ಪರಾಕ್ರಮಕ್ಕೆ ಪರಾಜಿತರಾಗಿ ಒಳಗಿಂದೊಳಗೆ ಎಷ್ಟು ಹೊಟ್ಟೆಕಿಚ್ಚು ಪಡುತ್ತಿದ್ದರಾದರೂ ಪರಸ್ಪರ ದ್ವೇಷಾಸೂಯೆಗಳ ಮೂಲಕವೂ ಅಂತಃಸ್ಥ ದೌರ್ಬಲ್ಯದ ಮೂಲಕವೂ ಅವರಿಗೆ ರಾಮರಾಯನ ಹೊರತಾಗಿ ಬೇರೆ ಗತಿಯೇ ಇಲ್ಲದಂತಾಗಿತ್ತು. ಇಂತು ಸಾಮ್ರಾಜ್ಯದ ಈ ಬದ್ಧವೈರಿಗಳು ದೀನರೂ ತೇಜೋಹೀನರೂ ಗಲಿತವೀರ್ಯರೂ ಆಗಿ ರಾಮರಾಯನ ಕರುಣೆಯ ವಿಷಯವಾದರು.

ಇಂದಿನ ಈ ಸನ್ನಿವೇಶವು ವಿಜಯನಗರದ ಚರಿತ್ರೆಯಲ್ಲಿ ಅಪೂರ್ವವಾದುದಾಗಿದೆ. ಈ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯದ ಮೇರೆಯು ಹಿಂದೆ ಎಂದೂ ಪಡೆಯದಷ್ಟು ಉತ್ತರದಲ್ಲಿ ವಿಸ್ತಾರವನ್ನು ಪಡೆಯಿತು. ಅದು ಕೃಷ್ಣೆಯನ್ನು ದಾಟಿ ಭೀಮಾ ನದಿಯ ವರೆಗೆ ಕಲಬುರ್ಗಿ-ಕಲ್ಯಾಣ ಪ್ರಾಂತದಲ್ಲಿಯೂ ಹಬ್ಬಿತು. ರಾಮರಾಯನು ಹಿಂದೆ ನೋಡಿದಂತೆ ಹಲವು ಬಾರಿ ಕಲಬುರ್ಗಿ-ಕಲ್ಯಾಣ ಕೋಟೆಗಳನ್ನು ಕಿತ್ತಾಡಿದನು. ಕೊಯಿಲಕೊಂಡ, ಘನಪುರ, ಪಾನಗಲ್, ಅಡಕಿ, ಯಾತಗಿರಿ, ಸಗರ, ಜಲದುರ್ಗ, ರಾಯನಪಾಳ್ಯ ಮೊದಲಾದ ಉತ್ತರದ ಕೋಟೆಗಳು ರಾಮರಾಯನ ಅಧೀನವಾಗಿದ್ದುವು.[೧] **ಒಂದು ವಿಚಾರದಲ್ಲಿ ರಾಮರಾಯನ ಈ ವಿಜಯವೈಭವವು ಕೃಷ್ಣದೇವರಾಯನ ವೈಭವಕ್ಕಿಂತ ಮಿಗಿಲಾಗಿದೆ** ಎನ್ನಬಹುದು. ಉತ್ತರದ ಮಹಮ್ಮದೀಯ ಹಗೆಗಳ ಶಾಸನಕಾರ್ಯದಲ್ಲಿ ಕೃಷ್ಣದೇವರಾಯನು ಎಷ್ಟು ಹೋರಾಡಿದರೂ ಅವರಲ್ಲಿಯ ಸಾಮರ್ಥ್ಯವು ಆಗ ಇನ್ನೂ ಹುರಿಯಾಗಿದ್ದುದರಿಂದ ಅದು ಆತನಿಗೆ ಸಾಕಷ್ಟು ಸಾಧ್ಯವಾಗಲಿಲ್ಲ. ರಾಮರಾಯನ ಈ ಆಳಿಕೆಯಲ್ಲಿಯೊ ! ಅದು ಬಲು ಹಗುರಾಗಿ ಅವರ ರಾಜ್ಯತಂತ್ರದಲ್ಲಿಯೂ ರಾಮರಾಯನೆ ಸೂತ್ರಚಾಲಕನಾದನು.

---

೧. ಬಶೀರ ಅಹಮದಕೃತ ತಾರೀಖೆ ದಖನ. ರಾಮರಾಯನಿಗೆ ಸಗರ ಸಂಕ್ರಮಣ ಧುರೀಣ ಎಂಬ ಬಿರುದು ಇತ್ತು. ಅಡಕಿ, ಯಾತಗಿರಿ, ಸಗರ ಇವು ಕಲಬುರ್ಗಿ ಜಿಲ್ಲೆಯಲ್ಲಿವೆ.

ಈ ರೀತಿಯಾಗಿ ವಿಜಯನಗರ ಸಾಮ್ರಾಜ್ಯದ ಅನಭಿಷಿಕ್ತ ಅಧಿಪತಿಯಾದ ರಾಮರಾಯನು ದಕ್ಷಿಣಭಾರತದ ರಾಜಕಾರಣದಲ್ಲಿ ಪ್ರಧಾನ ಪುರುಷನಾಗಿ ಮೆರೆದನು. **ಲಂಕೆಯಿಂದ ನರ್ಮದೆಯ ವರೆಗಿನ ಭೂಭಾಗವೆಲ್ಲವೂ ನಿರ್ವೀರವಮುರ್ವೀತಲವಾಗಿ** ರಾಮರಾಯನ ಕೀರ್ತಿಗೌರವವು ಎಲ್ಲೆಡೆಯಲ್ಲಿಯೂ ಪಸರಿಸಿತು.

ಈ ಕಾಲದಲ್ಲಿ ವಿಜಯನಗರದ ವ್ಯಾಪಾರವೂ ದ್ವೀಪಾಂತರದ ಸಂಬಂಧಗಳೂ ಬೆಳೆದುವು. ಪೋರ್ತುಗಾಲ, ಅರಬಸ್ತಾನ, ತುರ್ಕಸ್ತಾನ, ಚೀನ, ಮೊದಲಾದ ದೇಶಗಳೊಡನೆ ಬಟ್ಟೆ, ಕುದುರೆ, ಮೊದಲಾದ ಸರಕುಗಳ ವ್ಯಾಪಾರವು ಸಮೃದ್ಧವಾಗಿ ನಡೆಯುತ್ತಿತ್ತು. ವಿಜಯನಗರ ರಾಜಧಾನಿಯು ವಿಶೇಷವಾದ ವೈಭವದಿಂದ ವಿರಾಜಿಸುತ್ತ ಭೂಮಂಡಲದ ಮೇಲಿನ ಅಗ್ವಿತೀಯ ಪಟ್ಟಣವಾಗಿ ಪ್ರಸಿದ್ಧಿಯನ್ನು ಪಡೆದಿತು.

---

## ಹದಿನೆಂಟನೆಯ ವಿಲಾಸ

## ೫. ಸದಾಶಿವರಾಯ (೧೫೪೨-೭೦)<br>ಅಳಿಯ ರಾಮರಾಯ (೧೫೪೨-೬೫)

೩

### ರಾಕ್ಷಸತಂಗಡಿಯ ಮಹಾಯುದ್ಧ

ಈ ಸಮಯವು ವಿಜಯನಗರ ಸಾಮ್ರಾಜದ ಚರಿತ್ರೆಯಲ್ಲಿಯೂ ರಾಮರಾಯನ ಜೀವನದಲ್ಲಿಯೂ ಅಸಾಧಾರಣ ಭಾಗ್ಯಶಾಲಿಯಾಗಿದ್ದಿತು. ಆದರೆ ಹೀಗೆ ಸರ್ವವಿಧದಿಂದಲೂ ಜಯಶೀಲವಾದ ಪರಿಸ್ಥಿತಿಯು ಚಿರಕಾಲ ಬಾಳಲಾರದುದಾಗಿತ್ತು. ರಾಮರಾಯನು ಯಾವ ಸನ್ನಿವೇಶಗಳನ್ನು ಮನಸೋಕ್ತವಾಗಿ ಉಪಯೋಗಿಸಿಕೊಂಡು

ತನ್ನ ಬಲಸಂವರ್ಧನೆಯಾಗುವುದೆಂದು ಎಣಿಸಿದ್ದನೊ, ಅವುಗಳಲ್ಲಿಯೆ ಆತನ ವಿರೋಧಕ ಶಕ್ತಿಯ ಬೀಜಗಳು ಅವಿತುಕೊಂಡಿದ್ದುವು. ಭಗ್ನ ವೀರ್ಯರಾದ ವೈರಿಗಳು ಇಳಿದ ರಸಾತಳದಿಂದಲೆ ವಿಜಯನಗರದ ವಿನಾಶದ ಮೋಡಗಳು ಏಳತೊಡಗಿದುವು.

ದಿನದಿನಕ್ಕೆ ಬೆಳೆಯುತ್ತಿರುವ ರಾಮರಾಯನ ಪ್ರಭಾವಾತಿಶಯವು ಕ್ಷಣಹೊತ್ತು ವಿಚಾರಪರರಾದ ಈ ಉತ್ತರದ ಸುಲ್ತಾನರ ಎದೆಯಲ್ಲಿ ಕಾದ ಅಲಗಿನಂತೆ ವೇದನೆಯನ್ನುಂಟು ಮಾಡಿತು. ತಾವು ಪರಸ್ಪರರ ದ್ವೇಷಾಸೂಯೆಗಳಿಂದ ಕಲಹಮದಾಂಧರಾಗಿ ಪಾತಾಳಕ್ಕಿಳಿಯುತ್ತ, ತಮ್ಮ ಬದ್ಧ ವೈರಿಯಾದ ರಾಮರಾಯನ ವರ್ಚಸ್ಸಿಗೆ ಹೇಗೆ ಕಾರಣರಾಗುತ್ತಿರುವೆವು ಎಂಬ ಅರಿವಿನ ಬೆಳಕು ಅವರ ಕಣ್ಣಲ್ಲಿ ಅರಳಿತು. ಕೊನೆಗೆ ಜಾತಿಯ ಸ್ನೇಹವೂ ಧರ್ಮಬಾಂಧವ್ಯವೂ ಜಯಶಾಲಿಗಳಾದುವು. ಇಸ್ಲಾಂ ಧರ್ಮಬಾಂಧವರಾದ ತಾವೆಲ್ಲರೂ ಒಂದುಗೂಡಿದರೆ,ಈ ಕಾಫರನನ್ನು ಸದೆದಿಕ್ಕುವುದೇನು ಅಂತಹ ಕಠಿಣ ಕಾರ್ಯವಲ್ಲವೆಂಬುದು ಅವರ ಮನಸಿನಲ್ಲಿ ಮೂಡಿತು.

ಬಲಶಾಲಿಯಾದ ರಾಮರಾಯನು ವಿಜಾಪುರ, ಅಹಮದನಗರ ಮುಂತಾದ ರಾಜ್ಯಗಳೊಡನೆ ಅನೇಕ ವಿಧದ ಸಂದರ್ಭಗಳು ಬಂದಾಗ, ಆಚರಿಸಿದ ರಾಜನೀತಿಯು ಯಾವಾಗಲೂ ಅಂತಹ ಜಾಣತನದ್ದೂ ಗೌರವಪೂರ್ಣವೂ ಆಗಿರಲಿಲ್ಲ. ಸುಲ್ತಾನರೊಡನೆಯೂ ಅವರ ರಾಯಭಾರಿಗಳೊಡನೆಯೂ ರಾಮರಾಯನು ತಕ್ಕುವಾದ ಆದರಸನ್ಮಾನಗಳಿಂದ ನಡೆದುಕೊಳ್ಳುತ್ತಿರಲಿಲ್ಲವೆಂದು ಆತನ ವಿರುದ್ಧವಾಗಿ ದೂರುಗಳು ಇದ್ದುವು. ವಿಜಯದ ಉತ್ಸಾಹದಲ್ಲಿಯೂ ಆಘಾತದ ಆವೇಶದಲ್ಲಿಯೂ ವಿಜಯನಗರದ ಸೈನಿಕರಿಂದ ಮಹಮ್ಮದೀಯ ರಾಜ್ಯಗಳಲ್ಲಿ ಕೆಲವು ಅತಿರೇಕಗಳು ನಡೆದುವು.ಅವರ ಊರುಗಳು ಉಧ್ವಸ್ತವಾದುವು. ಪ್ರಜಾಜನರಿಗೆ ಬಾಧೆಯುಂಟಾಯಿತು. ಕೆಲವೆಡೆ ಮಹಮ್ಮದೀಯ ಧರ್ಮದ ಮೇಲೆಯೂ ಮಹಿಳೆಯರ ಮೇಲೆಯೂ ಅತ್ಯಾಚಾರಗಳಾದುವಂತೆ.[೧]

೧. ಹೀಗೆ ಫಿರಿಷ್ತನು ಹೇಳುವನು.

ರಾಮರಾಯನ ಪೆಟ್ಟುಗಳಿಂದ ಬಲವಾಗಿ ನೊಂದವರಲ್ಲಿ ಅಹಮದ ನಗರ, ವಿಜಾಪುರಗಳ ಸುಲ್ತಾನರು ಪ್ರಮುಖರಾಗಿದ್ದರು. ಮಹಮ್ಮದೀಯರೊಡನೆ ನಡೆದ ಈ ರಾಜಕೀಯ ಕಣ್ಣುಮುಚ್ಚಾಟಗಳಲ್ಲಿ, ರಾಮರಾಯನು ಹಲವುಬಾರಿ ಒಬ್ಬೊಬ್ಬರಿಗೆ ಶತ್ರುವೂ ಮಿತ್ರನೂ ಆಗಿ, ಅಪಕಾರವನ್ನೂ ಉಪಕಾರವನ್ನೂ ಮಾಡಿದ ಸಂನಿವೇಶಗಳು ಒದಗಿದ್ದುವು. ಇಷ್ಟುದಿನ ಅಂತಃಕಲಹಗಳಲ್ಲಿ ತೊಡಗಿದ್ದ ಅವರ ಲಕ್ಷ್ಯದಲ್ಲಿ, ಇಂತಹ ಸೂಕ್ಷ್ಮವಿಚಾರಗಳು ಯಾವುವೂ ಅಷ್ಟು ಪ್ರಧಾನವಾಗಿ ಬಂದಿರಲಿಲ್ಲ. ಈಗ ಅವರ ದೃಷ್ಟಿಯು ಬೇರೆಯಾದುದರಿಂದ ಈ ಸಂಗತಿಗಳೆಲ್ಲ ಒಂದೊಂದಾಗಿ ಅವರ ಮನಸಿಗೆ ಹೊಳೆ ಹೊಳೆದು ಸುಳಿದಾಡ ತೊಡಗಿದುವು.

ರಾಮರಾಯನು ತಮ್ಮನ್ನು ತನ್ನ ಕೈಗೊಂಬೆಯಾಗಿ ಕುಣಿಸಿದುದರ ದೋಷವು ತಮಗಿಂತ ರಾಮರಾಯನದೇ ಹೆಚ್ಚೆಂದು ಅವರಿಗೆ ಭಾಸವಾಯಿತು. ರಾಮರಾಯನು ಮಾಡಿದ ಅನೇಕ ಉಪಕಾರಗಳು ಮರೆತು ಹೋಗಿ, ಆತನ ಕೆಲವು ಅಪಕಾರಗಳು ಮಾತ್ರ ಎದ್ದು ಕಾಣಿಸಲಾರಂಭಿಸಿದುವು. ವಿಜಯನಗರದವರು ಹಾಳುಮಾಡಿದ ಆ ಊರುಗಳು, ಸುಲಿದ ಆ ಪಟ್ಟಣಗಳು, ಕೆಡಹಿದ ಆ ಮಸೂತಿಗಳು, ಅವಮಾನಗೊಳಿಸಿದ ಆ ಪೂಜ್ಯವಸ್ತುಗಳು—ಆ ಅತ್ಯಾಚಾರಗಳು—ಎಲ್ಲವೂ ಈಗ ಒಮ್ಮೆಗೆ ಎದ್ದು ಬಂದು ಭಯಾನಕವಾಗಿ ಅವರನ್ನು ಬಾಧಿಸಲಣಿಯಾದುವು. ಇಂತಹ ಈ ವಿಜಯನಗರದ ವಿಧರ್ಮೀಯ ಸಾಮ್ರಾಜ್ಯವನ್ನು ಮಣ್ಣುಗೂಡಿಸಬೇಕು ಎಂಬ ಕ್ರೂರ ವಿಚಾರಗಳೂ ಒಕ್ಕಟ್ಟಿನ ಹಂಬಲವೂ ಅವರಲ್ಲಿ ಸ್ಥಿರವಾದುವು.

ಯಾವನು ವಿಜಯನಗರದಿಂದ ಹಲವು ಬಾರಿ ಹಲವು ವಿಧದ ಮಹೋಪಕಾರಗಳನ್ನು ಮಾಡಿಸಿಕೊಂಡಿದ್ದನೊ, ಯಾವನ ವಿಪತ್ಕಾಲಗಳಲ್ಲಿ ರಾಮರಾಯನು ಹಲವುಸಲ ಪ್ರಾಣ–ಧನ–ಮಾನಗಳನ್ನು ನೀಡಿ ತಂದೆಯಂತೆ ಸಲಹಿ ಸಾಕಿದವನಾಗಿದ್ದನೊ, ಅದೆ ಆ ವಿಜಾಪುರದ ಸುಲ್ತಾನ ಅಲೀಆದಿಲಶಹನು ವಿಜಯನಗರವಿನಾಶಕವಾದ ಈ ಸಂಕಲ್ಪದ

ಪುರಸ್ಕರ್ತನೂ ವಿಜಯನಗರವಿರೋಧಕ ಮಹಾವ್ಯೂಹದ ಉತ್ಪಾದಕನೂ ಆದನೆಂಬುದು ದೈವದುರ್ವಿಲಾಸದೊಳಗಿನ ದಾರುಣತಮವಾದ ದುರ್ಘಟನೆಯಾಗಿದೆ.[೨]

ತನ್ನೊಬ್ಬನಿಂದಲೇ ತನ್ನ ಮನೋರಥವು ನೆರವೇರದೆಂದು ಮನಗಂಡ ಅಲೀಶಹನು ಇತರ ಸುಲ್ತಾನರ ನೆರವನ್ನು ಹಾರಯಿಸಿದನು. ಗೋವಳಕೊಂಡದ ಕುತುಬಶಹನು ಆತನನ್ನು ಕೂಡಿದನು. ದುರಾರಾಧ್ಯನಾದ ಅಹಮದನಗರದ ಹುಸೇನ ನಿಜಾಮಶಹನ ಮನವೊಲಿಸುವ ಪ್ರಯತ್ನವು ನಡೆಯಿತು. ವಿಜಯನಗರದಿಂದ ಎಲ್ಲಕ್ಕೂ ಹೆಚ್ಚಿನ ಹಾನಿಗೆ ಗುರಿಯಾಗಿದ್ದು, ವಿಜಯನಗರದ ಮೇಲೆ ಸಂತಾಪಾತಿಶಯದಿಂದ ಕಿಡಿಯನ್ನು ಕಾರುತ್ತಿರುವ ನಿಜಾಮಶಹನು ಈ ರಚನೆಗೆ ಸಂತೋಷದಿಂದ ಸ್ವಾಗತವಿತ್ತನು.

ನಿಜಾಮಶಹನ ಆಗ್ರಹವನ್ನು ಸಂಪೂರ್ಣವಾಗಿ ಕಳೆವುದಕ್ಕಾಗಿಯೂ ಆತನ ಸೌಹಾರ್ದವನ್ನು ಸಮಗ್ರವಾಗಿ ಪಡೆವುದಕ್ಕಾಗಿಯೂ ಅಲೀಶಹನು ತನ್ನ ತಂಗಿಯನ್ನು ನಿಜಾಮಶಹನ ಹಿರಿಯ ಮಗನಿಗೆ ಮದುವೆಯಾಗಿ ಕೊಡಬೇಕು; ನಿಜಾಮಶಹನು ತನ್ನ ಮಗಳನ್ನು ಅಲೀಶಹನಿಗೆ ಧಾರೆಯೆರೆದು ಕೊಟ್ಟು, ಮೇಲೆ ವರದಕ್ಷಿಣೆಯಾಗಿ ಸೊಲಾಪುರ ಕೋಟೆಯನ್ನು ಸಲ್ಲಿಸಬೇಕು ಎಂಬ ಯೋಜನೆಯು ರೂಪುಗೊಂಡಿತು.

ಈ ಮೇರೆಗೆ ವಿಜಾಪುರ-ಅಹಮದನಗರ ರಾಜ್ಯಗಳು ಪರಸ್ಪರ ರಕ್ತಸಂಬಂಧದ ದೃಢವಾದ ಪಾಶಗಳಿಂದ ಬಿಗಿಯಲ್ಪಟ್ಟುವು. ಈ ಮಂಗಳ ಸಮಾರಂಭಗಳ ಗರ್ಭದಲ್ಲಿಯೇ ಮುಂದಣ ಭೀಷಣವಾದ ಸಂಗ್ರಾಮಸಂಭ್ರಮದ ಸಂಕೇತಗಳು ಪರಿಪಾಕಗೊಳ್ಳುತ್ತಿದ್ದುವು.

---

೨. ನಿಜಾಮಶಹನೆ ಈ ವ್ಯೂಹದ ಉತ್ಪಾದಕನೆಂದು ಕೌಟೊ ಹೇಳುವನು. ಅದೇನೆ ಇರಲಿ, ನಿಜಾಮಶಹನು ವಿಜಯನಗರದ ಬದ್ಧವೈರಿಯೂ ಪ್ರಬಲ ಪ್ರತಿಸ್ಪರ್ಧಿಯೂ ಆಗಿದ್ದನು ಎಂಬುದು ಮಾತ್ರ ನಿಶ್ಚಿತವು.

ವಿವಾಹೋತ್ಸವಗಳು ಮುಗಿಯುತ್ತಿರುವಾಗಲೆ ಸಮರಸಿದ್ಧತೆಯು ಭರದಿಂದ ಸಾಗಿತ್ತು.

ಬಿದರದ ಅಲೀಬರೀದಶಹನೂ ಈ ಸಂಘಕ್ಕೆ ಸೇರಿದನು. ವರ್‍ಹಾಡದ ಬುರ್‍ಹಾಣ ಇಮಾದಶಹನೂ ಇವರನ್ನು ಸಹಕರಿಸಿದನು ಎಂದು ಹೇಳುತ್ತಾರೆ.[೩] ದಿಲ್ಲಿಯ ಮೊಗಲ ಸಮ್ರಾಜನಾದ ಅಕಬರನೂ ಇವರಿಗೆ ಬೆಂಬಲವಾದನು ಎಂದು ಕೆಲರು ಸೂಚಿಸಿರುವರು.[೪]

ಕಪಟನಾಟಕಪ್ರವೀಣನಾದ ಅಲೀ ಆದಿಲಶಹನು ಇಷ್ಟೆಲ್ಲ ತಂತ್ರವನ್ನು ಹೂಡಿಯೂ ತನ್ನ ಉಪಕಾರಕರ್ತನಾದ ರಾಮರಾಯನ ದ್ರೋಹವನ್ನು ಬಹಿರಂಗವಾಗಿ ಬಗೆಯಲೆಳಸದೆ ಯುದ್ಧಕ್ಕೆ ಅಷ್ಟು ಉತ್ಸುಕತೆಯನ್ನು ತೋರಲಿಲ್ಲ. ಆತನ ಈ ತಟಸ್ಥವೃತ್ತಿಗೆ ಇತರ ಸುಲ್ತಾನರು ಬೇಸತ್ತರು. ಕೊನೆಗೆ ತಮ್ಮ ದಂಡುಗಳಿಗೆ ಆತನ ರಾಜ್ಯದಲ್ಲಿ ಮಾರ್ಗವನ್ನು ಕೇಳಿದರು. ಅದಕ್ಕೂ ಆತನು ಒಪ್ಪಿಗೆಯನ್ನು ಕೊಡಲಿಲ್ಲ. ಕಟ್ಟಕಡೆಗೆ ಆತನು ರಾಮರಾಯನಲ್ಲಿಗೆ ರಾಯಭಾರಿಗಳನ್ನು ಕಳುಹಿ ರಾಯಚೂರು, ಮುದಗಲ್ ಮುಂತಾದ ಪ್ರದೇಶವನ್ನು ತನಗೆ ಬಿಟ್ಟುಕೊಡುವುದಾಗಿ ಕೇಳಿದನು. ರಾಮರಾಯನು ಸ್ವಾಭಾವಿಕವಾಗಿಯೆ ಈ ಬೇಡಿಕೆಯನ್ನು ಧಿಕ್ಕರಿಸಿದನು. ಆಗ ಆದಿಲಶಹನು ಪ್ರಕಟವಾಗಿ ರಾಮರಾಯನೊಡನೆ ವೈರತ್ವವನ್ನು ಸಾರಿ ಇತರ ಸುಲ್ತಾನರನ್ನು ಕೂಡಿದನು.

ಎಲ್ಲ ಸುಲ್ತಾನರ ದಂಡುಗಳು ವಿಜಾಪುರದಲ್ಲಿ ಒಟ್ಟುಗೂಡಿದುವು. ಅವು ಕ್ರಿ. ಶ. ೧೫೬೪, ದಿಸೆಂಬರ ೨೫ ನೆಯ ದಿನ, ಅಲ್ಲಿಂದ ಪ್ರಯಾಣ ಬೆಳೆಸಿದುವು. ಈ ಸೈನ್ಯವು ಸುಮಾರು ೬೦,೦೦೦ ವಾಗಿದ್ದು, ಅದರಲ್ಲಿ ೫೦,೦೦೦ ರಾವುತರು ಇದ್ದರು. ಈ ಮುಹಮ್ಮದೀಯ ರಾಜ್ಯದ

೩. ಕೌಟೊ. ಫಿರಿಸ್ತ, ಬುರ್‍ಹಾಣ-ಇ-ಮಾಸಿರ, ಇವರ ವೃತ್ತಾಂತಗಳು ಈ ಮಾತನ್ನು ವಿರೋಧಿಸುತ್ತವೆ.

೪. ಮರಾಠರ ವೃತ್ತಾಂತ, ರಾಮರಾಯನ ಬಖರ ಇ.

ಊಳಿಗದಲ್ಲಿದ್ದ ಕೆಲ ಮರಾಟೆ ಸರದಾರರೂ ಈ ಸೇನೆಯಲ್ಲಿ ಭಾಗಿಯಾಗಿದ್ದರು.[೫]

ಈ ಸುಲ್ತಾನರ ದಂಡುಗಳು ವಿಸ್ತಾರವಾದ ಪ್ರದೇಶವನ್ನು ಆಕ್ರಮಿಸುತ್ತ ತಾಳೀಕೋಟೆಯನ್ನು ದಾಟಿ, ಕೃಷ್ಣೆಯ ಉತ್ತರತೀರಕ್ಕೆ ಬಂದು ತಲುಪಿದುವು. "ಈ ದಂಡಿನ ಕಾಲುಂಗಾರೆಯವರೂ ಪೆಂಡಾರಿಯವರೂ ಬಾಣಕಾರರೂ ಕಳ್ಳ ಸಿಪಾಯಿಗಳೂ ಕೃಷ್ಣಾನದಿಯನ್ನು ದಾಟಿ, ರಾಜಭೂವರರ (ರಾಮರಾಯನ) ದೇಶವನ್ನು ಹೊಕ್ಕು ದೊಂಬಿ ಮಾಡಲುಪಕ್ರಮಿಸಿದರು. ಎಲ್ಲೆಲ್ಲೂ ಲೂಟಿ, ಕೊಳ್ಳೆ, ಸುಲಿಗೆ, ಕೊಲೆ!"[೬]

ಇತ್ತ ರಾಜಭೂವರ (ರಾಮರಾಯ)ನಾದರೂ ಸ್ವಸ್ಥವಾಗಿ ಕುಳಿತಿರಲಿಲ್ಲ. ಮುಪ್ಪಿನ ಮುದುಕನಾದ ಆತನು[೭] ನವಯುವಕನ ದುರ್ದಮನೀಯವಾದ ಉತ್ಸಾಹದಿಂದ ವಿಜಯನಗರದ ಸೈನ್ಯವನ್ನು ಸಜ್ಜುಗೊಳಿಸಿ, ಒಂದುಗೂಡಿದ ಈ ಸಾಮ್ರಾಜ್ಯದ ವಿಧರ್ಮೀಯ ಶತ್ರುಗಳನ್ನು ವಿಧ್ವಂಸಗೊಳಿಸಲು ತಾನೇ ಅಗ್ರೇಸರನಾಗಿ ಹೊರಟನು. ವಿಜಯನಗರದ ದಂಡಿನಲ್ಲಿ ಸಾಮ್ರಾಜ್ಯದ ಎಲ್ಲ ಭಾಗಗಳಿಂದ ಬಂದವರಾದ ತೆಲುಗರು, ಕನ್ನಡಿಗರು, ಮೈಸೂರಿಗರು, ಮಲಬಾರಿಗರು, ಮುಂತಾದ ದಂಡಾಳುಗಳು ಇದ್ದರು. ಈ ಸೇನೆಯಲ್ಲಿ ೭೦,೦೦೦ ರಾವುತರು ೯೦,೦೦೦ ಕಾಲಾಳುಗಳು ಇದ್ದರು.[೮]

ರಾಮರಾಯನ ತಮ್ಮಂದಿರಾದ ತಿರುಮಲ ಮತ್ತು ವೆಂಕಟಾದ್ರಿ

---

೫. A.D. p. 200.

೬. ರಾಮರಾಯನ ಬಖರ, ಪ್ರಾಚೀನ ಕರ್ನಾಟಕ, ಸಂಪುಟ ೧, ಸಂಚಿಕೆ ೧, ಪುಟ ೨೮.

೭. ಆತನ ವಯಸ್ಸು ೯೬ ಎಂದು ಕೌಟೊ ಹೇಳಿದನು; ೮೦ ಎಂದು ಫಿರಿಷ್ತನು ಬರೆವನು.

೮. ಈ ಸೈನ್ಯದ ಪರಿಮಾಣದ ಬಗೆಗೆ ಭಿನ್ನ ಭಿನ್ನ ಸಂಖ್ಯೆಗಳು ಹೇಳಲಾಗಿವೆ. ಮುಸಲ್ಮಾನರ ಸೇನೆಯು ೬ ಲಕ್ಷದ ವರೆಗೆ ಇದ್ದಿತೆಂದು ಕೆಲವರ ಅಭಿಪ್ರಾಯವು. ಅದರಂತೆ ವಿಜಯನಗರದ ಸೇನೆಯಾದರೂ ೧॥– ೨ ಲಕ್ಷದಿಂದ ೬–೭ ಲಕ್ಷದ ವರೆಗೆ ಇದ್ದಿತೆಂದು ಬೇರೆ ಬೇರೆ ಲೇಖಕರು ಹೇಳಿರುವರು.

ಇವರು ಸೈನ್ಯದ ಬೇರೆಬೇರೆ ಭಾಗಗಳಿಗೆ ನಾಯಕರಾಗಿ ರಾಮರಾಯ ನಿಗೆ ಬೆಂಬಲವಾಗಿ ಸಾಗಿದರು. ವಿಜಯನಗರದ ಶಿಬಿರವು ಎಂದಿನಂತೆ ತನ್ನ ಸಡಗರದ ಆಡಂಬರದಿಂದಲೂ ಅನೇಕ ವಿಧದ ಸುಖೋಪಭೋಗದ ಸೌಕರ್ಯಗಳಿಂದಲೂ ಶೋಭಿಸುತ್ತಿತ್ತು. ವಿಜಯನಗರದ ಸೇನೆಯು ತಾವರಗೇರಿ, ಕುಷ್ಟಗಿ (ಕೃಷ್ಣಗಿರಿ) ಇವುಗಳ ಮಾರ್ಗವಾಗಿ ಪ್ರಸ್ಥಾನ ಹೊರಟು ಕೃಷ್ಣೆಯ ದಕ್ಷಿಣ ದಂಡೆಗೆ ಬಂದು ನಿಂತಿತು.

ಆಗ ರಾಮರಾಯನು ಹೊಳೆಯ ಆಚೆಗೆ ವಿಸ್ತಾರವಾದ ಪ್ರದೇಶ ದಲ್ಲಿ ಹಗೆಯು ಬೀಡು ಬಿಟ್ಟು ಕುಳಿತಿರುವುದನ್ನು ಅವಲೋಕಿಸಿದನು. ಅರಿಗಳ ಅಬ್ಬರವನ್ನೂ ಸ್ಥಿರವೃತ್ತಿಯನ್ನೂ ನೋಡಿ ಆವೇಶಗೊಂಡ ಆತನು ತ್ವರೆಮಾಡಿ ಹೊಳೆಯನ್ನು ಇಳಿದುಹೋಗಿ ಅವರ ಮೇಲೆ ಎರಗಲು ತನ್ನ ಸೇನೆಗೆ ಅಪ್ಪಣೆಯನ್ನು ವಿಧಿಸಿದನು. ಹೀಗೆ ಆಕಸ್ಮಿಕವಾಗಿ ಅಪ್ಪಳಿಸಿ ಹಗೆಯನ್ನು ಹಿಮ್ಮೆಟ್ಟಿಸಿ ಸೋಲಿಸಬೇಕೆಂದು ಆತನು ಬಗೆದನು. ಅಲ್ಪ ಕಾಲದಲ್ಲಿಯೆ ವಿಜಯನಗರದ ಮಹಾಸೇನೆಯು ಕೃಷ್ಣೆಯ ಉತ್ತರ ಭಾಗದಲ್ಲಿ ಕಾಣಿಸಿಕೊಳ್ಳಲಾರಂಭಿಸಿತು. ರಾಕ್ಷಸತಂಗಡಿಯ ನೆರೆಯ ವಿಶಾಲವಾದ ಬಯಲು ಪ್ರದೇಶವನ್ನು ವ್ಯಾಪಿಸಿತು.[೯]

ರಾಮರಾಯನು ಹಿಂದು ಮುಂದಿನ ಎಲ್ಲ ವ್ಯವಸ್ಥೆಯನ್ನು ಮಾಡಿ ತನ್ನ ಶಿಬಿರಕ್ಕೆ ಬಂದು ಸೇರಿದನು. ಬಳಿಕ ಆತನು ಶತ್ರುಪಕ್ಷದ ಸ್ಥಿತಿ-ಗತಿಗಳನ್ನು ನಿರೀಕ್ಷಿಸಲು ರಾಚಬೀಡರೆಂಬ ಆಯ್ಕೆಯ ಮುಂದಂಡಿನ ಭಟರನ್ನು ಅಟ್ಟಿದನು. ಇವರಿಗೂ ಅರಿಪಕ್ಷದ ಅಗ್ರದಳಕ್ಕೂ ಕೈ ಕೈ ಯಾಗಿ ಹಗೆಗಳು ತೀರ ಸಮೀಪಕ್ಕೆ ಬಂದರು ಎಂಬ ವರ್ತಮಾನವು ಬಂದು ತಲುಪಿತು. ಆಗ ರಾಮರಾಯನು ಊಟಕ್ಕೆ ಕುಳಿತಿದ್ದನು. ಆತನು ನಸುವೂ ಅಳುಕದೆ ತಟ್ಟನೆ ಊಟವನ್ನು ಬಿಟ್ಟು ಎದ್ದನು. ಕುದುರೆ ಯನ್ನೇರಿ ವಿದ್ಯುದ್ವೇಗದಿಂದ ಪಾಳ್ಯದಲ್ಲಿ ಸಂಚರಿಸುತ್ತ ಅಲ್ಪಾವಧಿಯಲ್ಲಿ ವಿಜಯನಗರದ ಸೇನೆಯನ್ನು ರಣಾಂಗಣಕ್ಕೆ ಅಣಿಮಾಡಿದನು.

---

೯. ದೀ. ಟಿ. ೧೪.

ಕಲಬುರ್ಗಿ

ಭೀಮಾ ನದಿ

ವಿಜಾಪುರ

ತಾಳೀಕೋಟೆ

ಸುರಪುರ

ಮುದ್ದೇಬಿಹಾಳ

ನಾಲತವಾಡ

ಕೃಷ್ಣಾ ನದಿ

ರಾಕ್ಷಸತಂಗಡಿ

ಘಟಪ್ರಭಾ ನದಿ

ರಾಯಚೂರು

ಮಲಪ್ರಭಾ ನದಿ

ಮುದಗಲ್ಲು

ತಾವರಗೇರಿ

ಕುಷ್ಟಗಿ

ಆನೆಗುಂದಿ

ತುಂಗಭದ್ರಾ ನದಿ

ವಿಜಯನಗರ

ವಿಜಯನಗರದ ಸೈನ್ಯ.

ಮುಸಲ್ಮಾನರ ಸೈನ್ಯ.

........ವಿಜಯನಗರ ಸೈನ್ಯದ ಮಾರ್ಗ

# ರಾಕ್ಷಸತಂಗಡಿ ರಣಭೂಮಿ.

ಅಂದು ಕ್ರಿ. ವ. ೧೫೬೫, ಜನವರಿ ೨೫ನೆಯ ದಿನವು. ವಿಜಯ ನಗರದ ಮಹಾಸೇನೆಯು ವ್ಯೂಹವನ್ನು ಅಳವಡಿಸಿಕೊಂಡು ಕಾದಲಿಕ್ಕೆ ಸಿದ್ಧವಾಯಿತು. ಅದರ ಮುಂಭಾಗದ ಮಧ್ಯದಲ್ಲಿ ಸ್ವತಃ ರಾಮ ರಾಯನೆ ವಿರಾಜಿಸುತ್ತಿದ್ದನು. ಆತನ ಎಡಬಲಗಳಲ್ಲಿ ವೆಂಕಟಾದ್ರಿ-ತಿರುಮಲರು ಸನ್ನದ್ಧರಾಗಿ ನಿಂತುಕೊಂಡರು. ಇತ್ತ ಶತ್ರುಸೇನೆಯ ಮುಖಭಾಗದ ಮಧ್ಯದಲ್ಲಿ ರಾಮರಾಯನನ್ನು ಇದಿರಿಸಿ ನಿಜಾಮ ಶಹನು ನೆಲೆಸಿದ್ದನು. ಆತನ ಎಡಪಕ್ಕೆಯನ್ನು ಕುತುಬ ಮತ್ತು ಬರೀದ ಶಹರು, ಬಲಪಕ್ಕೆಯನ್ನು ಆದಿಲಶಹನು ಕಾಯುತ್ತಿದ್ದರು. ಇವರೀ ಸೈನ್ಯದ ಒಡಲಲ್ಲಿ ಹನ್ನೆರಡು ಇಮಾಮರ ಗೌರವಸೂಚಕವಾಗಿ ಹನ್ನೆರಡು ಹಸರು ಧ್ವಜಗಳು ಉನ್ನತವಾಗಿ ಹಾರಾಡುತ್ತಿದ್ದುವು.[೧೦]

ಇರಿತಕ್ಕೆ ಆರಂಭವಾಗುವ ಮೊದಲು ವೆಂಕಟಾದ್ರಿ-ತಿರುಮಲರು ರಾಮರಾಯನ ಬಳಿಗೆ ಬಂದು, ಆತನು ತನ್ನ ಮುಪ್ಪಿನ ವಯಸ್ಸನ್ನೂ ಯುದ್ಧದ ಸಂಕಟಮಯವಾದ ಪರಿಣಾಮಗಳನ್ನೂ ಆಲೋಚಿಸಿ, ಅಂದಿನ ಸಂಗ್ರಾಮದ ಎಲ್ಲ ಹೊಣೆಯನ್ನು ತಮ್ಮ ಮೇಲೆಯೇ ಒಪ್ಪಿಸಿ ತಾನು ಹಿಂದೆ ನಿಲ್ಲಬೇಕಾಗಿ ಆತನನ್ನು ಪ್ರಾರ್ಥಿಸಿದರು. ರಾಮರಾಯನ ದೃಢ ನಿಶ್ಚಯವು ಕದಲಲಿಲ್ಲ. ಆತನು ತರುಣನಿಗಿಂತ ತರುಣನ ಉತ್ಸಾಹದಿಂದ ಬುದ್ಧಿವಾದವನ್ನು ಹೇಳಿ ಅವರನ್ನು ತಿರುಗಿ ಕಳುಹಿದನು. ಬಳಿಕ ರಾಮ ರಾಯನು ತನ್ನ ಸೇನೆಯನ್ನು ಉದ್ದೇಶಿಸಿ ಸ್ಫೂರ್ತಿಯಿಂದ ಸೂಸುವ ಭಾಷಣವನ್ನು ಮಾಡಿದನು.

"ವಿಜಯನಗರದ ವೀರರೇ, ಎಂದಿಗೂ ಹಿಂದೆಗೆಯೆವು ಎಂಬ ಪ್ರತಿಜ್ಞೆಯಿಂದ ಬದ್ಧರಾಗಿ ಇಂದಿನ ದಿನ ಹಗೆಯೊಡನೆ ಹೋರಾಡಿರಿ. ಇಷ್ಟು ವಯಸ್ಸಾದರೂ ಇಷ್ಟು ಕಾಳಗಗಳಲ್ಲಿ ಕಾದಿದರೂ ನನಗೆ ಸೋಲು ಎಂಬುದು ಅರಿದು. ರಾಮರಾಯನ ವಿಶುದ್ಧಕೀರ್ತಿಗೆ ಸಾಯುವ ವರೆಗೂ ಪರಾಜಯದ ಕಲಂಕವು ಸೋಂಕಲಿಲ್ಲವೆಂಬ ಗೌರವವು ನೀವು ಇಂದಿನ ದಿನದ ನಿಮ್ಮ ಕೃತಿಯಿಂದ ನನಗೆ ಸಲ್ಲುವಂತೆ ಮಾಡಿರಿ.

---

೧೦. A. D. p. 205.

"ಹಂದೆ–ಹೇಡಿಯಾದ ಬಣಗುಗಳಿಗೆ ರಣಾಂಗಣದ ಮಾತೇಕೆ? ಇನ್ನೂ ಹೊತ್ತು ಮೀರಿಲ್ಲ, ಆಲೋಚಿಸಿರಿ; ನಿಮ್ಮಲ್ಲಿ ಇಂತಹರು ಯಾರಾದರೂ ಇದ್ದರೆ, ನಿಮ್ಮಲ್ಲಿ ಯಾರ ಎದೆಯಲ್ಲಿಯಾದರೂ ನಡುಕವು ಹುಟ್ಟುತ್ತಿದ್ದರೆ, ಅವರು ಈಗಲೆ ಈ ಕಣವನ್ನು ಬಿಟ್ಟು ತೊಲಗಲಿ. ಅಪರ ದಾರಿಗೆ ಬೇಲಿಯಿಲ್ಲ."

ರಾಮರಾಯನು ಆಡಿದ ಈ ನುಡಿಗಳನ್ನು ಕೇಳಿ ಆತನ ಬಂಧು ಗಳೂ ಮೂವತ್ತು ಸಾವಿರ ಕುದುರೆಯ ವೀರರೂ "ಜೀವವಿರುವ ವರೆಗೆ ಕಾದುವೆವು ಎಂದು ಪ್ರತಿಜ್ಞೆಯನ್ನು ಮಾಡಿದರು. ಬಳಿಕ ರಾಮ ರಾಯನು ವೈಭವದ ತನ್ನ ಪಲ್ಲಕ್ಕಿಯಲ್ಲಿ ಆರೋಹಣಮಾಡುತ್ತಿರಲು "ಹೀಗೆ ಮಾಡಬೇಡಿರಿ, ಕುದುರೆಯೆ ಹೆಚ್ಚು ಸುರಕ್ಷಿತವಾಗಿದೆ" ಎಂದು ಸೇನಾಧಿಕಾರಿಗಳು ಆತನನ್ನು ಬಿನ್ನವಿಸಿದರು. ಆದರೆ ಆತ್ಮವಿಶ್ವಾಸದ ಮೂರ್ತಿಯಾದ ಆತನು ಅದನ್ನು ಲಕ್ಷಿಸದೆ ಹೀಗೆ ನುಡಿದನು. "ನೀವು ಇಷ್ಟೇಕೆ ಅಂಜುವಿರೋ? ಈ ಪೋರರಿಗೆ ಹೆದರುವುದೆ? ಇಕೊ ನೋಡಿರಿ, ಈ ನಮ್ಮ ಮೊದಲನೆಯ ಹೊಡೆತಕ್ಕೇ ಇವರು ಹಾರಿ ಹೋಗುವರು. ಇದು ಯುದ್ಧವೆ? ಬರಿಯ ಹುಡುಗಾಟಿಕೆ!"

ನಡುಹಗಲು; ದಿನದೊಡೆಯನು ಗಗನಮಧ್ಯದಲ್ಲಿ ಕ್ಷಣಹೊತ್ತು ಸ್ತಿಮಿತನಾಗಿ ತನ್ನ ಸಾವಿರ ಕಣ್ಣುಗಳಿಂದ ಈ ಭೂಭಾಗವನ್ನು ದಿಟ್ಟಿ ಸುತ್ತಿರುವನೋ ಎನ್ನುವಂತಿರಲು, ಕದನಕೋಲಾಹಲಕ್ಕೆ ಮೊದಲಾ ಯಿತು. ಮೊದಲು ಪೆಟ್ಟು ವಿಜಯನಗರದ್ದು; ಅದನ್ನು ಕೊಟ್ಟವನು ವೆಂಕಟಾದ್ರಿಯು. ಆತನ ರಭಸದ ಏರಾಟಕ್ಕೆ ಅಲೀಶಹನ ಸೇನೆಯು ಹಿಂಜರಿಯಿತು. ಕೂಡಲೆ ಎಲ್ಲೆಡೆಯಲ್ಲಿಯೂ ತುಮುಲವಾದ ಸಂಗರದ ಅಲೆಗಳು ಎದ್ದುವು. ತಿರುಮಲನೂ ಆತನ ಮಗನಾದ ರಘುನಾಥನೂ ಆವೇಶದಿಂದ ಅರಿಗಳ ಮೇಲೆ ಅಪ್ಪಳಿಸಿ ಭೀಷಣವಾದ ಸಂಹಾರ ಸತ್ರ ವನ್ನು ಹೂಡಿದರು. ಅದರಿಂದ ಗೋವಳಕೊಂಡದ ಸೈನ್ಯವು ಸೋತು ಹಿಂದೆಗೆಯಿತು. ಇರಿದಾಟದಲ್ಲಿ ರಘುನಾಥನು ಹತನಾದನು. ತಿರುಮಲನ ಒಂದು ಕಣ್ಣಿಗೆ ಗಾಯವಾಯಿತು.

ಇತ್ತ ರಾಮರಾಯನು ಈ ಸುದ್ದಿಯನ್ನು ಕೇಳಿದ ಕೂಡಲೆ ರೊಚ್ಚಿಗೆದ್ದನು. ಪಲ್ಲಕ್ಕಿಯೊಳಗಿಂದ ಅಮೃತನಿಧಾನವೆಂಬ ತನ್ನ ಕುದುರೆಯ ಮೇಲೆ ಹಾರಿ ವೀರಗರ್ಜನೆಯನ್ನು ಮಾಡುತ್ತ ಹುಲಿಯಂತೆ ವಿಜಾಪುರ, ಬಿದರ ಮತ್ತು ಗೋವಳಕೊಂಡದ ಸೈನ್ಯಗಳ ಮೇಲೆ ಎರಗಿದನು. ಪ್ರಚಂಡವಾದ ಪ್ರತಾಪದಿಂದ ಶತ್ರುಸೇನೆಯ ಕೇಂದ್ರವಾದ ಅಹಮುದನಗರ ದಳದ ಮೇಲೆಯೂ ನುಗ್ಗಿದನು. ಅಕಸ್ಮಿಕವಾದ ಈ ಪ್ರಹಾರದಿಂದ ಅಹಮುದನಗರದ ಅನೇಕ ದಂಡಾಳುಗಳು ಹತರಾದರು. ನಿಜಾಮುಶಹನು ಬಹುದೂರಕ್ಕೆ ಹಿಂಜರಿದನು.

ಸ್ವಲ್ಪ ಹೊತ್ತು ಆಗಲು, ಆದಿಲ ಮತ್ತು ನಿಜಾಮುಶಹರು ತಮ್ಮ ದಳಗಳನ್ನು ಅಳವಡಿಸಿಕೊಂಡು ಮತ್ತೆ ಸಮರಮುಖಕ್ಕೆ ಅಣಿಯಾಗಿ ಬಂದರು. ಅರಿಸೇನೆಯ ಮಧ್ಯದಲ್ಲಿ ರಾಮರಾಯನ ದಳಗಳ ಇರಿತವು ನಡೆದೇ ಇತ್ತು. ಅಷ್ಟರಲ್ಲಿ ಅರಿಗಳ ಅಗ್ನಿಯಂತ್ರನಾಯಕನಾದ ರೂಮಿಖಾನನು ಅಗ್ನಿಯಂತ್ರ (ಫಿರಂಗಿ)ಗಳಿಂದ ವಿಜಯನಗರ ಸೈನ್ಯದ ಮೇಲೆ ಬೆಂಕೆಯ ಮಳೆಯನ್ನು ಸುರಿಸುತ್ತ ಮುಂದುವರಿದನು. ಈತನು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅನೇಕ ಅನುಭವಗಳನ್ನು ಪಡೆದವನೂ ಅಗ್ನಿಯಂತ್ರವಿದ್ಯಾವಿಶಾರದನೂ ಆಗಿದ್ದನು. ಈ ಅಗ್ನಿಪ್ರಳಯದಿಂದ ವಿಜಯನಗರದ ಸೇನೆಯು ಕಂಗೆಟ್ಟು ಗೊಂದಲವು ಎದ್ದಿತು.

ಅತ್ತ ನಿಜಾಮುಶಹನು ಸಮರಾಂಗಣದ ಮಧ್ಯದಲ್ಲಿ ತನ್ನ ರಾಹುಟಿಯನ್ನು ತಂದು ಸ್ಥಾಪಿಸಲು ಆಜ್ಞಾಪಿಸಿ ತನ್ನ ಸೈನಿಕರನ್ನು ಹುರಿದುಂಬಿಸತೊಡಗಿದನು. ಅದಕ್ಕೆ ಪ್ರತಿಯಾಗಿ ರಾಮರಾಯನೂ ತನ್ನ ರತ್ನಸಿಂಹಾಸನವನ್ನೇರಿ ಶೌರ್ಯವನ್ನು ಮೆರೆಸಿದವರಿಗೆ ಬೆಲೆಯುಳ್ಳ ಒಡವೆಗಳನ್ನು ಮೆಚ್ಚಾಗಿ ನೀಡಿ, ಮತ್ತೆ ನೀಡುವ ಆಶೆಗಳನ್ನು ಒಡ್ಡಿದನು. ವಿಜಯನಗರದ ಭಟರಲ್ಲಿ ಹೊಸಉತ್ಸಾಹವೇರಿತು. ಅವರ ಹೋರಾಟದ ಆವೇಗವು ವೈರಿಯ ಪಾರ್ಶ್ವಗಳಿಗೆ ಸಹಿಸದಾಯಿತು. ಚಳಿಗಾಲದಲ್ಲಿಯ ತರಗೆಲೆಗಳಂತೆ ಅರಿಸೈನಿಕರ ಹೆಣದ ರಾಶಿಗಳಿಂದ ರಣಭೂಮಿಯು ತುಂಬಿ ಹೋಯಿತು. ವಿಜಯನಗರದ ಶಕ್ತಿ–ಪರಾಕ್ರಮಗಳು ಹಿರಿದಾದುವು.

ಶತ್ರುದಳಗಳು ಪಲಾಯನ ಮಾಡಲನುವಾದುವು. ಆದಿಲ ಮತ್ತು ಕುತುಬಶಹರ ಎದೆಯಲ್ಲಿ ನಿರಾಶೆಯು ಪ್ರವೇಶಿಸಿತು. ಅವರು ಕಾಲು ದೆಗೆವ ಯೋಚನೆಗೊಳಗಾದರು. ವಿಜಯನಗರಕ್ಕೆ ವಿಜಯವೂ ವೈರಿಗೆ ಪರಾಜಯವೂ ಕಟ್ಟಿಟ್ಟುದು ಎಂದೆನಿಸಿತು.

ಆದರೆ ನಿಜಾಮುಶಹನಿಂದ ಅಧಿಷ್ಠಿತವಾದ ಆರಿಕೇಂದ್ರವು ಇನ್ನೂ ಸ್ಥಿರವಾಗಿದ್ದಿತು. ರಾಮರಾಯನ ದಳವು ಈ ಭಾಗದ ಮೇಲೆ ಬಿರುಸಾಗಿ ಮುಗಿಬಿದ್ದಿತು. ಆದರೆ ರೂಮಿಖಾನನ ಬೆಂಕೆಯ ಮಳೆಯನ್ನು ಇದಿರಿಸಲಾರದೆ, ಅದು ಹಿಂದಕ್ಕೆ ಸರಿಯಿತು. ಅಷ್ಟರಲ್ಲಿ ವಿಜಾಪುರದ ಒಬ್ಬ ಸೇನಾನಾಯಕನು ಹಿಂದಿಡುವ ಈ ಸೈನ್ಯದ ಮೇಲೆ ಬಂದು ಬಿದ್ದನು. ಅದಕ್ಕೆ ಅದು ಚದರಿ ಹೋದುದರಿಂದ ರಾಮರಾಯನ ಕೇಂದ್ರವು ವಿಚಲಿತವಾಯಿತು. ಇದೇ ಇಕ್ಕಟ್ಟಿನ ಸಮಯಕ್ಕೆ ವಿಜಯ ನಗರದ ಸೇವೆಯಲ್ಲಿದ್ದು, ಅತಿವಿಶ್ವಾಸಿಗರೆಂದು ತಿಳಿಯಲಾಗಿದ್ದ ಮುಸಲ್ಮಾನ ಸೇನಾನಾಯಕರಿಬ್ಬರು ವಿಜಯನಗರದ ಪಕ್ಷವನ್ನು ತೊಲಗಿ ಶತ್ರುಪಕ್ಷವನ್ನು ಕೂಡಿದರು !

ದಾರುಣವಾದ ಈ ದ್ರೋಹದ ವರ್ತನೆಯಿಂದ ಒಂದು ಕ್ಷಣದಲ್ಲಿ ಯುದ್ಧದ ಬಣ್ಣವೆ ಬೇರೆಯಾಯಿತು. ವಿಜಯನಗರದ ಸೈನ್ಯವು ಭಯ ಭ್ರಾಂತಿಗಳಿಗೀಡಾಯಿತು. ಎತ್ತ ನೋಡಿದತ್ತ ಗೊಂದಲವೇ ಗೊಂದಲವು. ನಾಯಕರ ಮಾತುಗಳೆ ಸೈನಿಕರಿಗೆ ಕೇಳಿಸಲೊಲ್ಲವು. ವ್ಯವಸ್ಥೆಯನ್ನು ಕಾಯುವುದು ಅತಿದುರ್ಘಟವಾಯಿತು. ಈ ಗಲಭೆ ಯಲ್ಲಿ ರಾಮರಾಯನಿಗೆ ಗಾಯವಾಯಿತು. ದಂಡಾಳುಗಳು ದಿಕ್ಕುಗೆಟ್ಟು ಓಡತೊಡಗಿದರು. ಶತ್ರುಗಳ ವಿರಾಟದ ಅಬ್ಬರವು ಮೇರೆವರಿಯಿತು.

ರಾಮರಾಯನು ಈ ಎಲ್ಲ ಪರಿಸ್ಥಿತಿಯನ್ನು ನಿರೀಕ್ಷಿಸಿ ಉಪಾಯ ಗಾಣದೆ ಪಲ್ಲಕ್ಕಿಯಲ್ಲಿ ಕುಳಿತು ರಣಾಂಗಣದಿಂದ ಜಾರಿಹೋಗುವ ಆಲೋಚನೆಯನ್ನು ಮಾಡಿದನು. ಹೀಗೆ ಆತನು ಹೊರಟಿರುವಾಗ ಮಾರ್ಗದಲ್ಲಿ ಅಹಮದನಗರದ ಒಂದು ಮದ್ದಾನೆಯು ಆತನೆಡೆಗೆ ಓಡಿ ಬಂದಿತು. ಭೀತಿಗ್ರಸ್ತರಾದ ಬೋಯಿಗಳು ಪಲ್ಲಕ್ಕಿಯನ್ನು ಅಲ್ಲಿಯೇ

ಚೆಲ್ಲಿ ಗಚ್ಚ ಹೇಳಿದರು. ರಾಮರಾಯನು ಪಲ್ಲಕ್ಕಿಯಿಂದ ಹೊರಬಿದ್ದು ನಡೆದು ಹೋಗುವಷ್ಟರಲ್ಲಿ ಆ ಮದದಾನೆಯು ಆತನ ಮೇಲೆ ತನ್ನ ಸೊಂಡಿಲವನ್ನು ಬೀಸಿತು.

ಅಷ್ಟರಲ್ಲಿ ಅಲ್ಲಿದ್ದ ರೂಮಿ-ಖಾನನು ಆತನನ್ನು ಕೊಲ್ಲಲು ಹವಣಿಸುತ್ತಿರಲು, ಅರಿಪಕ್ಷದ ದಲಪತರಾಯನೆಂಬ ಬ್ರಾಹ್ಮಣನಾಯಕನು "ಆತನನ್ನು ಕೊಲ್ಲಬೇಡ; ಆತನೇ ರಾಮರಾಮನು; ಆತನನ್ನು ಜೀವದಿಂದ ಸೆರೆಹಿಡಿದು ಸುಲ್ತಾನನ ಬಳಿಗೆ ಒಯ್; " ಎಂದು ಕೂಗಿ ಹೇಳಿದನು.

ರೂಮಿಖಾನನು ರಾಮರಾಯನನ್ನು ಸೆರೆಗೆಯ್ದು ಹುಸೇನ ನಿಜಾಮುಶಹನ ಮುಂದೆ ತಂದಿರಿಸಿದನು. ಶಹನು ಕೂಡಲೇ ಆತನ ಶಿರಶ್ಛೇದವನ್ನು ಮಾಡಿ, "ಇಂದು ನನ್ನ ಹಗೆಯು ನಂದಿತು; ನನ್ನ ಅಂತರಾತ್ಮವು ತೃಪ್ತವಾಯಿತು" ಎಂದು ನುಡಿದನು.[೧೧]

ಇಂತು ವಿಜಯನಗರದ ಈ ವೀರಾಧಿವೀರನ ಜೀವನನೌಕೆಯು ಆಕಸ್ಮಿಕವಾಗಿ ಒಡೆದು ಹೋಯಿತು!

---

೧೧. ಈ ಮಹಾಯುದ್ಧವು ೨೭ ದಿನಗಳ ವರೆಗೆ ನಡೆದು ಕೊನೆಯ ದಿನ ರಾತ್ರಿಯ ೧೦ ನೆಯ ತಾಸಿಗೆ (ಗಂಟೆಗೆ) ರಾಮರಾಯನ ಪ್ರಾಣೋತ್ಕ್ರಮಣವಾಯಿತೆಂದು ರಾಮರಾಯನ ಬಖರಿನಲ್ಲಿ ಹೇಳಿದೆ.

## ಹತ್ತೊಂಬತ್ತನೆಯ ವಿಲಾಸ

# ೫. ಸದಾಶಿವರಾಯ (೧೫೪೨-೭೦)

೪

### ಮುಂದಿನ ಗತಿಗಳು (೧೫೬೫-೭೦)

ಈ ಸಮಯದಲ್ಲಿ ವೆಂಕಟಾದ್ರಿ-ತಿರುಮಲರು ಏನು ಮಾಡುತ್ತಿದ್ದರು ? ಯುದ್ಧದ ಹಣೆಬರಹವು ಹೀಗಾಯಿತು; ರಾಮರಾಯನ ಗತಿಯು ಹಾಗಾಯಿತು; ಮುಂದೇನು ? ಎಂಬ ಕಠಿನವಾದ ಸಮಸ್ಯೆಯು ಅವರನ್ನು ಕೆಲಹೊತ್ತು ಬಾಧಿಸಿತು. ರಣಭೂಮಿಯಲ್ಲಿ ನಿಂತು ಅರಿಗಳನ್ನು ಇದಿರಿಸುವ ಆಲೋಚನೆಯಂತೂ ಕೈಮೀರಿ ಹೋಗಿತ್ತು. ಸೇಡಿಗಾಗಿ ಹಾತೊರೆಯುತ್ತಿರುವ ಶತ್ರುಗಳು ವಿಜಯನಗರದ ರಾಜಧಾನಿಯ ಮೇಲೆ ಏರಿಬರುವುದು ಖಂಡಿತವು. ತ್ವರಿತದಲ್ಲಿ ರಾಜಧಾನಿಗೆ ಹೋಗಿ ಅವರನ್ನು ಪ್ರತಿಭಟಿಸುವ ಸಿದ್ಧತೆಯನ್ನು ಮಾಡಬೇಕೆಂದರೆ ಅಲ್ಲಿಯೂ ಆತಂಕಗಳು ಬಹಳ. ಎಲ್ಲ ಸೈನ್ಯವು ರಣಾಂಗಣಕ್ಕೆ ಬಂದುದರಿಂದ ವಿಜಯನಗರದಲ್ಲಿ ಸಾಕಷ್ಟು ಸೈನ್ಯವು ಇರಲಿಲ್ಲವೆಂಬುದು ಮೊದಲನೆಯ ಮಾತು. ರಣಾಂಗಣದಲ್ಲಿ ಚದರಿಹೋದ ಸೈನ್ಯವು ಅಲ್ಲಿ ಒಂದುಗೂಡಿ ಧೈರ್ಯಗೊಂಡು ನಿಲ್ಲುವ ಬಗೆ ಹೇಗೆ ? ಮೇಲಾಗಿ ವಿಜಯೋನ್ಮತ್ತರಾದ ಅರಿಭಟರನ್ನು ಹೊಡೆದೋಡಿಸುವುದು ಹಗುರಾದ ಕೆಲಸವಾಗಿರಲಿಲ್ಲ. ವಿಜಯನಗರದಲ್ಲಿ ಅವರನ್ನು ಪ್ರತಿರೋಧಿಸಲು ಮಾಡಿದ ಪ್ರಯತ್ನವು ಒಂದುವೇಳೆ ವಿಫಲವಾದರೆ—ಹಾಗೆ ಆಗುವುದೇ ಹೆಚ್ಚು ಸಂಭವ—ಮುಂದಿನ ಸ್ಥಿತಿಯು ಎಷ್ಟು ಭಯಂಕರವಾಗುವುದು ! ವಿಜಯನಗರದ ಸಕಲೈಶ್ವರ್ಯವು, ಅಂತಃಪುರವು, ಅರಮನೆಯ ಸಂಪತ್ತು, ಎಲ್ಲವೂ ಆಯತ್ತವಾಗಿ ಅರಿಗಳ ಕೈಯಲ್ಲಿ ಬೀಳುವುದು.

ಆದುದರಿಂದ ಸರ್ವವಿನಾಶದ ಈ ಮಾರ್ಗಕ್ಕಿಂತಲೂ ಕಡಿಮೆ ಅನರ್ಥಕರವಾದ ಬೇರೊಂದು ಮಾರ್ಗವನ್ನು ಆಲೋಚಿಸಿ, ವಿಜಯ

ನಗರದ ಸಿರಿಯನ್ನು ಶಕ್ಯವಿದ್ದಷ್ಟು ಉಳುಹಿ, ವಿನಾಶದ ವಿಪತ್ತು ಆದಷ್ಟು ಸೌಮ್ಯವಾಗುವ ಹಂಚಿಕೆಯನ್ನು ಆ ಬಂಧುಧ್ವಯರ ಆ ಪರಾಭವ ಕಲ್ಲೋಲದಲ್ಲಿ ಕಂಡುಹಿಡಿದರು. ವೆಂಕಟಾದ್ರಿಯು ಮೊದಲು ಚಂದ್ರ ಗಿರಿಗೆ ಹೋಗಬೇಕು. ಅಲ್ಲಿಂದ ತಿರುಪತಿಗೆ ತೆರಳಿ ಮಾಡಬೇಕಾದ ವ್ಯವಸ್ಥೆಯನ್ನು ಮಾಡಬೇಕು. ತಿರುಮಲನು ಕೂಡಲೆ ವಿಜಯನಗ ರಕ್ಕೆ ಹೋಗಿ ಅರಮನೆಯವರನ್ನೂ ಅರಮನೆಯ ಸಂಪತ್ತನ್ನೂ ತೆಗೆದು ಕೊಂಡು ತಿರುಪತಿಯಲ್ಲಿ ವೆಂಕಟಾದ್ರಿಯನ್ನು ಕೂಡಬೇಕು; ಎಂದು ನಿರ್ಧರಿಸಲಾಯಿತು. ಈ ಸಂಕೇತದಂತೆ ತಿರುಮಲನು ರಣಾಂಗಣದಿಂದ ರಾಜಧಾನಿಗೆ ಹೋಗಿ ಅಲ್ಲಿಂದ ಸದಾಶಿವರಾಯ, ಅರಮನೆಯ ಸ್ತ್ರೀ-ಬಂಧುವರ್ಗದೊಂದಿಗೆ ತ್ವರೆಯಿಂದ ತಿರುಪತಿಯತ್ತ ಸಾಗಿದನು. ವಿಜಯ ನಗರದ ರತ್ನಸಿಂಹಾಸನ, ಮುತ್ತು, ಮಾಣಿಕ, ಬಂಗಾರ ಮೊದಲಾದ ವಿಪುಲವಾದ ಧನಸಂಚಯ ಇವುಗಳನ್ನು ಹೇರಿದ ೧೫೫೦ ಆನೆಗಳು, ಮಂತ್ರಿ, ನಾಯಕ ಮೊದಲಾದ ಪರಿವಾರವು ಆತನ ಮಾರ್ಗವನ್ನು ಅನು ಸರಿಸಿತು.

ಇತ್ತ ವಿಜಯಪ್ರಾಪ್ತಿಯಿಂದ ವ್ಯಮರೆತ ಅರಿಗಳು ಓಡು ತ್ತಿರುವ ವಿಜಯನಗರಸೈನ್ಯವನ್ನು ಕೆಲಹೊತ್ತು ಬೆಂಬತ್ತಿ ತಮ್ಮ ಖಡ್ಗ ಗಳ ಹಸಿವನ್ನು ಹಿಂಗಿಸಿಕೊಂಡರು. ಮರಳಿ ರಣಕ್ಷೇತ್ರಕ್ಕೆ ಬಂದು ಅಲ್ಲಿ ಹತ್ತು ದಿವಸಗಳ ವರೆಗೆ ತಂಗಿ, ಯಥೇಷ್ಟವಾಗಿ ಸುಲಿಗೆಯ ಕೆಲಸ ವನ್ನು ನೆರವೇರಿಸಿದರು. ಮಣಿ-ಕನಕಾದಿ ಬಹುಮೂಲ್ಯ ಪದಾರ್ಥ ಗಳಿಂದ ಕಿಕ್ಕಿರಿದು ಸಮೃದ್ಧವಾದ ವಿಜಯನಗರದ ಶಿಬರವು ಅನಾ ಯಾಸವಾಗಿ ಅವರ ಕೈಗೆ ಸಿಕ್ಕಿತು. ಭಾಗ್ಯಲಕ್ಷ್ಮಿಯೇ ಒಲಿದಂತಾ ಯಿತು. ಒಬ್ಬೊಬ್ಬ ದಂಡಾಳುವೂ ಎಣಿಕೆಮೀರಿ ಧನಸಂಪನ್ನನಾದನು.

ಸಮರಾಂಗಣದ ಕಾರ್ಯವನ್ನು ಮುಗಿಸಿದ ಸುಲ್ತಾನರು ಜಯ ಘೋಷ ಮಾಡುತ್ತ ಆನೇಗುಂದಿಗೆ ಬಂದು ತಲುಪಿದರು. ಅವರ ವಿಜ ಯೋನ್ಮತ್ತರಾದ ಸೈನಿಕರೂ ಸೇನಾಯಕರೂ ಮುಂದೆ ಹೊರಟು ವಿಜಯನಗರಕ್ಕೆ ಬಂದು ವಿರೋಧವಿಲ್ಲದೆ ಪುರವನ್ನು ಪ್ರವೇಶಿಸಿದರು.

ಇನ್ನೂರು ವರ್ಷಗಳ ಪರಿಶ್ರಮದಿಂದ ಸಕಲೈಶ್ವರ್ಯ–ಸೌಂದರ್ಯಗಳಿಗೆ ಸರಿದೊರೆಯಿಲ್ಲದ ನೆಲೆವೀಡಾಗಿ, ವಿಶ್ವವಿಖ್ಯಾತಿಯನ್ನು ಪಡೆದು ಸಾಮ್ರಾಜ್ಯಲಕ್ಷ್ಮಿಯ ಒನಪು-ಒಯ್ಯಾರಗಳಿಂದ ವಿಲಸಿತವಾದ ಶ್ರೀ ವಿಜಯನಗರವು ಅಂದು ಮದಾಂಧ ಹೂಣರ ಸ್ವೈರ ಉಪಭೋಗದ ವಸ್ತುವಾಯಿತು ! ಅವರ ಅನನ್ವಿತ ಅತ್ಯಾಚಾರಗಳಿಗೆ ಸುಲಭವಾದ ಬಲಿಯಾಯಿತು ! ಸುಲ್ತಾನರ ದಂಡಾಳುಗಳು ಊರಲ್ಲಿ ಹರಿಬಿದ್ದು ಮನ ಸೋಕ್ತವಾದ ಲೀಲೆಗಳನ್ನು ಆರಂಭಿಸಿದರು. ಅವನ್ನು ಇದಿರಿಸುವ ಎದೆ ಗಳಲ್ಲಿ ಉಸಿರು ನಿಲ್ಲಲಿಲ್ಲ; ತಡೆವ ಕೈಗಳಿಗೆ ಕಸುವು ಸಾಲಲಿಲ್ಲ.

ವಿಜಯನಗರದ ವಿಧ್ವಂಸಸತ್ರವು ಮುಂದುವರಿಯಿತು. ಸುಂದರ ವಾದ ಮಂದಿರಗಳು ಉಧ್ವಸ್ತವಾದುವು; ಪವಿತ್ರವಾದ ಸ್ಥಳಗಳು ಭ್ರಷ್ಟ ವಾದುವು. ರಮಣೀಯವಾದ ದೇವಾಲಯಗಳು, ಮನೋಹರವಾದ ಮೂರ್ತಿಗಳು, ಭವ್ಯವಾದ ಪ್ರಾಸಾದಗಳು, ಎಲ್ಲವೂ ಛಿನ್ನವಿಚ್ಛಿನ್ನ ವಾದುವು. ಎಲ್ಲೆಲ್ಲಿಯೂ ಉಚ್ಛೇದ, ವಿನಾಶ, ಭ್ರಷ್ಟಾಕಾರ ! ಈ ಅನಾಯಕದಲ್ಲಿ ಬೇಡರ, ಪುಂಡರ,ಕಳ್ಳರ ತಂಡಗಳೂ ಕೈಸಾಧಿಸಿ ಕೊಲೆ-ಸುಲಿಗೆಗಳ ಹಾವಳಿಯನ್ನು ಎಬ್ಬಿಸಿದುವು. ಬಳಿಕ ಈ ವಿಧ್ವಂಸಕರು ಹಾಳಾಗಿ ಸತ್ವಹೀನವಾದ ಪಟ್ಟಣಕ್ಕೆ ಬೆಂಕೆಯಿಟ್ಟರು. ವಿಜಯನಗರವು ಧಗಧಗನೆ ಉರಿಯುತ್ತ ಅಗ್ನಿನಾರಾಯಣನಿಗೆ ಆಹುತಿಯಾಯಿತು !

ಈ ಮೇರೆಗೆ ಭಾರತೀಯರ ಕೊನೆಯ ಸಾಮ್ರಾಜ್ಯದ ಹೆಮ್ಮೆಯ ರಾಜಧಾನಿಯಾದ ವಿಜಯನಗರದಲ್ಲಿ ಈ ಸುಲ್ತಾನರು ಆರು ತಿಂಗಳ ವರೆಗೆ ನೆಲೆಸಿ ಮನಬಂದಂತೆ ಚಕ್ಕಂದವಾಡಿ ಕೃತಾರ್ಥರಾದರು. ವಿಜಯ ನಗರದ ಮೇಲಿನ ಹಗೆಯು ಪೂರ್ತಿಯಾಗಿ ತೀರಿಸಿದಂತಾಯಿತು. ಬಳಿಕ ಈ ಸುಲ್ತಾನರು ತಮ್ಮ ತಮ್ಮ ರಾಜ್ಯಗಳಿಗೆ ತಿರುಗಿ ಹೋಗಲು ಮನಸುಮಾಡಿದರು. ಅವರು ತಮ್ಮ ರಾಜ್ಯಗಳನ್ನು ಬಿಟ್ಟು ಬಹು ದೂರ ಬಂದಿದ್ದರು. ಅಲ್ಲದೆ, ಈಗ ಅವರಲ್ಲಿ ಪರಸ್ಪರ ವೈಮನಸ್ಯಗಳು ತಲೆಯೆತ್ತಲಾರಂಭಿಸಿದ್ದುವು. ಈ ಸಮಯಕ್ಕೆ, ರಾಮರಾಯನು ಗೆದ್ದ ನಿಮ್ಮ ನಿಮ್ಮ ಎಲ್ಲ ಪ್ರದೇಶಗಳನ್ನು ತಿರುಗಿ ಬಿಡುವೆವು, ಎಂದು ವೆಂಕ

ಟಾದ್ರಿಯು ಸುಲ್ತಾನರಲ್ಲಿಗೆ ಸಮರಶಾಂತಿಯ ಬಿನ್ನಹವನ್ನು ಕಳುಹಿ ದನು. ಉತ್ಕಂಠಿತರಾದ ಸುಲ್ತಾನರು ಕೂಡಲೇ ಈ ಸಂಧಾನವನ್ನು ಒಪ್ಪಿಕೊಂಡು ವಿಜಯನಗರದಿಂದ ಹೊರಟರು. ರಾಯಚೂರವರೆಗೆ ಎಲ್ಲರೂ ಕೂಡಿಯೇ ಹೋಗಿ ಮುಂದೆ ಬೇರೆ ಬೇರೆಯಾಗಿ ತಮ್ಮ ತಮ್ಮ ರಾಜ್ಯಗಳಿಗೆ ತೆರಳಿದರು (೧೫೬೮).

ಸುಲ್ತಾನರು ಬಿಟ್ಟು ಹೋದ ಒಳಿಕ, ತಿರುಮಲನು ವಿಜಯ ನಗರಕ್ಕೆ ಬಂದು, ಅದನ್ನು ತನ್ನ ರಾಜಧಾನಿಯನ್ನು ಮಾಡಿಕೊಂಡು ಅದರ ವೈಭವವನ್ನು ಮತ್ತೆ ಬೆಳಗಿಸಬೇಕೆಂದು ಪ್ರಯತ್ನಿಸಿದನು. ಪೋರ್ತುಗೀಜರಿಗೆ ಲಾಭದ ಆಶೆಗಳನ್ನು ಒಡ್ಡಿ ಮೊದಲಿನಂತೆ ವ್ಯಾಪಾರ ವನ್ನು ನಡೆಸಲು ಪ್ರೋತ್ಸಾಹಿಸಿದನು.ಅವರಿಂದ ಕಾಳೆಗದ ಕುದುರೆಗಳನ್ನು ಕೊಂಡನು. ಇಷ್ಟರಲ್ಲಿ ಉತ್ತರದ ಸುಲ್ತಾನರಲ್ಲಿಯ ವಿತುಷ್ಟಗಳು ವಿಕೋಪಕ್ಕೆ ಹೋಗಿ, ಅವರು ತಿರುಮಲನ ಸಹಾಯವನ್ನು ಬಯಸುವ ಸಂದರ್ಭವು ಒದವಿತು. ಅಹಮದನಗರದಲ್ಲಿ ಹುಸೇನ ನಿಜಾಮುಶಹನು ಮಡಿಯಲು, ಆತನ ಪಟ್ಟಕ್ಕೆ ಬಂದ ಮೂರ್ತಜಾ ಶಹನು ಅಪ್ರಿಯನಾಗಿ ರಾಜ್ಯದಲ್ಲಿ ಕಲಹಗಳು ಉಂಟಾದುವು. ಮಂತ್ರಿ ಯಾದ ಕಿಶ್ವರಖಾನನು ಆದಿಲಶಹನನ್ನು ಬರಮಾಡಿಕೊಳ್ಳುವ ಹವಣಿಕೆ ಯಲ್ಲಿ ಇದ್ದುದನ್ನು ಅರಿತು, ಮೂರ್ತಜಾಶಹನು ಆದಿಲಶಹನ ವಿರುದ್ಧ ವಾಗಿ ಗೋವಳಕೊಂಡದ ಇಬ್ರಾಹಿಮ ಕುತುಬಶಹನನ್ನು ಸೇರಿ, ತಿರು ಮಲನ ಸಹಾಯದಿಂದ ಆದಿಲಶಹನನ್ನು ಹಣಿಯಬೇಕೆಂಬ ಹಂಚಿಕೆ ಯನ್ನು ಹೂಡಿದನು.

ಈ ರೀತಿಯಾಗಿ, ವಿಜಯನಗರದ ಪ್ರಧಾನ ವೈರಿಯಾದ ಆದಿಲ ಶಹನ ಸೇಡನ್ನು ತೀರಿಸುವ ಸುಸಂಧಿಯು ತಿರುಮಲನಿಗೆ ಅನಾಯಾಸ ವಾಗಿ ಪ್ರಾಪ್ತವಾಯಿತು. ಆದರೆ, ಈ ಮಧ್ಯದಲ್ಲಿ ಅಹಮದನಗರದ ರಾಜಮಾತೆಯಾದ ಕುಂಝುಹುಮಾಯುನಳು, ವಿಜಾಪುರದವರು ಗೆದ್ದು ಕೊಂಡ ಪ್ರದೇಶವನ್ನು ಮರಳಿ ಸಂಪಾದಿಸಲು ತಾವು ನೀಡುವ ಈ ನೆರವಿ ಗಾಗಿ ತಿರುಮಲನು ತಮಗೆ ಎರಡು ಲಕ್ಷ ಹೊನ್ನುಗಳನ್ನು ಕೊಡ

ಬೇಕೆಂದು ಹಟಹಿಡಿದಳು. ತಿರುಮಲನಿಗೆ ಇದು ಸಹನವಾಗಲಿಲ್ಲ. ಆತನು ಹಣಕೊಡಲೊಪ್ಪುವ ಮಾತಂತಿರಲಿ, ತನ್ನ ಸೇನೆಯೊಂದಿಗೆ ಅಹಮದ ನಗರ ಮತ್ತು ಗೋವಳಕೊಂಡದ ಸಂಯುಕ್ತ ಸೈನ್ಯದ ಮೇಲೆ ಸಾಗಿ ಹೋದನು. ಇದರಿಂದ ಕುತುಬಶಹನು ಹೆದರಿ, ಮನವೊಲಿಸಿ ಆತನನ್ನು ತಿರುಗಿ ಕಳುಹಿದನು (೧೫೬೬).

ಈ ಪ್ರಸಂಗದಿಂದ ಅಲೀಶಹನಲ್ಲಿ ವಿಜಯನಗರದ ದ್ವೇಷವು ಅಧಿಕ ವಾಯಿತು. ಆತನು ತಿರುಮಲನನ್ನು ಶಿಕ್ಷಿಸುವ ಉದ್ದೇಶದಿಂದ ವಿಜಯ ನಗರದ ಮೇಲೆ ದಂಡಯಾತ್ರೆಯನ್ನು ಕೈಕೊಂಡನು. ತಿರುಮಲನು ಅಹಮದನಗರದ ಸಹಾಯವನ್ನು ಬೇಡಲು, ಅಹಮದನಗದ ದಂಡು ವಿಜಾಪುರದ ಮೇಲೆ ಏರಿಬಂದಿತು. ಅಲೀಶಹನು ತನ್ನ ರಾಜಧಾನಿ ಯನ್ನು ಉಳುಹಿಕೊಳ್ಳಲು ತಿರುಗಿ ಹೋದನು. ಈ ರೀತಿಯಾಗಿ ಮೊದಲಿ ನಂತೆ ಸಾಮ್ರಾಜ್ಯದ ಬಲವಿಲ್ಲದ ವಿಜಯನಗರಕ್ಕೆ ಮೇಲಿಂದ ಮೇಲೆ ಭಯಗಳು ಒಡ್ಡಿದುವು. ತಿರುಮಲನ ಅಸ್ಥೈರ್ಯದ ವರ್ತನೆಯಿಂದ ಪೋರ್ತುಗೀಜ ವರ್ತಕರ ನಂಬುಗೆಯೂ ಹಾರಿತು.

ಇಂತು ಪೂರ್ವವೈಭವವೂ ಸುರಕ್ಷಿತತೆಯೂ ಮತ್ತೆ ಲಭಿಸುವ ಚಿನ್ಹಗಳು ತೋರದುದರಿಂದ, ತಿರುಮಲನು ವಿಜಯನಗರದ ಅಭಿಲಾಷೆ ಯನ್ನು ಪೂರ್ತಿಯಾಗಿ ಬಿಟ್ಟು ವಿಜಯನಗರದ ಆಗ್ನೇಯದಲ್ಲಿ ಸುಮಾರು ೧೦೦ ಮೈಲಿನ ಮೇಲೆ ಭದ್ರವಾದ ಕೋಟೆಯ ಸ್ಥಳವಾಗಿರುವ ಪೆನು ಗೊಂಡಕ್ಕೆ ತನ್ನ ರಾಜಧಾನಿಯನ್ನು ಒಯ್ದನು (೧೫೬೭). ವಿಜಯ ನಗರದ ಸೌಭಾಗ್ಯವು ಚಿರಕಾಲ ಅಳಿಸಿ ಹೋಯಿತು. ವಿಜಯನಗರವು ಹಾಳುಹಂಪೆಯಾಯಿತು.

ರಾಕ್ಷಸತಂಗಡಿಯಿಂದ ವಿಜಯನಗರ ಸಾಮ್ರಾಜ್ಯಕ್ಕೆ ಒದಗಿದ ವಿಷಮಪರಿಸ್ಥಿತಿಯಲ್ಲಿ ಹಲವು ಮಾಂಡಲಿಕರೂ ನಾಯಕರೂ ಸ್ವತಂತ್ರ ರಾಗಲೆಳಸಿ ಸಾಮ್ರಾಜ್ಯದಿಂದ ಸಿಡಿದು ಹೋಗಲು ಹವಣಿಸಿದರು. ಇಂತಹರಲ್ಲಿ ಆದವಾನಿಯ ದುರ್ಗಾಧಿಕಾರಿಯೂ ಜೆರ್ರೆ, ಚಂದ್ರಗುತ್ತಿ, ಮತ್ತು ಕಡೂರ ಅರಸರ ಮೇಲೆ ತನ್ನ ಅಧಿಕಾರಕ್ಷೇತ್ರವನ್ನು ಬೆಳೆಸಿ

ಕೊಂಡ ಬಂಕಾಪುರ—ಧಾರವಾಡಗಳ ಮೇಲಧಿಕಾರಿಯಾದ ವೇಲಪ್ಪ ನಾಯಕನೂ ಪ್ರಮುಖರಾದರು.[೧]

ರಾಕ್ಷಸತಂಗಡಿ ಯುದ್ಧವಾದ ಬಳಿಕ ಸುಮಾರು ಐದು ವರ್ಷಗಳವರೆಗೆ ಸದಾಶಿವರಾಯನು ಬಾಳಿದನು. ಈ ಅವಧಿಯಲ್ಲಿ ಆತನ ಪೂರ್ವಸ್ಥಿತಿಯಲ್ಲಿ ವಿಶೇಷ ವ್ಯತ್ಯಾಸವು ಆಗಲಿಲ್ಲ. ಆತನು ಹಿಂದಿನಂತೆ ಪ್ರತಿಬಂಧದಲ್ಲಿಯೆ ಕಾಲಕಳೆದನು. ಈಗ ಆತನ ಕಾರಾಗೃಹದ ಅಧ್ಯಕ್ಷನ ಸ್ಥಳದಲ್ಲಿ ರಾಮರಾಯನು ಹೋಗಿ ತಿರುಮಲನು ಬಂದಿದ್ದನು ಇಷ್ಟೆ. ಯುದ್ಧದ ಗಲಭೆಯಲ್ಲಿ ವಿಜಯನಗರದಿಂದ ತಿರುಮಲನೊಡನೆ ತೆರಳಿದ ಆತನು ಮರಳಿ ಅಲ್ಲಿಗೆ ಹೋಗಲೆ ಇಲ್ಲ. ಆತನು ಕೆಲಕಾಲ ತಿರುಪತಿಯಲ್ಲಿ ವಾಸವಾಗಿ ಅಲ್ಲಿಂದ ಹೊಸ ರಾಜಧಾನಿಯಾದ ಪೆನುಗೊಂಡಕ್ಕೆ ಪಯಣಿಸಿದನು (೧೫೬೭).

ಮರುವರ್ಷ ಸಾಮ್ರಾಜ್ಯದ ಮಾಂಡಲಿಕರಲ್ಲಿಯೂ ಪ್ರಜಾಜನರಲ್ಲಿಯೂ ರಾಜನಿಷ್ಠೆಯನ್ನು ನೆಲೆಗೊಳಿಸುವುದಕ್ಕಾಗಿ ದಕ್ಷಿಣದೇಶದಲ್ಲಿ ಶ್ರೀರಂಗಂ ಮೊದಲಾದ ಸ್ಥಳಗಳಿಗೆ ಸದಾಶಿವರಾಯನ ಸಂಚಾರ ಕ್ರಮವು ಏರ್ಪಡಿಸಲಾಯಿತು (೧೫೬೮). ಬಳಿಕ ಸರ್ವಾಧಿಕಾರಿಯಾಗಿದ್ದರೂ ಸಮ್ರಾಜನೆನಿಸಿಕೊಳ್ಳಬೇಕೆಂಬ ಹವ್ಯಾಸವು ತಿರುಮಲನಲ್ಲಿ ದಿನದಿನಕ್ಕೆ ಬಲಿಯಿತು. ಮುಂದೆ ಎರಡು ವರ್ಷಗಳಾಗುವಷ್ಟರಲ್ಲಿ ಸದಾಶಿವರಾಯನನ್ನು ಇಹಲೋಕದಿಂದ ತೆರಳಿಸಬೇಕೆಂದು ವ್ಯೂಹಗಳು ನಡೆದುವು. ದುರ್ದೈವಿಯೂ ದುರ್ಬಲನೂ ಆದ ಈ ಮುಕುಟಧಾರಿಯು ಅವುಗಳಿಗೆ ಆಹುತಿಯಾದನು (೧೫೭೦).[೨]

ಇಂತು ರಾಜನೆನಿಸಿಯೂ ರಾಜ್ಯವಾಳದ ಸದಾಶಿವರಾಯನ ಮರಣದೊಂದಿಗೆ ವಿಜಯನಗರದ ಮೂರನೆಯ ಅರಸು ಮನೆತನವಾದ

---

೧. A. D. P. 243.

೨. ಸದಾಶಿವರಾಯನ ಮರಣದ ರಹಸ್ಯವು ಗೂಢವಾಗಿದೆ. ತಿರುಮಲನು ಆತನನ್ನು ಕೊಲ್ಲಿಸಿದನು ಎಂದು ಕೆಲವರು ಹೇಳುವರು. ತಿರುಮಲನ ಮಗನಾದ ವೆಂಕಟಪತಿಯು ಆತನನ್ನು ವಧಿಸಿದನು ಎಂದು ಬೇರೆಯವರು ಹೇಳುವರು. ಅದೇನೇ ಇರಲಿ ಆತನ ಕೊಲೆಗೆ ಕೆಲಮಟ್ಟಿಗಾದರೂ ತಿರುಮಲನೆ ಹೊಣೆಗಾರನೆಂಬುದು ನಿರ್ವಿವಾದವು.

ಈ ತುಳುವಂಶವು ಪರಿಸಮಾಪ್ತಿ ಹೊಂದಿತು. ಸದಾಶಿವರಾಯನಿಗೆ ವಿಠ್ಠಲರಾಯನೆಂಬ ಮಗನೂ ಒಬ್ಬ ಮಗಳೂ ಇದ್ದರು.

ಕೆಲವು ಅನಾಹೂತಗಳನ್ನು ಬಿಟ್ಟರೆ, ಸದಾಶಿವರಾಯ-ರಾಮರಾಯರ ಆಳಿಕೆಯು ಒಟ್ಟಿನಮೇಲೆ ಪ್ರಜಾಜನರಿಗೆ ಹಿತಕರವಾಯಿತು. ನಾವಿದರ ಮೇಲೆ ಹೇರಲಾಗಿದ್ದ ಕೆಲವು ಅನ್ಯಾಯದ ತೆರಿಗೆಗಳು ಈ ಆಳಿಕೆಯಲ್ಲಿ ತೆಗೆಯಲಾದುವು. ಇದಲ್ಲದೆ ಕೆಲವು ಪಂಗಡಗಳಲ್ಲಿ ಪ್ರಚುರವಾಗಿದ್ದ ಲಗ್ನದಲ್ಲಿಯ ಕುದುರೆಯ ಸವಾರಿಯ ಮೇಲಿನ ಕರವು ದೂರ ಮಾಡಲಾಯಿತು. ಸದಾಶಿವರಾಯನು ಉಪ್ಪುಗಾರರಿಗೆ ಉಚಿತ ಭೂಮಿಗಳನ್ನೂ ಹಲವು ಸೌಕರ್ಯಗಳನ್ನೂ ನೀಡಿದನು.

ಈ ಆಳಿಕೆಯಲ್ಲಿ ಶ್ರೀವೈಷ್ಣವಮತಕ್ಕೆ ವಿಶೇಷವಾದ ಪ್ರೋತ್ಸಾಹವು ದೊರೆತಿತು. ಪಂಚಮತಭಂಜನವೆಂಬ ಗ್ರಂಥದ ಕರ್ತರೂ ರಾಮಾನುಜಪಂಡಿತರೂ ಆದ ತಾತಾಚಾರ್ಯರು ರಾಜಗುರುಗಳಾಗಿದ್ದರು. ರಾಮರಾಯನೂ ಸದಾಶಿವರಾಯನೂ ರಾಮಾನುಜ ಮತದ ಬೇರೆ ನಾಮಾಂಕಿತ ಆಚಾರ್ಯರನ್ನೂ ಆದರದಿಂದ ಉಪಚರಿಸಿದರು. ರಾಮಾನುಜ ದೇವಾಲಯ-ಮಠ-ಸತ್ರಗಳಿಗೆ ಅನೇಕ ದಾನಗಳನ್ನು ಕೊಟ್ಟರು.

ಸಾಹಿತ್ಯ-ಸಂಗೀತ ಮೊದಲಾದ ಕಲೆಗಳು ಈ ಆಳಿಕೆಯಲ್ಲಿ ಅಭಿವೃದ್ಧಿಯನ್ನು ಪಡೆದುವು. ಭಟ್ಟುಮೂರ್ತಿಯೆಂಬ ಆಂಧ್ರಕವಿಯು ರಾಮರಾಯನ ಆಸ್ಥಾನವನ್ನು ಅಲಂಕರಿಸಿದನು. ರಾಮರಾಯನು ಸಂಗೀತವಿದ್ಯೆಯಲ್ಲಿ ಸರ್ವಜ್ಞನಾಗಿದ್ದನು. ಆತನ ಪ್ರೇರಣೆಯ ಮೇರೆಗೆ ರಾಮಯಮಾತ್ಯನು ಸ್ವರಮೇಲಕಲಾನಿಧಿಯೆಂಬ ಸಂಗೀತ ಶಾಸ್ತ್ರದ ಗ್ರಂಥವನ್ನು ರಚಿಸಿದನು.

ಮಾಧ್ವಮತದ ಯತಿವರ್ಯರಾದ ವಾದಿರಾಜ ಮತ್ತು ವಿಜಯೀಂದ್ರರು ಸಂಸ್ಕೃತದಲ್ಲಿ ಕಾವ್ಯ, ವೇದಾಂತ ಮೊದಲಾದ ಅನೇಕ ವಿಷಯದ ಗ್ರಂಥಗಳನ್ನು ಬರೆದರು. ವಾದಿರಾಜರ ರುಕ್ಮಿಣೀಶವಿಜಯ, ತೀರ್ಥಪ್ರಬಂಧ ಇವುಗಳು ಒಳ್ಳೆಯ ಕಾವ್ಯಗಳ ಮಾಲಿಕೆಯಲ್ಲಿ ಸೇರು

ವಂತಹವಾಗಿವೆ. ವಾದಿರಾಜರು ಕನ್ನಡದಲ್ಲಿಯೂ ಗ್ರಂಥಗಳನ್ನೂ ಕೀರ್ತನೆಗಳನ್ನೂ ಬರೆದರು. ಇವರಲ್ಲದೆ ದಾಸಕೂಟಕ್ಕೆ ಸೇರಿದ ಪುರಂದರ ದಾಸ ಮೊದಲಾದವರು ಕಾವ್ಯಗಳನ್ನೂ ಮಧುರವಾದ ಅನೇಕ ಕೀರ್ತನೆಗಳನ್ನೂ ರಚಿಸಿ ದಾಸಸಂಪ್ರದಾಯವನ್ನೂ ವಿಷ್ಣುಭಕ್ತಿಯನ್ನೂ ಕನ್ನಡ ಸಾಹಿತ್ಯವನ್ನೂ ಮುಂದುವರಿಸಿದರು.

ಮಹಾದೇವಿಯಕ್ಕನ ಪುರಾಣವನ್ನು ರಚಿಸಿದ ಚೆನ್ನ ಬಸವಾಂಕನು, ಆದಿತ್ಯಪುರಾಣಕರ್ತನಾದ ರಾಮಚಂದ್ರಗುರುಶಿಷ್ಯನು, ಚೋಳರಾಜ ಸಾಂಗತ್ಯವನ್ನು ಬರೆದ ಲಿಂಗನು ಈ ಕಾಲದ ಪ್ರಮುಖ ವೀರಶೈವ ಕವಿಗಳಾಗಿರುವರು. ಭಾರತ, ರಸರತ್ನಾಕರ ಮೊದಲಾದ ಗ್ರಂಥಗಳ ಕರ್ತನಾದ ಸಾಳ್ವನು, ಚಂದ್ರಪ್ರಭಚರಿತೆಯನ್ನು ಬರೆದ ದೊಡ್ಡಯ್ಯನು, ಭರತೇಶ್ವರಚರಿತ್ರೆಯನ್ನು ಹಾಡಿದ ರತ್ನಾಕರವರ್ಣಿಯೂ ಈ ಕಾಲದ ಜೈನಕವಿಗಳಲ್ಲಿ ಗಣ್ಯರಾಗಿರುವರು.

ಈ ಆಳಿಕೆಯು ವಿಜಯನಗರ ಸಾಮ್ರಾಜ್ಯದ ಚರಿತ್ರೆಯಲ್ಲಿಯೂ ಕರ್ನಾಟಕದ ಇತಿಹಾಸದಲ್ಲಿಯೂ ಅನೇಕ ದೃಷ್ಟಿಯಿಂದ ಚಿರಸ್ಮರಣೀಯವಾಗಿದೆ. ರಾಮರಾಯನೂ ಆತನೊಡನೆ ವಿಜಯನಗರವೂ ಅಸಾಮಾನ್ಯವಾದ ಉತ್ಕರ್ಷವನ್ನು ಹೊಂದಿದುದು ಇದೇ ಆಳಿಕೆಯಲ್ಲಿ. ಆರನೆಯ ಶತಮಾನದಿಂದ ಸಾಮ್ರಾಜ್ಯವನ್ನು ಕಟ್ಟಲಾರಂಭಿಸಿ ಸುಮಾರು ಒಂದು ಸಾವಿರ ವರ್ಷಗಳ ವರೆಗೆ ಅತ್ಯಂತ ವೈಭವದಿಂದ ಸಾಮ್ರಾಜ್ಯವನ್ನು ಉಪಭೋಗಿಸಿದ ಕರ್ನಾಟಕದ ಅರಸೊತ್ತಿಗೆಗೆ ದಾರುಣ ಪ್ರಹಾರವನ್ನು ಮಾಡಿ ಅದರ ಅಳಿಗಾಲದ ಅಸ್ತಿವಾರವನ್ನು ತೋಡಿದ ರಾಕ್ಷಸತಂಗಡಿಯ ಮಹಾಯುದ್ಧವು ಸಂಭವಿಸಿದುದು ಈ ಆಳಿಕೆಯಲ್ಲಿಯೆ. ರಾಕ್ಷಸತಂಗಡಿಯ ತರುವಾಯ ವಿಜಯನಗರವು ಸಾಮ್ರಾಜ್ಯವೆಂದು ಕೆಲಕಾಲ ಬಾಳಿತು. ಆದರೆ ಅದಕ್ಕೆ ಮೊದಲಿನ ಸಾಮರ್ಥ್ಯವೂ ವೈಭವವೂ ಪ್ರಾಪ್ತವಾಗಲಿಲ್ಲ. ರಾಕ್ಷಸತಂಗಡಿಯ ಪೆಟ್ಟು ವಿಜಯನಗರಸಾಮ್ರಾಜ್ಯಕ್ಕೆ ಮರ್ಮಾಘಾತವಾಗಿಯೆ ಪರಿಣಮಿಸಿತು. ಅಂದು ಕುಸಿಬಿದ್ದ ಈ ಸಾಮ್ರಾಜ್ಯವು ಮುಂದೆ ಎಂದೂ ಮೊದಲಿನಂತೆ ಚೇತರಿಸಿಕೊಂಡು ಏಳಲಿಲ್ಲ.

## ರಾಕ್ಷಸತಂಗಡಿಯ ಮೀಮಾಂಸೆ

ರಾಕ್ಷಸತಂಗಡಿಯಿಂದಾದ ಅನರ್ಥಗಳು ವಿಜಯನಗರ ಸಾಮ್ರಾಜ್ಯಕ್ಕಿಂತಲೂ ಕರ್ನಾಟಕಕ್ಕೆ ಬಹು ಭಯಾನಕವೂ ಚಿರಸ್ಥಾಯಿಯೂ ಆದುವು. ಕರ್ನಾಟಕದ ಕೇಂದ್ರಸ್ಥಾನವಾಗಿದ್ದ ವಿಜಯನಗರವು ಹಾಳಾಗಿ ಮುಂದೆ ಬೇರೆಡೆಯಲ್ಲಿ ಸಾಮ್ರಾಜ್ಯದ ರಾಜಧಾನಿಯು ಸ್ಥಾಪಿತವಾದುದು ಕರ್ನಾಟಕಕ್ಕೆ ಅತ್ಯಂತ ಹಾನಿಕರವಾಯಿತು. ಇದರಿಂದ ಕರ್ನಾಟಕವು ಸ್ಥಾನಚ್ಯುತವಾಗಿ ದೆಸೆಗೆಟ್ಟಿತು. ಕನ್ನಡಿಗರ ಪ್ರಭಾವವು ಬಹಳ ಕಡಿಮೆಯಾಗಿ ಇತರರ ಪ್ರಾಬಲ್ಯವು ಬೆಳೆಯಿತು. ರಾಕ್ಷಸತಂಗಡಿಯ ಹೊಡೆತದಿಂದ ಕನ್ನಡ ಜೀವನದ ಮೇಲೆ ಮಲಿನತೆಯ ಕಪ್ಪು ತೆರೆಯು ಕವಿದಿತು. ಕನ್ನಡ ಸಂಸ್ಕೃತಿಯು ನಿರ್ವೀರ್ಯವಾಯಿತು. ಕನ್ನಡ ಜನಾಂಗದಲ್ಲಿ ಪರಿಪಾಕಗೊಂಡು ಬೆಳಗಿದ ಶೌರ್ಯ, ಪರಾಕ್ರಮ, ಸಾಹಸ, ಐಕ್ಯ, ಸಂಘಟನೆ, ಸ್ವಾಭಿಮಾನ, ದೀರ್ಘೋದ್ಯೋಗ, ಕಾರ್ಯನಿಷ್ಠೆ, ಸ್ವಾರ್ಥತ್ಯಾಗ, ಪ್ರಗತಿಪ್ರೇಮ, ಕರ್ತೃತ್ವ ಮೊದಲಾದ ಉಜ್ವಲವಾದ ಅನೇಕ ಸದ್ಗುಣಗಳು ಬರುಬರುತ್ತ ಲುಪ್ತವಾಗಿ ಕನ್ನಡರಾಷ್ಟ್ರವು ಅಧೋಗತಿಗಿಳಿಯಿತು !

ರಾಕ್ಷಸತಂಗಡಿಯ ಕಾಳಗವು ಬರಿಯ ಕರ್ನಾಟಕ ಪ್ರಪಂಚದಲ್ಲಿಯಷ್ಟೆ ಅಲ್ಲ, ಭಾರತೀಯ ಪ್ರಪಂಚದಲ್ಲಿಯೂ ಎಂದೂ ಮರೆಯಲಾಗದಂತಹ ದುಃಖಕರವಾದ ಘಟನೆಯಾಗಿದೆ. ಹನ್ನೊಂದನೆಯ ಶತಮಾನದಿಂದ ಎಡೆಬಿಡದೆ ಒಡ್ಡಿಬರುತ್ತಿರುವ ಪರಕೀಯ ಸಂಸ್ಕೃತಿಯ ಪ್ರಚಂಡವಾದ ಆಘಾತಗಳಿಂದ ಭಾರತೀಯ ಸಂಸ್ಕೃತಿಯು ಪೂರ್ಣವಾಗಿ ಉಚ್ಛೇದ ಹೊಂದುವ ಭಯಂಕರವಾದ ಪ್ರಸಂಗದಲ್ಲಿ,ಪರಕೀಯರ ಆಕ್ರಮಣವನ್ನು ಬಲವಾಗಿ ತಡೆದಿಕ್ಕಿ ಭಾರತೀಯ ಸಂಸ್ಕೃತಿಯನ್ನು ಸಂರಕ್ಷಿಸಿ ಸಂವರ್ಧಿಸುವ ಮಹಾಕಾರ್ಯವನ್ನು ಇನ್ನೂರು ವರ್ಷಗಳವರೆಗೆ ವಿಜಯನಗರ ಸಾಮ್ರಾಜ್ಯವು ಮಾಡಿತು. ಈ ಯುದ್ಧದಿಂದ ಪರಕೀಯರ ಪ್ರತಿರೋಧದ ಈ ಒಡ್ಡು ಒಡೆದು ಹೋಯಿತು. ಇದರಿಂದ ಪರಕೀಯರ ಸಾಮರ್ಥ್ಯವು ಮತ್ತೆ ಉದ್ದೀಪಿತವಾಗಿ, ಪರಕೀಯರ

ಪ್ರಭಾವವು ಬೆಳೆಯುತ್ತ, ಅಲ್ಪಾವಧಿಯಲ್ಲಿ ಅಖಿಲದೇಶವು ಅನ್ಯಾಕ್ರಾಂತ ವಾಯಿತು. ಭಾರತೀಯ ಸಂಸ್ಕೃತಿಯ ಅಭ್ಯಾಸಕನು ಭಾರತೀಯ ಸಂಸ್ಕೃತಿಗೆ ವಿಜಯನಗರವು ಮಾಡಿದ ಅಪಾರವಾದ ಉಪಕಾರವನ್ನೂ ರಾಕ್ಷಸತಂಗಡಿಯಿಂದ ಉಂಟಾದ ಅಪರಿಮಿತವಾದ ಹಾನಿಯನ್ನೂ ಎಂದೂ ಅಲಕ್ಷಿಸಲಾಗದು.

ಈ ರಾಕ್ಷಸತಂಗಡಿಯ ಸಂಗ್ರಾಮದಲ್ಲಿ ವಿಜಯನಗರದ ವಿಜಯ ವಾಗಿದ್ದರೆ, ಕರ್ನಾಟಕದ ಇತಿಹಾಸವೇಕೆ, ಭಾರತೀಯ ಇತಿಹಾಸವೆ ಬೇರೆಯಾಗುತ್ತಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಮೊದಲೆ ದೈನ್ಯ-ದೌರ್ಬಲ್ಯಗಳಿಗೀಡಾದ ಬಹಮನೀರಾಜ್ಯಗಳಲ್ಲಿ ಈ ಆಘಾತವನ್ನು ಸಹಿಸುವ ಶಕ್ತಿಯು ಇಲ್ಲದುದರಿಂದ ಅವುಗಳು ಮತ್ತೆಂದಿಗೂ ತಲೆಯೆತ್ತ ದಂತಾಗಿ ನಾಮಶೇಷವಾಗುತ್ತಿದ್ದುವು. ಆದರಿಂದ ವಿಜಯನಗರ ಸಾಮ್ರಾಜ್ಯದ ವಿಸ್ತಾರವು ಬೆಳೆದು, ಅದು ಗೋದಾವರಿ-ನರ್ಮದೆಗಳ ವರೆಗಿನ ಅಖಿಲ ದಕ್ಷಿಣಾಪಥವನ್ನು ಅನಾಯಾಸವಾಗಿ ಆಕ್ರಮಿಸುತ್ತಿತ್ತು. ಬಳಿಕ ಇದರಿಂದ ಉತ್ತರ ಭಾರತದ ರಾಜಕಾರಣದಲ್ಲಿಯೂ ಮಹತ್ವದ ಸಂದರ್ಭಗಳು ಉಂಟಾಗಿ, . . . . ಆದರೆ. . . . ಆ. . . . ದ. . . . ರೆ. . . . ! ಆದರೆ, ತಿರುಕನ ಈ ಮನೋರಾಜ್ಯದಿಂದ ಪ್ರಯೋಜನವೇನು ?

ರಾಕ್ಷಸತಂಗಡಿಯ ಯುದ್ಧದ ವೃತ್ತಾಂತವನ್ನು ಸೂಕ್ಷ್ಮವಾಗಿ ವಿಚಾರಿಸಿದರೆ,ವಿಜಯನಗರದ ಪರಾಜಯಕ್ಕೆ ಮೂಲವಾದ ಮಾನವೀಯ ಕಾರಣಗಳಿಗೆ ದೈವವೂ ಬಂದು ನೆರವಾಯಿತು ಎಂಬುದು ಮನವರಿಕೆ ಯಾಗುವುದು. ವಿಜಯನಗರದ ವಿರುದ್ಧವಾಗಿ ಮಹಮ್ಮದೀಯ ರಾಷ್ಟ್ರ ಗಳು ಒಂದುಗೂಡಲಿಕ್ಕೆ ಪ್ರೇರಕವಾದ ಕಾರಣಮಾಲಿಕೆಯಲ್ಲಿ ರಾಮ ರಾಯನಲ್ಲಿಯ ದೂರದೃಷ್ಟಿಯ ಅಭಾವವು, ಅಹಂಕಾರ, ಉದ್ಧತತನ, ವಿಜಯನಗರದವರು ಶತ್ರುರಾಜ್ಯಗಳಲ್ಲಿ ಮಾಡಿದ ಅತಿಕ್ರಮಗಳು ಇವು ಗಳು, ಮುಖ್ಯವಾಗಿವೆಯೆಂದು ಹೇಳುವರು.

ದೂರದ ಈ ಕಾರಣಪರಂಪರೆಯನ್ನು ಬಿಟ್ಟು ಪ್ರತ್ಯಕ್ಷ ರಣಾಂಗ ಣದ ಮೇಲಿನ ರಾಮರಾಯನ ವರ್ತನೆಯನ್ನು ನೋಡಿದರೆ, ರಾಮ

ರಾಯನಿಂದ ಕೆಲವು ಅಕ್ಷಮ್ಯವಾದ ಪ್ರಮಾದಗಳು ಘಟಿಸಿ, ಈ ಪರಾಭವವು ಭೀಷಣತಮ ಸ್ವರೂಪವನ್ನು ಹೊಂದಿತು ಎಂದು ಹೇಳಬೇಕಾಗುತ್ತದೆ. ವಯೋವೃದ್ಧನಾದರೂ ಪ್ರಾಯದವನ ಹುಮ್ಮಸದಿಂದ ರಾಮರಾಯನು ಪ್ರತ್ಯಕ್ಷವಾಗಿ ಸಂಗ್ರಾಮದ ನೇತೃತ್ವವನ್ನು ತಾನೇ ವಹಿಸಿದುದಕ್ಕಾಗಿ ಆತನನ್ನು ಎಷ್ಟು ಹೊಗಳಬೇಕೆಂದೆನಿಸಿದರೂ ಆತನು ಮುಂದಿನ ದೃಷ್ಟಿಯನ್ನು ಇಟ್ಟುಕೊಂಡು ಹೀಗೆ ಮಾಡದೆ, ಈ ಪ್ರಸಂಗದಲ್ಲಿ ತನ್ನ ಅನುಭವದ ಲಾಭವನ್ನೂ ಸೂತ್ರಧಾರಿತ್ವದ ಸ್ಫೂರ್ತಿಯನ್ನೂ ಇತರ ನಾಯಕರಿಗೆ ಕೊಡುತ್ತ ಹಿಂದುಳಿದಿದ್ದರೆ ನಿಜವಾಗಿಯೂ ವಿಜಯನಗರದ ಕಲ್ಯಾಣವು ಆಗಬಹುದಾಗಿತ್ತು.

ತನ್ನ ದಂಡಾಳುಗಳಲ್ಲಿ ಬೀರವನ್ನು ಉಕ್ಕೇರಿಸುವ ಸಾಮರ್ಥ್ಯವೂ ಹಗೆಗಳ ಎದೆಯಲ್ಲಿ ನಡುಕವನ್ನು ತುಂಬುವ ಶಕ್ತಿಯೂ ರಾಯರಾಯನ ಒಂದು ಹೆಸರಿನಲ್ಲಿ ಇದ್ದಿತು. ಇದರ ಉಪಯೋಗವು ಘೋರವಾದ ಈ ಸಮಯದಲ್ಲಿ ಆಗಲಿಲ್ಲ! ರಾಮರಾಯನು ಶತ್ರುಗಳ ಕೈಗೆ ಸಿಕ್ಕುದನ್ನು ಕೇಳಿದ ಕೂಡಲೆ ಅದರ ಆಘಾತವು ಸ್ವಾಭಾವಿಕವಾಗಿಯೆ ವಿಜಯನಗರದ ಸೇನಾಬಲದ ಮೇಲೆ ಬರಸಿಡಿಲು ಎರಗಿದಂತಾಯಿತು. ಅದು ಕ್ಷಣಾರ್ಧದಲ್ಲಿ ಸಿಡಿಸಿಡಿದು ಚೆಲ್ಲಾಪಿಲ್ಲಿಯಾಯಿತು.

ವಿಜಯನಗರದ ಪಕ್ಷವನ್ನು ವಹಿಸಿ, ಸ್ವಾಮಿನಿಷ್ಠೆಯನ್ನು ನಟಿಸಿ, ಆಯಕಟ್ಟಿನ ಸಮಯದಲ್ಲಿ ಪರಪಕ್ಷವನ್ನು ಕೂಡಿದ ಮಹಮ್ಮದೀಯ ಸೇನಾಪತಿಗಳ ತಲೆಯ ಮೇಲೆ ಈ ಪರಾಭವಪಾಪದ ಗಂಟಿನ ಬಹುಭಾಗವನ್ನು ಹೇರುವುದು ಯೋಗ್ಯವಾಗಿದೆ. ಈ ಮೇರೆಗೆ ರಾಮರಾಯನಲ್ಲಿಯ ಕೆಲವು ಸ್ವಭಾವ ದೋಷಗಳೂ ರಾಜನೀತಿಯ ವೈಗುಣ್ಯವೂ ಬುದ್ಧಿಪೂರ್ವಕವಾದ ಪ್ರಮಾದಗಳೂ ದೈವವೂ ಎಲ್ಲವೂ ಒಂದುಗೂಡಿ ವಿಜಯನಗರದ ಪರಾಭವದ ಮಾರ್ಗವನ್ನು ಸುಲಭಮಾಡಿದುವು. ಒಟ್ಟಿನ ಮೇಲೆ ರಾಮರಾಯನಲ್ಲಿ ಧೋರಣೆಯೂ ಜಾಗರೂಕತೆಯೂ ಸಾಕಷ್ಟು ಇರಲಿಲ್ಲವೆಂದು ಹೇಳಬೇಕಾಗುತ್ತದೆ. ಕ್ಷಣಹೊತ್ತು ರಾಮರಾಯನ ಸ್ಥಳದಲ್ಲಿ ಕೃಷ್ಣದೇವರಾಯನನ್ನು ಇರಿಸಿ ನೋಡಿದರೆ, ರಾಮರಾಯನ ವರ್ತನೆಯಲ್ಲಿಯ ಈ ದೋಷಗಳು ತಟ್ಟನೆ ಪ್ರಕಟವಾಗುವುವು.

ರಾಮರಾಯನಲ್ಲಿ ಅದೆಷ್ಟು ದೋಷಗಳಿದ್ದರೂ ಕರ್ನಾಟಕದ, ಕಿಂಬಹುನಾ ಭಾರತದ ನಾಮಾಂಕಿತ ಮಹಾಪುರುಷರಲ್ಲಿ ಗಣನೆಯಾಗುವಷ್ಟು ಶೌರ್ಯ, ಧೈರ್ಯ, ಪರಾಕ್ರಮ, ಉತ್ಸಾಹ, ಕರ್ತೃತ್ವ, ನಿರ್ಧಾರ ಮೊದಲಾದ ಉಜ್ವಲವಾದ ಸದ್ಗುಣಗಳು ವಿಶೇಷ ಪ್ರಮಾಣದಲ್ಲಿ ಆತನಲ್ಲಿ ನೆಲೆಸಿದ್ದುವು ಎಂಬುದು ನಿಃಸಂದೇಹವಾಗಿದೆ. ಆದರೆ ದೈವದುರ್ವಿಲಾಸದಿಂದ ಆತನ ಈ ಉನ್ನತಗುಣಗಳ ಲಾಭವು ಸಾಮ್ರಾಜ್ಯಕ್ಕೆ ಸಾಕಷ್ಟು ದೊರೆಯಲಿಲ್ಲವೆಂಬುದು ವಿಷಾದದ ಸಂಗತಿಯು.

ರಾಮರಾಯನ ಉಜ್ವಲಕೀರ್ತಿಗೆ ಆತನ ಇನ್ನೊಂದು ಕೃತಿಯಿಂದ ಕಲಂಕವು ತಗಲಿದೆ. ವಿಜಯನಗರದ ಸಿಂಹಾಸನಕ್ಕೆ ನ್ಯಾಯ್ಯವಾಗಿ ಅಧಿಕಾರಿಯಾದ ಸದಾಶಿವರಾಯನನ್ನು ಕುರಿತು ಆತನು ಆಚರಿಸಿದ ನೀತಿಯು ಸಮರ್ಥನೀಯವಾಗಿಲ್ಲ. ಆತನು ಸದಾಶಿವರಾಯನನ್ನು ಚಿರಕಾಲ ಪ್ರತಿಬಂಧದಲ್ಲಿ ಇರಿಸಿ, ಆತನ, ಆತನ ಜ್ಞಾತಿಗಳ, ನಾಯಕರ ಮತ್ತು ಅನೇಕ ಪ್ರಜಾಜನರ ಮನಸುಗಳನ್ನು ನೋಯಿಸಿದನು. ರಾಮರಾಯನು ಸದಾಶಿವರಾಯನೊಡನೆ ಹೆಚ್ಚು ಉದಾರವಾದ ಭಾವನೆಯಿಂದ ನಡೆದುಕೊಂಡಿದ್ದರೆ, ಆತನಿಂದ ಸಾಮ್ರಾಜ್ಯಕ್ಕೆ ಹೆಚ್ಚು ಹಿತವು ಆಗಬಹುದಾಗಿತ್ತು.

ರಾಮರಾಯನಿಗೆ ಕೃಷ್ಣದೇವರಾಯನ ಮಗಳಾದ ತಿರುಮಲಾಂಬೆಯನ್ನು ಕೂಡಿಸಿ ನಾಲ್ವರು ಹೆಂಡಂದಿರೂ ಐವರು ಗಂಡುಮಕ್ಕಳೂ ಇದ್ದರು.

ಈ ತುಳು ಮನೆತನವು ಸುಮಾರು ೭೦ ವರ್ಷ ರಾಜ್ಯವಾಳಿತು. ಈ ವಂಶದಲ್ಲಿ ನರಸನಾಯಕನನ್ನು ಹಿಡಿದು ಒಟ್ಟು ಐವರು ಅರಸರಾದರು. ಈ ಮನೆತನದ ಆಳಿಕೆಯು ಸಂಗಮವಂಶದ ಆಳಿಕೆಯಂತೆ ದೀರ್ಘವಾಗದೆ ಅಲ್ಪಕಾಲಿಕವಾಯಿತು. ಕೃಷ್ಣದೇವರಾಯನಂತಹ ಒಂದೇ ಮಹಾರಾಜರತ್ನವನ್ನು ಜಗತ್ತಿಗೆ ನೀಡಿದ್ದರೂ ಆತನ ಅಲೌಕಿಕವಾದ ಕಾಂತಿಯಿಂದ ಈ ವಂಶದ ಕೀರ್ತಿಯು ಚಿರಕಾಲ ಪ್ರಕಾಶಿತವಾಗಿದೆ. ಈ ವಂಶವು ರಾಜ್ಯಾಧಿಕಾರವನ್ನು ಕಿತ್ತುಕೊಳ್ಳುವಾಗ ಸಾಮ್ರಾಜ್ಯಕ್ಕೆ ಆದರ

ಆಗತ್ಯವು ಅಷ್ಟು ಇದ್ದಿತು ಎಂದು ಹೇಳಲಿಕ್ಕೆ ಆಗದಿದ್ದರೂ ಇದರಿಂದ, ವಿಶೇಷವಾಗಿ ಕೃಷ್ಣದೇವರಾಯನ ಆಳಿಕೆಯ ರೂಪದಿಂದ ಸಾಮ್ರಾಜ್ಯಕ್ಕೆ ನಿಶ್ಚಿತವಾಗಿ ಉಪಕಾರವಾಯಿತು ಎನ್ನಲಿಕ್ಕೆ ಅಭ್ಯಂತರವಿಲ್ಲ.

ಈ ಮನೆತನವು ರಾಜಕೀಯ, ಸಾಮಾಜಿಕ, ಧಾರ್ಮಿಕ ಮುಂತಾದ ಅನೇಕ ಮಾರ್ಗಗಳಲ್ಲಿ ಸಾಮ್ರಾಜ್ಯದ ಪೂರ್ವದ ಮರ್ಯಾದೆ-ಪರಂಪರೆಗಳನ್ನು ಯೋಗ್ಯವಾದ ಉಪಾಯಗಳಿಂದ ರಕ್ಷಿಸಿ ಅಭಿವೃದ್ಧಿಗೊಳಿಸಿತು. ರಾಜಧಾನಿಯು ಮತ್ತು ಸಾಮ್ರಾಜ್ಯದ ವೈಭವವು ಈ ಆಳಿಕೆಯಲ್ಲಿ ಪರಮಾವಧಿಗೆ ತಲುಪಿತು. ಈ ತುಳುವಂಶದ ಪರಿಸಮಾಪ್ತಿಯೊಂದಿಗೆ ವಿಜಯನಗರ ಸಾಮ್ರಾಜ್ಯದ ಅಭ್ಯುದಯದ ಜೀವನವೂ ಪರಿಸಮಾಪ್ತಿಗೊಂಡಿತು.

———



ಕಮಲಭವನ

ಹಂಪೆಯ ಅಂತಃಪುರಪ್ರಾಕಾರದಲ್ಲಿಯ ಒಂದು ಅವಶೇಷ

**"A fine example of Indo-Saracenic architecture at its best"**

# ಅರವೀಡು ಮನೆತನದ ಆಳಿಕೆ

# (೧೫೭೦-೧೬೮೧)

## ಇಪ್ಪತ್ತನೆಯ ವಿಲಾಸ

## ತಿರುಮಲರಾಯ (೧೫೭೦-೭೮)

ವಿಜಯನಗರ ಸಾಮ್ರಾಜ್ಯದ ಚರಿತ್ರೆಯನ್ನು ಅವಲೋಕಿಸುತ್ತ ಹೊರಟಿರಲು, ಈಗ ಆ ಸಾಮ್ರಾಜ್ಯದ ಜೀವಮಾನದ ಸುಮಾರು ೨೩೫ ವರ್ಷಗಳು ಕಳೆದು ಹೋದುವು. ಈ ಸಾಮ್ರಾಜ್ಯಪ್ರಪಂಚದ ರಚನೆಯನ್ನು ಬಗೆಬಗೆಯಿಂದ ರೂಪುಗೊಳಿಸಲು ನೆರವಾದ ಅನೇಕ ಚಿಕ್ಕ ದೊಡ್ಡ ವ್ಯಕ್ತಿಗಳ ಹಾಗೂ ಅವರ ಕಾರ್ಯಕಲಾಪಗಳ ಪರಿಚಯವು ನಮಗಾಯಿತು. ಈ ಸಾಮ್ರಾಜ್ಯದ ಸೂತ್ರಧಾರಿತ್ವವನ್ನು ಬೇರೆ ಬೇರೆ ಕಾಲದಲ್ಲಿ ಭಿನ್ನಭಿನ್ನವಾದ ಮೂರು ಅರಸುಮನೆತನಗಳು ಉದಯಿಸಿ ವಹಿಸಿದುದನ್ನೂ ನಾವು ನಿರೀಕ್ಷಿಸಿದೆವು. ಹೀಗೆ ರಾಜ್ಯಚಾಲಕರು ಭಿನ್ನ ಭಿನ್ನರಾಗಿ, ಸಾಮ್ರಾಜ್ಯಸೂತ್ರಗಳು ಬೇರೆಬೇರೆಯವರ ಕೈಗಳಲ್ಲಿ ಆಡಿದರೂ ವಿಜಯನಗರ ಸಾಮ್ರಾಜ್ಯವೆಂಬುದು ಒಂದು ಸೂತ್ರವು, ಒಂದು ಮೂರ್ತಿಯು,ಒಂದು ಜೀವನವು ಎಂಬ ಸಂಕೇತಕ್ಕೆ ಬಾಧೆ ಬರದೆ ವಿಜಯನಗರಸಾಮ್ರಾಜ್ಯಪರಂಪರೆಯು ಧಾರಾವಾಹಿಯಾಗಿ ಮುಂದುವರಿಯಿತು.

ರಾಜಪರಿವರ್ತನೆಯ ಈ ಸನ್ನಿವೇಶನಗಳಲ್ಲಿ ಹಲಕೆಲವು ವಿಷಮ ಘಟನೆಗಳು, ಹಲಕೆಲವು ಅನಾಹೂತಗಳು ಒದವಿದುವು ಎಂಬುದು ನಿಜವಿದ್ದರೂ ಅವುಗಳ ಪರಿಣಾಮದೃಷ್ಟಿಯಿಂದ ಸಮಗ್ರವಾಗಿ ವಿಚಾರಿಸಿದರೆ ವಿಜಯನಗರ ಸಾಮ್ರಾಜ್ಯದ ಧ್ಯೇಯ, ನೀತಿ, ಶಾಸನಕ್ರಮ ಇವುಗಳಲ್ಲಿ ಲಕ್ಷಣೀಯವಾದ ವ್ಯತ್ಯಾಸಗಳು ಉಂಟಾಗಲಿಲ್ಲ. **ಸಾಮ್ರಾಜ್ಯ ಸ್ಥಾಪನೆಯಾದ ಬಳಿಕ ಸ್ವರಾಜ್ಯವನ್ನು ಪರಿಪಾಲಿಸಿ ಸ್ವಧರ್ಮ ಮತ್ತು ಸ್ವಸಂಸ್ಕೃತಿ ಇವುಗಳನ್ನು ಸಂವರ್ಧಿಸಬೇಕೆಂಬ**

**ಸಾಮ್ರಾಜ್ಯದ ಮೂಲೋದ್ದೇಶವು** ಈ ಮೂರೂ ಮನೆತನದ ರಾಜಪುರುಷರಿಗೆ ಪ್ರೇರಕವಾಗಿದ್ದಿತು.

ಈ ಉದ್ದೇಶಗಳನ್ನು ಸಂತತವಾಗಿ ಈಡೇರಿಸಲು ವಿಜಯನಗರದ ಅರಸರು ಅತ್ಯಂತ ಸಾಹಸದಿಂದ ಹೋರಾಡಿದರು. ವಿಜಯನಗರದ ಅಭಿಮಾನವೂ ವಿಜಯನಗರದ ಅಭ್ಯುದಯವೂ ವಿಜಯನಗರದ ಕೀರ್ತಿಗೌರವವೂ ಈ ಮೂರು ಮನೆತನಗಳಿಗೂ ಅಷ್ಟೇ ಜೀವಾಳದ ವಿಷಯಗಳಾಗಿದ್ದುವು. ಆದುದರಿಂದ ವಿಜಯನಗರ ಸಾಮ್ರಾಜ್ಯದ ಆಳಿಕೆಗಳನ್ನು ಅಭ್ಯಾಸ ಮಾಡುವವನಿಗೆ ಈ ಸಾಮ್ರಾಜ್ಯವನ್ನು ಆಳಿದ ಅರಸರವು ಮೂರು ಮನೆತನಗಳು ಆಗಿದ್ದರೂ ಅವರು ಒಂದೇ ಮನೆತನದ ಅರಸರಂತೆ ಕ್ಷಣ ಹೊತ್ತು ಭಾಸವಾಗುತ್ತದೆ. ವಿಜಯನಗರದ ಚರಿತ್ರೆಯಲ್ಲಿ ಸಾಮ್ರಾಜ್ಯವಾಳಿದ ವ್ಯಕ್ತಿಗಳ ಚರಿತ್ರೆಗಿಂತ ಆ ಸಾಮ್ರಾಜ್ಯದ ವ್ಯಕ್ತಿಮತ್ತ್ವದ ಚರಿತ್ರೆಯು ಹೆಚ್ಚು ಪ್ರಧಾನವೂ ಮನನೀಯವೂ ನೂತನವೂ ಆದ ಸನ್ನಿವೇಶವಾಗಿದೆ.

ರಾಕ್ಷಸತಂಗಡಿಯ ಮಹಾಯುದ್ಧದೊಂದಿಗೆ ವಿಜಯನಗರ ಸಾಮ್ರಾಜ್ಯದ ಪರಿಸಮಾಪ್ತಿಯಾಗಿ ಅದರ ಮುಂದಿನ ಜಿವನಚರಿತ್ರೆಯು ಖಂಡಿತವಾಯಿತು. ಎಂದು ಸಾಮಾನ್ಯವಾದ ತಿಳವಳಿಕೆಯಿದೆ. ಇದು ಸರಿಯಾಗಿಲ್ಲ. ರಾಕ್ಷಸತಂಗಡಿಯನಂತರ ವಿಜಯನಗರಸಾಮ್ರಾಜ್ಯವು ಅನಾಮಧೇಯವಾಗಲಿ, ನಾಮಶೇಷವಾಗಲಿ ಆಗಲಿಲ್ಲ. ಅದು ಮುಂದೆ ಬಾಳಿತು. ಸಾಮ್ರಾಜ್ಯವೆಂದು ಬಾಳಿತು. ವಿಜಯನಗರದ ಪರಂಪರೆ, ಅಭಿಮಾನ, ಗೌರವಗಳನ್ನು ಕಾಯಲು ಹೆಣಗಿತು. ಹೆಣಗುತ್ತ ಸುಮಾರು ಒಂದು ನೂರು ವರ್ಷಗಳವರೆಗೆ ಜೀವಿಸಿತು ಎಂಬ ಮಾತನ್ನು ಅನೇಕರು ಅರಿಯರು.

ರಾಕ್ಷಸತಂಗಡಿಯ ವಜ್ರಪ್ರಹಾರದಿಂದ ವಿಜಯನಗರಮಹಾಗಿರಿಯು ಆಮೂಲಾಗ್ರವಾಗಿ ಅದುರಿತು. ಅದುರಿ ಕದಲಿತು, ಕದಲಿ ಕರಗಿತು. ಕರಗಿ ಕೆಲಕಾಲ ಗುಡ್ಡವಾಗಿ ತಲೆಯೆತ್ತಿ ನಿಂತುಕೊಂಡು ಬಾಳಿತು. ಕೊನೆಗೆ ಕಾಲಪುರುಷನ ಉದರದಲ್ಲಿ ಲೀನವಾಯಿತು.

ರಾಕ್ಷಸತಂಗಡಿಯಿಂದ ವಿಜಯನಗರದ ಇಳಿಗಾಲವೂ ಇಳಿಗಾಲ ದೊಂದಿಗೆ ದಾರುಣವಾದ ಅಳಿಗಾಲವೂ ಆರಂಭವಾಯಿತು ಎಂಬುದು ನಿಜವು. ಆದರೆ ಈ ಇಳಿಗಾಲದಲ್ಲಿಯೂ ಅದು ಆಗಾಗ ನೀಡಿದ ಹೊಳೆವು, ಈ ಅಳಿಗಾಲದಲ್ಲಿಯೂ ಕೆಲವೆಡೆ ಬೀರಿದ ಬೆಳಕು ಅವಲೋಕನೀಯ ವಾಗಿದೆ.

ತುಳು ಮನೆತನದ ಕೊನೆಯೊಳಿಕೆಯಲ್ಲಿ ಅಗ್ರಸ್ಥಾನದಲ್ಲಿ ನಿಂತು ಸಾಮ್ರಾಜ್ಯಧುರೆಯನ್ನು ವಹಿಸಿದ ರಾಮರಾಯನ ಮನೆತನವೆ ವಿಜಯ ನಗರದ ಈ ಮುಂದಿನ ಚರಿತ್ರೆಗೆ ಕಥಾನಾಯಕವಾಗಿದೆ. ಈ ಮನೆತನದ ಚರಿತ್ರೆಯು ವಿಜಯನಗರದ ಅಸ್ತಮಾನದ ವೃತ್ತಾಂತವಾಗಿದೆ.

ಈ ಮನೆತನವು ಅರವೀಡು ಮನೆತನವೆಂದು ವಿಶ್ರುತವಾಗಿದೆ. ಈ ಮನೆತನದವರು ತಾವು ಚಂದ್ರವಂಶೀಯರೆಂದು ಹೇಳಿಕೊಂಡಿರು ವರು. ತಾತ ಪಿನ್ನಮನು ಈ ವಂಶದ ಐತಿಹಾಸಿಕ ಮೂಲಪುರುಷನು. ಈತನ ಮಗನಾದ ಸೋಮದೇವನು ಶೂರನಾಗಿದ್ದನು. ಈತನು ವಿಜಯನಗರವು ಬಹಮನೀರಾಜ್ಯದೊಡನೆ ಹೂಡಿದ ಕದನಗಳಲ್ಲಿ ಭಾಗಿ ಯಾಗಿ ಯಾತಗಿರಿ, ರಾಯಚೂರು, ಕರ್ನೂಲು ಮುಂತಾದ ಏಳು ಕೋಟೆಗಳನ್ನು ವಶಪಡಿಸಿಕೊಂಡನು ಎಂದು ತಿಳಿಯುತ್ತದೆ. ಈತನು ಸುಮಾರು ಇಮ್ಮಡಿ ಹರಿಹರನಿಗೆ ಸಮಕಾಲೀನನಾಗುವನು. ಈತನ ಮೊಮ್ಮಗನಾದ ಅರವೀಟಿ ಬುಕ್ಕನು ಹಿರಿಯ ಸಾಳುವ ನರಸಿಂಹನ ಬಲಿಷ್ಠ ಸೇನಾಪತಿಯಾಗಿದ್ದು, ಆತನ ರಾಜ್ಯಕಾರ್ಯಗಳಲ್ಲಿ ಆತನಿಗೆ ಬಹಳ ನೆರವಾದನು. ಅರವೀಟಿ ಬುಕ್ಕನ ಮಗನು ರಾಮರಾಜನು. ಈತನು ಕರ್ನೂಲ ಪ್ರಾಂತವನ್ನು ಆಳುತ್ತಿದ್ದನು. ಈತನ ಮಗನು ಶ್ರೀರಂಗನು. ಶ್ರೀರಂಗನ ಮಕ್ಕಳಲ್ಲಿ ಅಳಿಯ ರಾಮರಾಯ, ತಿರುಮಲ, ವೆಂಕಟಾದ್ರಿ, ಈ ಮೂವರು ಪ್ರಖ್ಯಾತರಾದರು.

ಹಿಂದಿನ ಸದಾಶಿವರಾಯನ ಆಳಿಕೆಯಲ್ಲಿ ರಾಮರಾಯನ ಚರಿ ತೆಯು ವಿಶದವಾಗಿ ವಿವರಿಸಲಾಗಿದೆ. ರಾಮರಾಯನು ವಿಜಯನಗರ ಸಾಮ್ರಾಜ್ಯದ ಸರ್ವಾಧಿಕಾರಿಯಾಗಿ ರಾಜ್ಯವಾಳುತ್ತಿರುವಾಗ, ತಿರು

ಮಲನು ಆತನ ಪ್ರಧಾನಮಂತ್ರಿಯಾಗಿ ರಾಜ್ಯಸೂತ್ರಗಳನ್ನು ನಡೆಸುತ್ತಲಿದ್ದನು. ರಾಕ್ಷಸತಂಗಡಿಯಲ್ಲಿ ರಾಮರಾಯನ ವಧೆಯಾದ ಬಳಿಕ ಸಾಮ್ರಾಜ್ಯದ ಎಲ್ಲ ಆಡಳಿತವನ್ನು ತಿರುಮಲನು ಪ್ರತ್ಯಕ್ಷವಾಗಿ ತನ್ನ ಕೈಯಲ್ಲಿ ತೆಗೆದುಕೊಂಡನು. ಮುಂದೆ ಸದಾಶಿವರಾಯನ ಕೊಲೆಯಾಗಲು, ತಿರುಮಲನು ರಾಜ್ಯಾಭಿಷೇಕವನ್ನು ಮಾಡಿಸಿಕೊಂಡು ವಿಜಯನಗರಸಾಮ್ರಾಜ್ಯದ ಅಧಿಪತಿಯಾದನು (೧೫೭೦).

ವಿಜಯನಗರಸಾಮ್ರಾಜ್ಯದ ಸಾಕ್ಷಾತ್ ಸಮ್ರಾಜನೆನಿಸುವ ಯಾವ ಭಾಗ್ಯವು ರಾಮರಾಯನಿಗೆ ದೊರೆಯಲಿಲ್ಲವೊ, ಆ ಭಾಗ್ಯವು ತಿರುಮಲನಿಗೆ ದೊರೆತಿತು. ಆದರೆ ಸಾಮ್ರಾಜ್ಯದ ಆ ಹಿಂದಿನ ಗೌರವ-ವೈಭವಗಳನ್ನು ಅನುಭವಿಸುವ ಭಾಗ್ಯವು ಮಾತ್ರ ಈತನಿಗೆ ಪ್ರಾಪ್ತವಾಗಲಿಲ್ಲ. ರಾಕ್ಷಸತಂಗಡಿಯ ಪೆಟ್ಟಿನಿಂದ ಜರ್ಜರಿತವಾದ ಸಾಮ್ರಾಜ್ಯದ ಸೂತ್ರಗಳು ಈತನ ಕೈಯಲ್ಲಿ ಬಂದುವು. ಪ್ರಭುಶಕ್ತಿಯ ಈ ಅಸ್ಥಿರತೆಯ ಮೂಲಕವೂ ಸಿಂಹಾಸನದ ನ್ಯಾಯ್ಯ ಅಧಿಕಾರಿಯಾದ ಸದಾಶಿವರಾಯನನ್ನು ಕುಟಿಲ ಮಾರ್ಗದಿಂದ ದೂರಮಾಡಿ ಈ ಹೊಸ ಅರಸೊತ್ತಿಗೆಯು ಮುಂದೆ ಬಂದುದು ಅನೇಕರಿಗೆ ಸಮ್ಮತವಾಗದೆ ಇದ್ದುದರಿಂದಲೂ ತಿರುಮಲನ ಆಳಿಕೆಯು ಅಶಾಂತಿ-ಅಸಂತೋಷಗಳ ಬೇಗೆಯಲ್ಲಿಯೇ ಆರಂಭವಾಯಿತು. ಹಲವು ನಾಯಕರು, ಅರಸರು, ಅಧಿಕಾರಿಗಳು ಈತನ ಪ್ರಭುತ್ವವನ್ನು ಒಪ್ಪಿಕೊಳ್ಳದೆ ವಿರೋಧವನ್ನು ಹೂಡಿದರು, ಅತ್ತ ಉತ್ತರದಲ್ಲಿ ಬಲಗೊಂಡವರಾದ ಸಾಮ್ರಾಜ್ಯದ ಮುಹಮ್ಮದೀಯ ಶತ್ರುಗಳ ಭಯವಂತೂ ಒಡ್ಡಿಯೆ ನಿಂತಿತ್ತು. ಇಂತು ವಿಷಮವಾದ ಈ ಪರಿಸ್ಥಿತಿಯೊಡನೆ ಹೋರಾಡುವುದರಲ್ಲಿಯೆ ಮುಪ್ಪಿನ ಮುದುಕನಾದ[೧] ತಿರುಮಲರಾಯನ ಆಳಿಕೆಯ ಬಹು ಭಾಗವು ಕಳೆದು ಹೋಯಿತು.

ರಾಯನ ಮೊದಮೊದಲಿನ ಆಳಿಕೆಯು ಮುಹಮ್ಮದೀಯರ ವಿಶೇಷವಾದ ಬಾಧೆಗೆ ಈಡಾಯಿತು. ರಾಕ್ಷಸತಂಗಡಿಯ ತರುವಾಯ ಹಿಂದೆ

---

೧. ಈಗ ಈತನ ವಯಸ್ಸು ತೊಂಬತ್ತು ವರ್ಷ ಆಗಿರಬೇಕು.

ನೋಡಿದಂತೆ ವಿಜಯನಗರದ ವೈರಿಗಳಲ್ಲಿ ಪ್ರಮುಖರಾದ ವಿಜಾಪುರ ಮತ್ತು ಅಹಮದನಗರ ಸುಲ್ತಾನರ ಪರಸ್ಪರ ದ್ವೇಷಾಸೂಯೆಗಳ ಮೂಲಕ ವಿಜಯನಗರರಾಜ್ಯವು ಕೆಲಕಾಲ ಹೆಚ್ಚಿನ ಆಪತ್ತಿಯಿಂದ ಸುರಕ್ಷಿತವಾಗಿ ತಿರುಮಲನು ನಿಶ್ಚಿಂತನಾಗಿದ್ದನು. ಆದರೆ ೧೫೬೯ರಲ್ಲಿ ಆಲೀ ಆದಿಲಶಹನೂ ಮೂರ್ತಜಾ ನಿಜಾಮುಶಹನೂ ಸೇರಿ ಸಂಧಾನವನ್ನು ಆಳವಡಿಸಿಕೊಂಡು, ಉಭಯರಲ್ಲಿ ಪರಸ್ಪರ ತಾಗಲಾಟವು ಬರದಂತೆ ತಮ್ಮ ತಮ್ಮ ರಾಜ್ಯಗಳನ್ನು ಬೆಳೆಸಿಕೊಳ್ಳಬೇಕು, ನಿಜಾಮುಶಹನು ವರ್ಹಾಡದ ರಾಜ್ಯವನ್ನು ಆಕ್ರಮಿಸಬೇಕು ಎಂದು ಒಡಂಬಡಿಕೆ ಮಾಡಿಕೊಂಡುದರಿಂದ ಈಗ ಸಾಮ್ರಾಜ್ಯಕ್ಕೆ ಹೊಸ ಸಂಕಟವು ಉಪಸ್ಥಿತವಾಗಿತ್ತು.

ಈ ಒಪ್ಪಂದದ ಮೇರೆಗೆ ಆಲೀಶಹನು ವಿಜಯನಗರ ಸಾಮ್ರಾಜ್ಯದ ಪಶ್ಚಿಮ ಪ್ರದೇಶಗಳಲ್ಲಿ ಒಳನುಗ್ಗಿ ಭದ್ರವಾದ ಕೋಟೆಗಳನ್ನು ಕಸಿಯುತ್ತ ಮುಂದೆ ಸಾಗಿದ್ದನು. ತೊರಗಲ್ ಕೋಟೆಯು[1] ಏಳು ತಿಂಗಳ ಮುತ್ತಿಗೆಯಿಂದ ಆತನ ವಶವಾಯಿತು. ಬಲಿಷ್ಠವಾದ ಧಾರವಾಡದ ದುರ್ಗವು ಆರು ತಿಂಗಳವರೆಗೆ ಕಾದಾಡಿ ಶರಣಾಗತವಾಯಿತು. ಒಂದು ವರ್ಷ ಮೂರು ತಿಂಗಳವರೆಗೆ ಪ್ರತಿರೋಧನವನ್ನು ಮಾಡಿ ಬಂಕಾಪುರ ಕೋಟೆಯು ಕೊನೆಗೆ ಕೈಯೂರಿತು. ಈ ಕೋಟೆಗಳ ನಾಯಕರು ರಾಯನ ನೆರವನ್ನು ಕೋರಿದರು. ಆದರೆ ಹಾಗೆ ಮಾಡುವುದು ರಾಯನಿಗೆ ಎಷ್ಟು ಸಾಧ್ಯವಾಗಲಿಲ್ಲ. ಬಳಿಕ ವಿಜಾಪುರ ಸೈನ್ಯದ ನೇತೃತ್ವವನ್ನು ವಹಿಸಿದ ಮುಸ್ತಫಖಾನನು ಈ ವಿಜಯಗಳಿಂದ ಹುರಿದುಂಬಿದ ಸೈನಿಕರನ್ನು ಮುಂದೂಡುತ್ತ ರಾಯನ ಹೊಸ ರಾಜಧಾನಿಯಾದ ಪೆನುಗೊಂಡದ ಮೇಲೆ ಏರಿ ಬಂದನು. ಆಗ ರಾಯನ ಸೇನಾನಿಯಾದ ಚೆನ್ನಪ್ಪನಾಯಕನು ಹಗೆಯನ್ನು ಇದಿರಿಸಿ ರಾಜಧಾನಿಯಿಂದ ಹಿಮ್ಮೆಟ್ಟಿಸಿದನು.

---

೧. ತುರ್ಕಲ್ ಅಥವಾ ತೆರಕಾಲ ಎಂದು ಉಕ್ತವಾದ ಕೋಟೆಯು ಇದೇ ಆಗಿರಬೇಕು. A. D. P. 257.

ಇದೇ ಮೇರೆಗೆ ಅತ್ತ ಸಾಮ್ರಾಜ್ಯದ ಈಶಾನ್ಯಭಾಗಗಳಲ್ಲಿಯೂ ಅರಿಗಳ ಉಪಟಳವು ಹೆಚ್ಚಾಗುತ್ತಲಿತ್ತು. ಆ ಪ್ರದೇಶದ ಆಡಳಿತವು ರಾಯನ ಎರಡನೆಯ ಮಗನಾದ ಶ್ರೀರಂಗನಿಗೆ ಒಪ್ಪಿಸಲಾಗಿತ್ತು. ಶ್ರೀರಂಗನು ಭದ್ರವಾದ ಉದಯಗಿರಿ ಕೋಟೆಯಲ್ಲಿ ತಳವೂರಿ ಕೈಬಿಟ್ಟು ಹೋಗಿದ್ದ ಕೊಂಡವೀಡು, ವಿನುಕೊಂಡ ಮೊದಲಾದ ಕೋಟೆಗಳನ್ನು ಮರಳಿ ಗೆದ್ದುಕೊಂಡನು. ಇದರಿಂದ ಆಂಧ್ರನಾಡಿನ ಎಷ್ಟೋ ಭಾಗವು (ನೆಲ್ಲೂರು, ಗುಂಟೂರು ಜಿಲ್ಲೆಗಳು) ಮತ್ತೆ ವಿಜಯನಗರರಾಜ್ಯಕ್ಕೆ ಒಳಪಟ್ಟಿತು.

ಈ ಮೇರೆಗೆ ಅರಿಗಳ ದಾಳಿಗಳನ್ನು ಇದಿರಿಸಬೇಕಾದ ರಾಯನು ಆಡಳಿತಕ್ಕೆ ಸೌಕರ್ಯವೂ ಸುರಕ್ಷಿತತೆಯೂ ಉಂಟಾಗಬೇಕೆಂದು ಯೋಚಿಸಿ, ಸಾಮ್ರಾಜ್ಯದಲ್ಲಿ ಮೂರು ವಿಭಾಗಗಳನ್ನು ಕಲ್ಪಿಸಿ ಅವುಗಳ ಮೇಲೆ ತನ್ನ ಮೂವರು ಮಕ್ಕಳನ್ನು ಮಹಾಮಂಡಲೇಶ್ವರರನ್ನಾಗಿ ನೇಮಿಸಿದನು. ಶ್ರೀರಂಗನು ಆಂಧ್ರಪ್ರಾಂತಕ್ಕೆ ಅಧಿಕಾರಿಯಾಗಿ ಸ್ಥಾಪಿತ ನಾದನು. ಆತನು ಕೆಲಕಾಲ ಉದಯಗಿರಿಯಲ್ಲಿ ನೆಲೆಸಿ, ಬಳಿಕ ಪೆನು ಗೊಂಡವನ್ನು ತನ್ನ ಮುಖ್ಯಸ್ಥಳವಾಗಿ ಮಾಡಿಕೊಂಡು ಆಳಿದನು. ರಾಮದೇವನು ಕರ್ನಾಟಕ ಪ್ರಾಂತಕ್ಕೆ ಅಧಿಪತಿಯಾಗಿ ಶ್ರೀರಂಗ ಪಟ್ಟಣದಿಂದ ಆಳತೊಡಗಿದನು. ಮೂರನೆಯವನಾದ ವೆಂಕಟಪತಿಯು ಚಂದ್ರಗಿರಿಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ತುಂಡೀರ (ಜಿಂಜಿ), ಚೋಳ (ತಂಜಾವೂರು), ಪಾಂಡ್ಯ (ಮದುರೆ) ಮೊದಲಾದ ತಮಿಳು ಪ್ರದೇಶಗಳಿಗೆ ಒಡೆಯನಾದನು.

ಈ ಯೋಜನೆಯಿಂದ ರಾಯನ ಮೇಲಿನ ರಾಜ್ಯಭಾರವು ಹಗು ರಾಗಿ ಅಲ್ಲಲ್ಲಿಯ ಸಾಮ್ರಾಜ್ಯದ ಭಾಗಗಳಲ್ಲಿ ಸುವ್ಯವಸ್ಥೆಯೂ ಸಂಘಟ ನೆಯೂ ನೆಲೆಗೊಳ್ಳಲು ಅನುಕೂಲವಾಯಿತು. ರಾಯನ ಈ ಮೊದಲಾದ ದಕ್ಷತೆಯ ಪ್ರಯತ್ನಗಳಿಂದ ರಾಕ್ಷಸತಂಗಡಿಯ ಆಘಾತದಿಂದ ಖಿಲವಾದ ವಿಜಯನಗರ ಸಾಮ್ರಾಜ್ಯದ ಪ್ರಭುಶಕ್ತಿಯು ಕೆಲವಂಶದಿಂದ ಸಂಘಟಿತ ವಾಗಿ ಬಲಪಟ್ಟಿತು. ಉತ್ತರಕ್ಕಿಂತಲೂ ದಕ್ಷಿಣದಲ್ಲಿ ಸಾಮ್ರಾಜ್ಯದ ಅಧಿ

ಕಾರವು ಹೆಚ್ಚು ದೃಢವಾಗಿ ಮೂಸ್ಕೃತೆಯನ್ನು ಪಡೆಯಿತು. ಬಲಿಷ್ಠ ರಾದ ಮದುರೆಯ ನಾಯಕರೂ ತಂಜಾವೂರು, ಜಿಂಜಿ ಮೊದಲಾದುವು ಗಳ ನಾಯಕರೂ ಸಾಮಂತರೂ ಸಾಮ್ರಾಜ್ಯನಿಷ್ಠರಾಗಿದ್ದು ಸಾಮ್ರಾಜ್ಯದ ಗೌರವವನ್ನು ಉಳುಹಿದರು.

ಈ ಮುಂದಿನ ವಿಜಯನಗರದ ಚರಿತ್ರೆಯಲ್ಲಿಯೂ ದಕ್ಷಿಣಭಾರತದ ಚರಿತ್ರೆಯಲ್ಲಿಯೂ ಪ್ರಧಾನಪಾತ್ರವನ್ನು ವಹಿಸಲಿರುವ ದಕ್ಷಿಣಭಾರತದ ಸಾಮಂತರೂ ಮಂಡಲಾಧಿಕಾರಿಗಳೂ ಆದ ಈ ಮೊದಲಾದ ನಾಯಕರ ಮತ್ತು ಅರಸುಮನೆತನಗಳ ವೃತ್ತಾಂತವನ್ನು ಇಲ್ಲಿ ಸಂಕ್ಷೇಪವಾಗಿ ಕಾಣಿಸುವುದು ಆವಶ್ಯಕವಾಗಿವೆ. ಈ ಮನೆತನಗಳಲ್ಲಿ ಕೆಲವುಗಳ ಪೂರ್ವ ವೃತ್ತವು ಹಿಂದೆ ಕೃಷ್ಣದೇವರಾಯ, ಅಚ್ಯುತರಾಯರ ಆಳಿಕೆಗಳಲ್ಲಿ ಆರಂಭ ವಾಗುವುದು. ಅಂದು ಉದಯವಾದ ಇವುಗಳು ಈಗಾಗಲೆ ಬಲ ಗೊಂಡು ಬೆಳೆಯುತ್ತಿರುವುವು. ಆದುದರಿಂದ ಸಿಂಹಾವಲೋಕನಪೂರ್ವಕ ವಾಗಿ ಇವುಗಳ ಚರಿತ್ರೆಯನ್ನು ಸಮಾಲೋಚಿಸುವ.

## ಮದುರೆಯ ನಾಯಕರು

ಹಿರಿಯ ಬುಕ್ಕರಾಯನ ಆಳಿಕೆಯಲ್ಲಿ ಕುಮಾರ ಕಂಪಣ್ಣನು ಮಹಮ್ಮದೀಯರ ಕೈಯಿಂದ ಮದುರೆಯ ರಾಜ್ಯವನ್ನು ಸೆಳೆದುಕೊಂಡ ಬಳಿಕ, ಮದುರೆಯ ಪಾಂಡ್ಯ ಅರಸರು ವಿಜಯನಗರಕ್ಕೆ ಅಂಕಿತರಾಗಿ ಬಹುಕಾಲ ಬಾಳಿದರು. ಮುಂದೆ ಅಚ್ಯುತರಾಯನ ಆಳಿಕೆಯಲ್ಲಿ ಚಂದ್ರಶೇಖರನೆಂಬ ಪಾಂಡ್ಯ ಅರಸನು ತಂಜಾವೂರಿನ ವೀರಶೇಖರ ಚೋಳ ರಾಯನಿಂದ ಪರಾಜಿತನಾಗಿ ರಾಜ್ಯಭ್ರಷ್ಟನಾದನು. ಆಗ ವಿಜಯನಗರದ ಶೂರ ಸೇನಾನಿಯಾದ ವಿಶ್ವನಾಥನಾಯಕನು ದಂಡಯಾತ್ರೆಯನ್ನು ಕೈಕೊಂಡು ಚಂದ್ರಶೇಖರನಿಗೆ ಮರಳಿ ಆತನ ರಾಜ್ಯವನ್ನು ದೊರಕಿಸಿ ಕೊಟ್ಟನು.

ಚಂದ್ರಶೇಖರನಿಗೆ ಸಂತಾನವಿರಲಿಲ್ಲ. ಆದುದರಿಂದ ಆತನು ಸ್ವಸಂತೋಷದಿಂದ ತನ್ನ ರಾಜ್ಯವನ್ನು ವಿಶ್ವನಾಥನಿಗೆ ಬಿಡಲೊಪ್ಪಿದನು. ಆ ಮೇರೆಗೆ ಅಚ್ಯುತರಾಯನ ಆಜ್ಞೆಯನ್ನು ಪಡೆದು, ವಿಶ್ವನಾಥನು

ಮದುರೆಯ ರಾಜ್ಯಕ್ಕೆ ವಂಶಪಾರಂಪರ್ಯವಾಗಿ ಅಧಿಪತಿಯಾದನು (ಸು. ೧೫೪೦). ಅಂದಿನಿಂದ ಮದುರೆಯ ನಾಯಕವಂಶದ ಪರಂಪರೆಯು ಆರಂಭವಾಯಿತು. ಈ ಮದುರೆಯ ಅರಸರು ವಿಜಯನಗರಕ್ಕೆ ಅಂಕಿತರಾಗಿ ಪ್ರತಿವರ್ಷ ೩೦ ರಿಂದ ೪೫ ಲಕ್ಷ ರೂಪಾಯಿಗಳವರೆಗೆ ಕಪ್ಪವನ್ನು ಕೊಡಬೇಕಾಗುತ್ತಿದ್ದಿತು. ಆದರೂ ಅಂತರ್ಗತ ಆಡಳಿತದಲ್ಲಿ ಅವರಿಗೆ ಪೂರ್ಣ ಸ್ವಾತಂತ್ರ್ಯವಿದ್ದಿತು.

ಇಂತು ಮದುರೆಯ ಒಡೆಯನಾದ ವಿಶ್ವನಾಥನು ತನ್ನರಾಜ್ಯದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು. ಆತನು ಮದುರೆಯ ಕೋಟೆಯನ್ನು ಭದ್ರಪಡಿಸಿ, ಅದರಲ್ಲಿ ಎಪ್ಪತ್ತೆರಡು ಕೊತ್ತಳಗಳನ್ನು ಸ್ಥಾಪಿಸಿದನು. ತನ್ನ ರಾಜ್ಯವನ್ನು ಎಪ್ಪತ್ತೆರಡು ಪಾಳ್ಯಗಳಲ್ಲಿ ವಿಭಾಗಿಸಿ ಅವುಗಳ ಮೇಲೆ ಕಾರ್ಯದಕ್ಷರಾದ ಅಧಿಕಾರಿಗಳನ್ನು ನೇಮಿಸಿದನು. ಈ ಅಧಿಕಾರಿಗಳಿಗೆ ಪಾಳ್ಯಗಾರರು ಎಂದು ಹೆಸರು ಬಂದಿತು. ಈ ಪಾಳ್ಯಗಾರರು ದಂಡನ್ನು ಆಳವಡಿಸುತ್ತ ದಕ್ಷತೆಯಿಂದ ರಾಜ್ಯಸೇವೆಗಾಗಿ ಸಿದ್ಧರಾಗಿರಬೇಕಾಗಿದ್ದಿತು. ಯುದ್ಧಪ್ರಸಂಗಗಳಲ್ಲಿ ಒಬ್ಬೊಬ್ಬ ಪಾಳ್ಯಗಾರನ ಮೇಲೆ ಮದುರೆಯ ಒಂದೊಂದು ಕೊತ್ತಳವನ್ನು ಸಂರಕ್ಷಿಸುವ ಹೊಣೆಯು ಇರುತ್ತಿತ್ತು.

ವಿಶ್ವನಾಥನಾಯಕನೂ ಬಳಿಕ ಆತನ ಮಗನಾದ ಕೃಷ್ಣಪ್ಪನಾಯಕನೂ ವಿಜಯನಗರದೊಡನೆ ಅತ್ಯಂತ ಸ್ವಾಮಿನಿಷ್ಠೆಯಿಂದ ವರ್ತಿಸಿ ದಕ್ಷಿಣದಲ್ಲಿ ಆಗಾಗ ಉಂಟಾದ ಅನೇಕ ಸಂಕಟಗಳನ್ನು ನಂದಿಸುವುದರಲ್ಲಿ ಸಾಮ್ರಾಜ್ಯಕ್ಕೆ ಬಹು ಸಹಾಯವಾದರು. ಈ ಆಳಿಕೆಯಲ್ಲಿ ಕೃಷ್ಣಪ್ಪನ ಮಗನಾದ ವೀರಪ್ಪನಾಯಕನು ಮದುರೆಯನ್ನು ಆಳುತ್ತಿದ್ದನು.

## ತಂಜಾವೂರ ನಾಯಕರು

ಪಾಂಡ್ಯ ರಾಜ್ಯದಂತೆ ತಂಜಾವೂರ ಚೋಳರಾಜ್ಯವೂ ಕುಮಾರ ಕಂಪಣ್ಣನ ಕಾಲದಿಂದ ವಿಜಯನಗರಸಾಮ್ರಾಜ್ಯದ ಭಾಗವಾಗಿತ್ತು. ಅಚ್ಯುತರಾಯನ ಆಳಿಕೆಯಲ್ಲಿ ವಿಶ್ವನಾಥನಾಯಕನು ಪಾಂಡ್ಯರಾಜ

ಚಂದ್ರಶೇಖರನ ಹಗೆಯಾದ ವೀರಶೇಖರ ಚೋಳನ ಪುಂಡನ್ನು ಮುರಿದ ಒಳಿಕ ಪಾಂಡ್ಯ ಮತ್ತು ಚೋಳ ಈ ಎರಡೂ ರಾಜ್ಯಗಳನ್ನು ತಾನೊಬ್ಬನೆ ಆಳತೊಡಗಿದನು. ಮುಂದೆ ಅಚ್ಯುತರಾಯನು ವಿಶ್ವನಾಥನ ಬೀಗನಾದ ಸೇವಪ್ಪನಾಯಕನನ್ನು ಸ್ವತಂತ್ರವಾಗಿ ಚೋಳರಾಜ್ಯಕ್ಕೆ ಒಡೆಯನನ್ನಾಗಿ ನೇಮಿಸಿದನು. ಈತನೇ ತಂಜಾವೂರ ನಾಯಕಮನೆತನದ ಸಂಸ್ಥಾಪಕನಾದನು (ಸು. ೧೫೪೦). ಸೇವಪ್ಪನಾಯಕನು ವಿಜಯನಗರಕ್ಕೆ ವಿಧೇಯನಾಗಿ ಬಹುಕಾಲ ಜೀವಿಸಿ ಈ ಆಳಿಕೆಯಲ್ಲಿಯೂ ಸಾಮ್ರಾಜ್ಯನಿಷ್ಠೆಯಿಂದ ವರ್ತಿಸುತ್ತಲಿದ್ದನು.

## ಜಿಂಜಿಯ ನಾಯಕರು

ಕೃಷ್ಣದೇವರಾಯನ ಆಳಿಕೆಯಲ್ಲಿ ತುಬಾಕಿ ಕೃಷ್ಣಪ್ಪನೆಂಬ ಶೂರ ನಾಯಕನು ಜಿಂಜಿಯ ನಾಯಕಮನೆತನವನ್ನು ಸ್ಥಾಪಿಸಿದನು (ಸು. ೧೫೧೫). ಈತನು ತನ್ನ ನೆಲೆವೀಡಾದ ಜಿಂಜಿಯಲ್ಲಿ ಕೋಟೆ ಕೊತ್ತಳಗಳನ್ನು ಕಟ್ಟಿಸಿದನು. ಊರನ್ನು ಬೆಳೆಸಿದನು. ಈತನು ವಿಜಯನಗರಕ್ಕೆ ವಿಧೇಯನಾಗಿ ಬಾಳಿದನು. ಈತನ ತರುವಾಯ ರಾಮಭದ್ರಪ್ಪ, ಸೂರಪ್ಪ ಮೊದಲಾದವರು ಜಿಂಜಿಯ ನಾಯಕರಾದರು. ಈ ರಾಜ್ಯವು ಮೇಲೆ ವಿವರಿಸಿದ ಉಳಿದ ಎರಡು ರಾಜ್ಯಗಳಷ್ಟು ವಿಸ್ತೃತವೂ ಬಲಿಷ್ಠವೂ ಆಗಿರಲಿಲ್ಲ.

ಇದು ಸಾಮ್ರಾಜ್ಯದ ದಕ್ಷಿಣಭಾಗವಾದ ತಮಿಳು ನಾಡಿನ ಮಂಡಲರಾಜ್ಯಗಳ ಮಾತಾಯಿತು.

ಅತ್ತ ಸಾಮ್ರಾಜ್ಯದ ಪಶ್ಚಿಮ ಪ್ರದೇಶವಾದ ಕರ್ನಾಟಕ ಭಾಗದಲ್ಲಿಯೂ ಕೆಲವು ಸಾಮಂತ ರಾಜ್ಯಗಳೂ ಸಣ್ಣ ಸಣ್ಣ ನಾಯಕರ ಮನೆತನಗಳೂ ಉದಯವಾಗಿದ್ದುವು. ಇವುಗಳಲ್ಲಿ ಕೆಳದಿಯ ನಾಯಕರು, ಮೈಸೂರ ಅರಸರು, ಯೆಲಹಂಕದ ಒಡೆಯರು ಪ್ರಮುಖರಾಗಿದ್ದರು.

## ಕೆಳದಿಯ ನಾಯಕರು

ಕೃಷ್ಣದೇವರಾಯನ ಆಳಿಕೆಯಲ್ಲಿ ಚೌಡಪ್ಪನೆಂಬ ಸಾಹಸಿಗನು ಸ್ವಪರಾಕ್ರಮದಿಂದ ಕೆಳದಿಗ್ರಾಮದ ನೆರೆಯ ಪ್ರದೇಶದಲ್ಲಿ ತನ್ನ ಅಧಿ

ಕಾರವನ್ನು ಸ್ಥಾಪಿಸಿ, ರಾಯನಿಂದ ಕೆಳದಿ ಚೌಡಪ್ಪನಾಯಕನೆಂಬ ಮನ್ನಣೆಯನ್ನು ಪಡೆದನು. ಈತನೇ ಕೆಳದಿಯ ನಾಯಕರಾಜ್ಯದ ಸಂಸ್ಥಾಪಕನು. ಮುಂದೆ ಈ ರಾಜ್ಯದ ರಾಜಧಾನಿಯು ಇಕ್ಕೇರಿ ಮತ್ತು ಬಿದನೂರಿಗೆ ಹೋದುದರಿಂದ ಇವರು ಇಕ್ಕೇರಿಯ ಅಥವಾ ಬಿದನೂರ ನಾಯಕರು ಎಂದೂ ಹೆಸರುವಾಸಿಯಾದರು.

ಚೌಡಪ್ಪನಾಯಕನ ಮಗನಾದ ಸದಾಶಿವನಾಯಕನು ಶೂರನೂ ರಾಜ್ಯಕಾರ್ಯಕುಶಲನೂ ಆಗಿದ್ದನು. ಈತನು ರಾಮರಾಯನ ಆಳಿಕೆ ಯಲ್ಲಿ ವಿಜಯನಗರದ ಅನೇಕ ಸಂಗ್ರಾಮಗಳಲ್ಲಿ ಪ್ರಮುಖ ಭಾಗವನ್ನು ವಹಿಸಿದನು. ರಾಮರಾಯನು ವಿಜಾಪುರ ರಾಜ್ಯದ ಮೇಲೆ ದಂಡ ಯಾತ್ರೆ ಮಾಡಿ ಕಲ್ಯಾಣದ ಕೋಟೆಯನ್ನು ಮುತ್ತಿದಾಗ ಈತನು ವಿಜಯನಗರದ ಸೇನಾಧಿಪತಿಯಾಗಿದ್ದನು. ಈತನು ಬಾರಕೂರು, ಮಂಗಳೂರು, ಚಂದ್ರಗುತ್ತಿ ಮೊದಲಾದ ಪ್ರದೇಶದಲ್ಲಿ ದಾಳಿ ಮಾಡಿ ದನು. ಬಿದರ ಸುಲ್ತಾನನನ್ನು ಸೋಲಿಸಿ ರಾಮರಾಯನಿಂದ ಶತ್ರು- ಸಪ್ತಾಂಗಹರಣ ಎಂಬ ಬಿರುದನ್ನು ಪಡೆದನು.

ಈತನ ತರುವಾಯ ದೊಡ್ಡ ಸಂಕಣ್ಣನಾಯಕ, ಸಣ್ಣಸಂಕಣ್ಣ ನಾಯಕ ಮೊದಲಾದವರು ಕೆಳದಿಗೆ ಒಡೆಯರಾದರು. ಸಣ್ಣಸಂಕಣ್ಣ ನಾಯಕನು ಮಹತ್ವಾಕಾಂಕ್ಷಿಯಾಗಿದ್ದನು. ಈತನು ಯಶಸ್ವಿಯಾಗಿ ಅರಸುಗೆಯ್ದು ತನ್ನ ರಾಜ್ಯವನ್ನು ಬಲಗೊಳಿಸಿದನು. ಈತನು ಇಕ್ಕೇರಿ ಯಲ್ಲಿ ಹೊಸಪಟ್ಟಣವನ್ನೂ ನಾಟ್ಯಗೃಹದ ಸೌಕರ್ಯವುಳ್ಳ ಭವ್ಯವಾದ ಅರಮನೆಯನ್ನೂ ಕಟ್ಟಿಸಿದನು.

## ಮೈಸೂರ ಅರಸರು

ಭಗವಾನ್ ಶ್ರೀಕೃಷ್ಣನ ಜನನದಿಂದ ಘನತೆಯನ್ನು ಹೊಂದಿದ ಚಂದ್ರವಂಶದ ಯಾದವಕುಲದಲ್ಲಿ ಹುಟ್ಟಿದ ವಿಜಯ-ಕೃಷ್ಣರೆಂಬ ಕುಮಾ ರರಿಬ್ಬರು ದ್ವಾರಕೆಯಿಂದ ಕರ್ನಾಟಕದಲ್ಲಿ ಬಂದು ನೆಲೆಸಿದರು. ಇವರಲ್ಲಿ ವಿಜಯ ಅಥವಾ ಯದುರಾಯನೆಂಬಾತನು ಈಗಿನ ಮೈಸೂರ ಪಟ್ಟಣದ ಬಳಿಯಲ್ಲಿರುವ ಹದಿನಾಡ ಪ್ರದೇಶಕ್ಕೆ ಒಡೆಯನಾದನು. ಈ ಯದು

ರಾಯನು ಆತ್ರೇಯ ಗೋತ್ರ ಅಶ್ವಲಾಯನ ಸೂತ್ರಕ್ಕೆ ಸೇರಿದ ಯದು ವೀರ (ಕೃಷ್ಣ)ನಿಂದ ಹನ್ನೊಂದನೆಯ ತಲೆಯವನು. ಚಿಕ್ಕದಾದ ಈ ರಾಜ್ಯವು ವಿಜಯನಗರಸಾಮ್ರಾಜ್ಯಕ್ಕೆ ಅಂಕಿತವಾಗಿದ್ದಿತು. ಯದು ರಾಯನಿಂದ ಮೂರನೆಯವನಾದ ಚಾಮರಾಜನು ೧೬ನೆಯ ಶತಮಾನದ ಆದಿಭಾಗದಲ್ಲಿ ಅರಸುಗೆಯ್ಯುತ್ತಿದ್ದನು. ಬಳಿಕ ಆಳಿದ (ಬೆಟ್ಟದ) ಚಾಮರಾಜನು ಪುರಗಡಿಯಲ್ಲಿ ಕೋಟೆಯನ್ನು ಕಟ್ಟಿಸಿದನು (೧೫೨೪). ಇದುವೆ ಮುಂದೆ ಮೈಸೂರು ಎಂದು ಹೆಸರುವಾಸಿಯಾಯಿತು. ಅಂದಿನಿಂದ ಈ ಊರು ಈ ಮನೆತನದ ನಿವಾಸಸ್ಥಾನವಾಯಿತು.

ರಾಕ್ಷಸತಂಗಡಿಯಿಂದ ಜರ್ಜರಿತವಾದ ವಿಜಯನಗರದ ಈ ಆಳಿಕೆಯಲ್ಲಿ ನಾಲ್ಪಡಿ ಚಾಮರಾಜನು ಮೈಸೂರಿಗೆ ಒಡೆಯನಾಗಿದ್ದನು. ಈತನು ಶ್ರೀರಂಗಪಟ್ಟಣದ ಮಂಡಲಾಧಿಕಾರಿಗೆ ತಾನು ಸಲ್ಲಿಸತಕ್ಕ ಕಪ್ಪವನ್ನು ತಪ್ಪಿಸುತ್ತ, ತನ್ನ ಗಡಿಗಳನ್ನು ಭದ್ರಪಡಿಸಿ ತನ್ನ ಸಾಮರ್ಥ್ಯವನ್ನು ಬೆಳೆಸುವ ಕ್ರಮವನ್ನು ಆಚರಿಸತೊಡಗಿದನು.

## ಯೆಲಹಂಕದ ಪ್ರಭುಗಳು

೧೫ನೆಯ ಶತಮಾನದಲ್ಲಿ ಬೆಂಗಳೂರ ಬಳಿಯ ಯೆಲಹಂಕ ಎಂಬೂರಲ್ಲಿ ಇನ್ನೊಂದು ಅರಸುಮನೆತನವು ಕಂಚಿಯ ಪ್ರದೇಶದಿಂದ ಬಂದು ನೆಲೆಸಿತು (೧೪೧೮). ಇದೇ ಮುಂದೆ ಪ್ರಬಲಿಸಿ ಯೆಲಹಂಕ ನಾಡ ಪ್ರಭು ಎಂದು ಪ್ರಸಿದ್ಧಿಯನ್ನು ಪಡೆಯಿತು. ಈ ಮನೆತನದಲ್ಲಿ ನಾಮಾಂಕಿತನಾದ ಕೆಂಪೆಗೌಡನು ಅಚ್ಯುತರಾಯನ ಕಾಲದಲ್ಲಿ ಶಿವಸಮುದ್ರವೆಂಬ ಜೀರ್ಣಗ್ರಾಮದ ಸ್ಥಳದಲ್ಲಿ ಬೆಂಗಳೂರು ಪಟ್ಟಣವನ್ನು ಸ್ಥಾಪಿಸಿದನು ( ೧೫೩೭ ). ಈತನು ಸದಾಶಿವರಾಯನ ಆಳಿಕೆಯಲ್ಲಿ ಸ್ವತಂತ್ರನಾಗಲು ಹವಣಿಸಿದನು. ಆದರೆ ರಾಮರಾಯನ ಉಗ್ರವಾದ ಶಾಸನಕ್ಕೆ ಗುರಿಯಾಗಿ ವಿಜಯನಗರದ ಅಧೀನತ್ವವನ್ನು ಒಪ್ಪಿಕೊಂಡು ಬಾಳಿದನು.

ಇವುಗಳಲ್ಲದೆ ಬೇಲೂರು, ಚಿತ್ರದುರ್ಗ ಮೊದಲಾದ ಪ್ರದೇಶಗಳಲ್ಲಿ ಸಣ್ಣ ಸಣ್ಣ ನಾಯಕರ ರಾಜ್ಯಗಳು ತಲೆಯೆತ್ತಿಕೊಂಡು ಜೀವಿಸಿದುವು.

ಈ ಮಂಡಲ ರಾಜ್ಯಗಳ ಅಭ್ಯುದಯದಿಂದ ೧೬-೧೭ ನೆಯ ಶತಮಾನಗಳಲ್ಲಿ ದಕ್ಷಿಣ ದೇಶದ ಆ ಆ ಭಾಗಗಳಲ್ಲಿ ಹೊಸ ಹೊಸ ಪಟ್ಟಣಗಳೂ ರಾಜಧಾನಿಯ ಸ್ಥಳಗಳೂ ಹುಟ್ಟಿ ಬೆಳೆದುವು. ಇವುಗಳು ಕೆಲ ಕಾಲ ಭಾರತೀಯ ನಾಗರಿಕತೆಯ ಕೇಂದ್ರಗಳಾಗಿ ಹೊಳೆದು ದಕ್ಷಿಣ ಭಾರತದ ವೈಭವವನ್ನು ಹೆಚ್ಚಿಸಿದುವು.

ಈ ಆಳಿಕೆಯಲ್ಲಿ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗುವ ಸನ್ಮಾನವನ್ನು ಪಡೆದ ಪೆನುಗೊಂಡ ಪಟ್ಟಣವು ಅತಿ ಭದ್ರವಾದ ದುರ್ಗವೆಂದು ಎಂದಿನಿಂದಲೂ ವಿಖ್ಯಾತಿವೆತ್ತುದಾಗಿತ್ತು. ಇದು ಪ್ರಾಂತಾಧಿಪತಿಯ ನಿವಾಸಸ್ಥಳವಾಗಿದ್ದು, ಸಾಮ್ರಾಜ್ಯದ ದ್ವಿತೀಯ ರಾಜಧಾನಿಯಾಗಿ ಎಣಿಸಲ್ಪಡುತ್ತಿದ್ದಿತು. ಇದು ಆಗಾಗ ರಾಜವಂಶದ ಬಂದಿಗಳಿಗೆ ಕಾರಾಗಾರವೂ ಆಗಿತ್ತು. ನರಸನಾಯಕನು ತಾನು ಪದಭ್ರಷ್ಟ ಮಾಡಿದ ಇಮ್ಮಡಿ ಸಾಳುವ ನರಸಿಂಹನನ್ನು ಇಲ್ಲಿಯೆ ತಂದಿರಿಸಿ ತನ್ನ ರಾಜ್ಯತೃಷ್ಣೆಗೆ ಬಲಿಯಾಗಿಸಿದ್ದನು. ಕೃಷ್ಣದೇವರಾಯನಿಗೆ ಇದು ಪ್ರೀತಿಯ ವಿಹಾರಭೂಮಿಯಾಗಿದ್ದಿತು.

ಈ ಮೇರೆಗೆ ಪೆನುಗೊಂಡವು ನಿಜವಾದ ರಾಜಧಾನಿಯ ಸ್ಥಳವೆಂದು ನಿಶ್ಚಿತವಾಗಿದ್ದರೂ ಸಾಮ್ರಾಜ್ಯದ ಪೂರ್ವರಾಜಧಾನಿಯ ಸ್ಮಾರಕವಾಗಿಯೂ ವಿಜಯನಗರಸಾಮ್ರಾಜ್ಯದ ಧಾರಾವಾಹಿತ್ವವನ್ನು ಸೂಚಿಸುವುದಕ್ಕಾಗಿಯೂ ಕೆಲವು ಸಮಯಗಳಲ್ಲಿ ಈ ಮನೆತನದ ಅರಸರ ರಾಜಧಾನಿಯನ್ನು ಹೇಳುವಾಗ ವಿದ್ಯಾನಗರ, ವಿಜಯನಗರ ಅಥವಾ ಹಂಪೆ–ಹಸ್ತಿನಾವತಿ ಎಂಬ ಸಾಂಕೇತಿಕ ನಿರ್ದೇಶಗಳು ದೊರೆವುವು.

ತಿರುಮಲರಾಯನ ರಾಜ್ಯಕಾರ್ಯದಲ್ಲಿ ವೆಂಕಟಾದ್ರಿಯೂ ಆತನ ಪ್ರೌಢರಾದ ಮೂವರು ಮಕ್ಕಳೂ ನೆರವಾಗುತ್ತಿದ್ದರು. ರಾಯನ ನಾಲ್ವರು ಮಕ್ಕಳಲ್ಲಿ ಹಿರಿಯನಾದ ರಘುನಾಥನು ರಾಕ್ಷಸತಂಗಡಿಯಲ್ಲಿ ಹತನಾದನು. ಉಳಿದ ಮೂವರು–ಶ್ರೀರಂಗ, ರಾಮದೇವ, ವೆಂಕಟಪತಿ–ಇವರು ಧುರಂಧರವಾಗಿ ಮೇಲೆ ಹೇಳಿದಂತೆ ಸಾಮ್ರಾಜ್ಯದ ಬೇರೆಬೇರೆ ಭಾಗಗಳನ್ನು ಆಳುತ್ತಿದ್ದರು. ಇವರಲ್ಲಿ ಶ್ರೀರಂಗನು ಯುವರಾಜನಾಗಿ ನಿಯುಕ್ತನಾಗಿದ್ದನು.



ಪೆನುಗೊಂಡದ ಕೋಟೆ



ಪೆನುಗೊಂಡದಲ್ಲಿಯು
ವಿಜಯನಗರ ಅರಸರ ಅರಮನೆಯ ಅವಶೇಷ

ಮಕ್ಕಳ ಮೇಲೆ ರಾಜ್ಯಭಾರವನ್ನು ಒಪ್ಪಿಸಿವ ತಿರುಮಲನು ಕಾವ್ಯ-ಶಾಸ್ತ್ರ-ವಿನೋದ ಗೋಷ್ಠಿಯಲ್ಲಿ ಕಾಲವನ್ನು ಕಳೆಯುತ್ತಿದ್ದನು. ಈತನು ಸ್ವಧರ್ಮದಲ್ಲಿ ಆಸಕ್ತಿಯುಳ್ಳವನೂ ವಿದ್ಯಾಪಕ್ಷಪಾತಿಯೂ ಆಗಿದ್ದನು. ವಿದ್ಯಾವಂತರು, ಧರ್ಮಸ್ಥಾನಗಳು, ದೇವಾಲಯಗಳು ಈತನಿಂದ ಹಲವು ದಾನಗಳನ್ನು ಪಡೆದುವು. ಈತನು ತಾನು ಶ್ರೀವೈಷ್ಣವ ಮತಾನುಯಾಯಿಯಾಗಿದ್ದರೂ ಅನ್ಯಧರ್ಮಮತಗಳಲ್ಲಿ ಅತ್ಯಂತಸಹಾನು ಭೂತಿಯುಳ್ಳವನಾಗಿದ್ದನು.

ತಿರುಮಲನು ಸ್ವತಃ ಮಾರ್ಮಿಕ ಪಂಡಿತನೂ ವಿದ್ಯಾವಾಸಂ ಗಿಯೂ ಆಗಿದ್ದನು. ಜಯದೇವಕವಿಯ ಗೀತಗೋವಿಂದ ನಾಟಕದ ಮೇಲಿನ ಶ್ರುತಿರಂಜಿನೀ ಎಂಬ ಟೀಕೆಯು ಈತನಿಂದ ರಚಿತವಾದುದೆಂದು ಕೆಲವೆಡೆ ಹೇಳಲಾಗಿದೆ. ರಾಯನ ಆಸ್ಥಾನದ ಸುಪ್ರಸಿದ್ಧ ತೆಲುಗು ಕವಿ ಯಾದ ಭಟ್ಟುಮೂರ್ತಿಯು ವಸುಚರಿತ್ರವು, ಹರಿಶ್ಚಂದ್ರ-ನಲೋಪಾ ಖ್ಯಾನವು, ನರಸಭೂಪಾಲೀಯವು ಮೊದಲಾದ ಕಾವ್ಯಗಳನ್ನು ಬರೆದನು. ಸುಮಾರು ಇದೇ ಕಾಲದಲ್ಲಿ ಬಾಳಿದವರಾದ ಕೋನೇರು ನಾಥನ ಬಾಲಭಾಗವತಂ (ತೆ.), ತಿರುಮಲನ ಸೋದರ ಅಳಿಯನಾದ ತಿಮ್ಮ ಭೂಪಾಲನ ಪರಮಯೋಗಿವಿಲಾಸಂ (ತೆ.), ಏಕಾಮ್ರನಾಥನ ಜಾಂಬವತೀಕಲ್ಯಾಣಂ (ಸಂ.), ಚೇರುಕೂರಿ ಲಕ್ಷ್ಮೀಧರನ ಅನರ್ಘ ರಾಘವ, ಮುಂತಾದುವು ಆಂಧ್ರ-ಸಂಸ್ಕೃತ ಸಾಹಿತ್ಯಗಳನ್ನು ಭೂಷಣ ಗೊಳಿಸುವ ನಾಮಾಂಕಿತ ಕೃತಿಗಳಾಗಿವೆ.

ತಿರುಮಲನ ಸಮಗ್ರವಾದ ರಾಜಕೀಯ ಚರಿತ್ರೆಯನ್ನು ಅವಲೋ ಕಿಸಿದರೆ, ಧೀರನಾದ ಸೇನಾಪತಿ, ಚತುರನಾದ ಮಂತ್ರಿ, ವಿವೇಕಿಯಾದ ಅರಸು ಈ ಮೂವರ ಗುಣಗಳು ಈತನಲ್ಲಿ ಕೇಲವಂಶದಿಂದ ನೆಲೆಸಿದ್ದು ವೆಂಬುದಾಗಿ ಕಾಣಬರುತ್ತದೆ. ವಿಜಯನಗರಸಾಮ್ರಾಜ್ಯನೌಕೆಯು ಅತಿದುಸ್ತರವಾದ ವಿಪತ್ಸಾಗರದಲ್ಲಿ ಸಿಲುಕಿದ ವಿಷಮಪ್ರಸಂಗದಲ್ಲಿ ಅದರ ಕರ್ಣಧಾರನಾಗುವ ಭಾರವು ತಿರುಮಲನ ಮೇಲೆ ಬಿದ್ದಿತು. ಈ ಹೊಣೆಯನ್ನು ಈತನು ಒಳ್ಳೆಯ ಧೈರ್ಯದಿಂದಲೂ ಯುಕ್ತಿಯಿಂದಲೂ

ಯಥಾಶಕ್ತಿ ನಿರ್ವಹಿಸಿದನು. ಈ ಮಹಾಸಂಕಟದಿಂದ ಸಾಮ್ರಾಜ್ಯವನ್ನು ಉಳುಹಿದುದರ ದ್ಯೋತಕವಾಗಿಯೊ ಏನೊ, ಈತನು **ಧರಣೀವರಾಹ** ಎಂಬ ಬಿರುದನ್ನು ಧರಿಸಿದನು. ವಾರ್ಧಕ್ಯದ ಮೂಲಕವೂ ಸ್ವಭಾವಸಿದ್ಧವಾದ ಪರಾಕ್ರಮಹೀನತ್ವದ ಮೂಲಕವೂ ಈತನ ಆಳಿಕೆಯು ಹೆಚ್ಚು ಬಲಶಾಲಿಯಾಗಲಿಲ್ಲವೆಂಬುದು ನಿಜವು.

ರಾಕ್ಷಸತಂಗಡಿಯ ಪರಿಣಾಮವಾಗಿ, ಈ ಆಳಿಕೆಯಿಂದ ಮೊದಲುಗೊಂಡು ವಿಜಯನಗರದ ಉತ್ತರ, ದಕ್ಷಿಣ ಮತ್ತು ಪಶ್ಚಿಮ ಭಾಗದ ಗಡಿಗಳು ಸಡಿಲಾಗಿ ಮೆಲ್ಲ ಮೆಲ್ಲನೆ ಕೈಬಿಟ್ಟು ಹೋಗಲನುವಾದುವು ಈ ಕಾಲದಲ್ಲಿ ಮಹಮ್ಮದೀಯ ರಾಷ್ಟ್ರಗಳಲ್ಲಿಯೂ ನಿರ್ಬಲತೆಯೂ ಒಳಜಗಳಗಳೂ ನೆಲೆಗೊಂಡಿದ್ದುವು.ಆದರೂ ಅವುಗಳು ಬಲಗುಂದಿದ ವಿಜಯನಗರರಾಜ್ಯದಲ್ಲಿ ಆಕ್ರಮಣ ಮಾಡಲು ಸಮರ್ಥವೇ ಆಗಿದ್ದುವು. ತಿರುಮಲರಾಯನು ಯೋಚಿಸಿದಂತೆ ಆತನ ಪ್ರಬುದ್ಧ ಪುತ್ರರಾದ ಶ್ರೀರಂಗ ಮೊದಲಾದವರು ಆಂಧ್ರ ಮೊದಲಾದ ಪ್ರಾಂತಗಳಲ್ಲಿ ಅರಿಗಳ ಆಕ್ರಮಣವನ್ನು ಕೆಲಮಟ್ಟಿಗೆ ತಡೆದು ನಿಲ್ಲಿಸಿ, ಸಾಮ್ರಾಜ್ಯದಲ್ಲಿ ಮತ್ತೆ ಶಕ್ತಿಯೂ ಸುವ್ಯವಸ್ಥೆಯೂ ಬೆಳೆವಂತೆ ಕೆಲಕಾಲ ಹೆಣಗಿದರು. ಆದರೆ ಬಲಗೆಡುವ ಸಾಮ್ರಾಜ್ಯವು ಬಲವುಳ್ಳ ಅರಿಗಳನ್ನು ಬಹುಕಾಲ ಇದಿರಿಸಲು ಸಮರ್ಥವಾಗಲಿಲ್ಲ. ಮುಂದಿನ ಕೆಲವು ಆಳಿಕೆಗಳಷ್ಟರಲ್ಲಿ ಮೇಲೆ ಹೇಳಿದ ಸಾಮ್ರಾಜ್ಯದ ಭಾಗಗಳು ಚಿರಕಾಲ ವಿಜಯನಗರಕ್ಕೆ ಎರವಾದುವು.

ಸಾಮ್ರಾಜ್ಯಹಿತದ ದೃಷ್ಟಿಯಿಂದಲೂ ರಾಜನೀತಿಯ ವಿಚಾರದಿಂದಲೂ ತಿರುಮಲನಿಂದ ಮೂರು ದೊಡ್ಡ ಪ್ರಮಾದಗಳು ಘಟಿಸಿದುವು. ಮೊದಲನೆಯದು ಸದಾಶಿವರಾಯನ ವಧೆಯು.[೧] ಗರ್ಹ್ಯವಾದ ಈ ಕೃತಿಯಿಂದ ಜನತೆಯಲ್ಲಿ ಅಪ್ರೀತಿ-ಅಸಂತೋಷಗಳು ಪಸರಿಸಿ,ಇದೀಗ ದಾರುಣವಿಪ್ಲವದಿಂದ ತಲೆಯೆತ್ತುತ್ತಲಿರುವ ಸಾಮ್ರಾಜ್ಯಕ್ಕೆ ಶಕ್ತಿಪಾತವು ಉಂಟಾಯಿತು. ಎರಡನೆಯದು ರಾಜಧಾನಿಯ ಸ್ಥಳಾಂತರವು. ಹೀಗೆ ಮಾಡಲು ಎಷ್ಟೇ ಬಲವತ್ತರವಾದ ಕಾರಣಗಳು ಇದ್ದರೂ ಅದರಿಂದ

---

೧. ೯ನೆಯ ವಿಲಾಸ, ಟಿಪ್ಪಣಿ ೨, ಪುಟ ೧೮೧.

ಸಾಮ್ರಾಜ್ಯಕ್ಕೆ ಆಗಬೇಕಾದ ಅಪಾಯವು ಆಗದೆ ಇರಲಿಲ್ಲ. ಇದರಿಂದ ಸಾಮ್ರಾಜ್ಯದ ನಿರ್ಬಲತೆಯು ಸ್ಥಿರವಾಯಿತು. ಉತ್ತರದ ಎಷ್ಟೋ ಭಾಗಗಳು ಕೈಬಿಟ್ಟು ಹೋದುವು. ಹೀಗೆ ಹಿಂಜರಿವ ಮಾರ್ಗವನ್ನು ಹಾಕಿಕೊಂಡು ಸಾಮ್ರಾಜ್ಯಕ್ಕೆ ಮತ್ತೆ ಮುಂದೆ ಬೆಳೆಯುಲು ಅವಕಾಶವು ದೊರೆಯಲಿಲ್ಲ. ಅದು ಹೆಚ್ಚು ಹೆಚ್ಚು ಹಿಮ್ಮೆಟ್ಟುತ್ತಲೆ ಹೋಯಿತು.

ಸಾಮ್ರಾಜ್ಯವನ್ನು ಮೂರು ವಿಭಾಗವಾಗಿ ಹಂಚಿಟ್ಟುದು ತಿರುಮಲನ ಮೂರನೆಯ ತಪ್ಪಾಗಿದೆ. ಅದೂರದೃಷ್ಟಿಯ ಈ ಕೃತ್ಯವು ಕೊನೆಯಲ್ಲಿ ಸಾಮ್ರಾಜ್ಯಕ್ಕೆ ಹಾನಿಕರವಾಗಿ ಪರಿಣಮಿಸಿತು. ಈ ಕಾಲದಲ್ಲಿ ಕ್ಷೀಣಬಲವಾದ ಸಾಮ್ರಾಜ್ಯದ ಸಾಮರ್ಥ್ಯವು ಪ್ರಭುಶಕ್ತಿಯ ಕೇಂದ್ರೀಕರಣದಿಂದ ( Centralisation of power ) ಮತ್ತೆ ಸಂವರ್ಧನಗೊಳ್ಳಬಹುದಾಗಿತ್ತು. ಈ ರಾಜ್ಯವಿಭಜನೆಯಿಂದ ಸಾಮ್ರಾಜ್ಯದ ಜೀವನಕ್ಕೆ ಅತ್ಯಾವಶ್ಯಕವಾದ ಕೇಂದ್ರಬಲಕ್ಕೆ ಪ್ರತಿರೋಧಿಯಾದ ಇನ್ನೊಂದು ಶಕ್ತಿಯನ್ನು ನಿರ್ಮಾಣಮಾಡಿದಂತಾಗಿ, ಸಾಮ್ರಾಜ್ಯವು ಅಲ್ಪಾವಧಿಯಲ್ಲಿ ಸಿಡಿಸಿಡಿದು ಹೋಳು ಹೋಳು ಆಗುವ ಹಾದಿಯನ್ನು ಹಿಡಿಯಿತು ಎಂಬುದು ಮುಂದಿನ ಚರಿತ್ರೆಯಲ್ಲಿ ಸ್ಫುಟವಾಗುವುದು.

ರಾಯನು ೧೫೭೦ರಲ್ಲಿ ಕಾಲಾಧೀನನಾಗಲು, ಆತನ ಉಳಿದ ಮಕ್ಕಳಲ್ಲಿ ಹಿರಿಯನಾದ ಶ್ರೀರಂಗರಾಯನು ವಿಜಯನಗರ ಸಾಮ್ರಾಜ್ಯದ ಪಟ್ಟಾಧಿಕಾರಿಯಾದನು.

## ಇಪ್ಪತ್ತೊಂದನೆಯ ವಿಲಾಸ

# ೨. ಶ್ರೀರಂಗರಾಯ (೧೫೭೮-೧೫೮೫)

ಇಮ್ಮಡಿ ಶ್ರೀರಂಗರಾಯನೆಂದು ಚರಿತ್ರೆಯಲ್ಲಿ ಈತನನ್ನು ನಿರ್ದೇಶಿಸುವರು.*

ಶ್ರೀರಂಗರಾಯನು ತಂದೆ ತಿರುಮಲರಾಯನ ಆಳಿಕೆಯ ಆರಂಭ ಕಾಲದಿಂದಲೆ ಯುವರಾಜಪದಸ್ಥನಾಗಿ ರಾಜ್ಯಕಾರ್ಯದಲ್ಲಿ ಪ್ರಮುಖ ಭಾಗವನ್ನು ಸ್ವೀಕರಿಸುತ್ತಿದ್ದನು. ಜರಾಗ್ರಸ್ತನಾದ ತಿರುಮಲರಾಯನು ತನ್ನ ರಾಜ್ಯಭಾರವನ್ನೆಲ್ಲ ಹೆಚ್ಚಾಗಿ ಈತನ ಮೇಲೆಯೆ ಒಪ್ಪಿಸಿದ್ದನು. ಹೀಗೆ ರಾಜ್ಯಧುರೀಣನಾದ ಈತನಿಂದ ನೆರವೇರಿದ ಹಲವು ಸಂವಿಧಾನ ಗಳು ನಿಕಟವಾಗಿ ಕೇವಲ ಕಾಲಕ್ರಮವಿಚಾರದಿಂದ ನೋಡಲು, ಹಿಂದಿನ ಆಳಿಕೆಯಲ್ಲಿ ಹೇಳಬೇಕಾಗಿದ್ದರೂ ಕರ್ತೃತ್ವದ ದೃಷ್ಟಿಯಿಂದಲೂ ಕಥನಸೌಕರ್ಯಕ್ಕಾಗಿಯೂ ಅವುಗಳು ಏಕಸೂತ್ರವಾಗಿ ಈ ಆಳಿಕೆ ಯಲ್ಲಿ ನಿವೇದಿಸಲಾಗುವುವು.

ಹಿಂದಿನ ಆಳಿಕೆಯಿಂದ ಸಾಮ್ರಾಜ್ಯಕ್ಕೆ ಒಡ್ಡಿನಿಂತ ಎರಡು ಗಂಡಾಂತರಗಳು—ಅಂತರ್ಗತ ದೌರ್ಬಲ್ಯ, ಅಶಾಂತಿ ಇವುಗಳ ಮೂಲಕ ಸಾಮ್ರಾಜ್ಯಶರೀರದ ಅವಯವಗಳಂತಿದ್ದ ಸಾಮ್ರಾಜ್ಯದ ಪ್ರದೇಶಗಳು ಒಡೆದು ಸಿಡಿದು ಹೋಗುವುದು; ಮತ್ತು ಉತ್ತರದ ಮಹಮ್ಮದೀಯ ರಾಜ್ಯಗಳ ಆಕ್ರಮಣವು; ಇವುಗಳು—ಈ ಆಳಿಕೆಯಲ್ಲಿಯೂ ಮುಂದು ವರಿದುವು. ಪಶ್ಚಿಮ ಕರಾವಳಿಯಲ್ಲಿ ಅವಿಧೇಯತೆಯ ಪ್ರವೃತ್ತಿಯು ಹೆಚ್ಚಾಗಿ ತಲೆದೋರಿತು. ಅನೇಕ ಸಣ್ಣ ಸಣ್ಣ ಅರಸರೂ ನಾಯಕರೂ ಬಂಡಾಯವನ್ನು ಹೂಡಿ ತೊಂದರೆಯನ್ನು ಆರಂಭಿಸಿದರು. ಆದರೆ

---

* ಒಂದು ಮನೆತನದಲ್ಲಿ ಬಾಳಿದ ಒಂದೇ ಹೆಸರಿನ ಹಲವು ಪುರುಷರನ್ನು ಪರಿಗಣಿಸಿ ಒಂದನೆಯ, ಎರಡನೆಯ ಮುಂತಾದ ಕ್ರಮದಿಂದ ಗುರುತಿಸುವ ರೂಢಿಯಿದೆ. ಇಲ್ಲಿ ಅಂಗೀ ಕರಿಸಿದ ಅನುಕ್ರಮವು ಈಚಿನ ಸಂಶೋಧನೆಯಂತೆ ಸಿದ್ಧವಾದುದು.

ರಾಯನು ಅವರನ್ನೆಲ್ಲ ಹತ್ತಿಕ್ಕಿದನು. ಚೌರಾಸಿ (೮೪) ದುರ್ಗಗಳನ್ನು ಪಾದಾಕ್ರಾಂತ ಮಾಡಿ ರಾಜ್ಯದಲ್ಲಿ ಮತ್ತೆ ಸ್ವಾಸ್ಥ್ಯವನ್ನು ಸ್ಥಾಪಿಸಿದನು. ಇದೇ ಮೇರೆಗೆ ದಕ್ಷಿಣ ಪ್ರಾಂತದಲ್ಲಿ ಮರವರು ಮತ್ತು ಕಳ್ಳರು ಈ ಜನಾಂಗಗಳಿಂದ ಉಪದ್ರವವು ಉಂಟಾಯಿತು. ರಾಯನು ಅವರನ್ನು ಹಣಿದು ತನ್ನ ಅಂಕೆಯಲ್ಲಿ ತಂದನು.

ಅತ್ತ ವಿಜಾಪುರದ ಅಲೀ ಆದಿಲಶಹನು ಸಾಮ್ರಾಜ್ಯದ ಪಶ್ಚಿಮ ಪ್ರದೇಶದಲ್ಲಿ ಒಳನುಗ್ಗುತ್ತ ತನ್ನ ಅಧಿಕಾರವನ್ನು ಸ್ಥಾಪಿಸುವ ಉದ್ಯೋಗವನ್ನು ನಡೆಸಿದ್ದನು. ಆತನೀಕಾರ್ಯದಲ್ಲಿ ಆತನಿಗೆ ಸಹಾಯರಾಗಿ ಕೆಲರು ದೇಶದ್ರೋಹಿಗಳು ಅಲ್ಲಲ್ಲಿ ಹುಟ್ಟಿದರು. ಆತನು ಚಂದ್ರಗುತ್ತಿಯ (ಶಿವಮೊಗ್ಗ ಜಿಲ್ಲೆ) ಕೋಟೆಯನ್ನು ಭದ್ರಪಡಿಸುತ್ತಿರುವಾಗ, ಸಾಮ್ರಾಜ್ಯದ್ರೋಹಿಯಾದ ಶಂಕರನಾಯಕನು ಆತನಿಗೆ ಅವುತಣವಿತ್ತು ತನ್ನ ರಾಜ್ಯದಲ್ಲಿ ಬರಮಾಡಿಕೊಂಡನು. ಮುಂದೆ ಶಹನು ಕಡೂರು ಕೋಟೆಯನ್ನು ಕಸಿಯಲು ಹವಣಿಸಿ ವಿಫಲಮನೋರಥನಾಗಿ ಹಿಂದಿರುಗಿದನು. ಬಳಿಕ ಶಂಕರನಾಯಕನು ಜೆರ್ರಿ, ಬಸರೂರು ಮೊದಲಾದ ಅರಸರ ಮನವೊಲಿಸಿ ಆದಿಲಶಹನ ಅಧಿಕಾರವನ್ನು ಒಪ್ಪಿಕೊಳ್ಳುವಂತೆ ಮಾಡಿದನು. ಅನಂತರ ಆದಿಲಶಹನು ಪೆನುಗೊಂಡದತ್ತ ಹೊರಳಿದನು.

ಭಯಗೊಂಡ ರಾಯನು ಗೋವಳಕೊಂಡಕ್ಕೆ ರಾಯಭಾರಿಯನ್ನು ಕಳುಹಿ ಸಹಾಯವನ್ನು ಯಾಚಿಸಿದನು. ಇಬ್ರಾಹಿಮ ಕುತುಬಶಹನು ತನ್ನ ಸೇನಾಪತಿಯಾದ ಶಹಮುಹಮ್ಮದ ಅಂಜು ಎಂಬವನನ್ನು ವಿಜಾಪುರ ಪ್ರದೇಶವನ್ನು ಉಧ್ವಸ್ತಮಾಡಲು ಕಳುಹಿದನು. ತಾನು ರಾಯನಿಗೆ ನೆರವಾಗಲು ದಂಡಿನೊಡನೆ ಪೆನುಗೊಂಡಕ್ಕೆ ಹೊರಟನು. ಅಲೀ ಶಹನು ಇದನ್ನು ಕಂಡು ಪೆನುಗೊಂಡದ ಮುತ್ತಿಗೆಯನ್ನು ಕಿತ್ತುಕೊಂಡು ತೆರಳಿದನು (೧೫೭೬). ಈ ಸಮಯದಲ್ಲಿ ವಿಜಯನಗರದ ದಂಡನಾಯಕನಾದ ಹಂಡೆ ಮಲಕಪ್ಪನು ವಿಜಯನಗರದ ಪಕ್ಷವನ್ನು ತೊರೆದು ಆದಿಲಶಹನ ಪಕ್ಷವನ್ನು ಕೂಡಿದನು. ಮರುವರುಷ ಆದಿಲಶಹನು ಇನ್ನೊಮ್ಮೆ ದಂಡಯಾತ್ರೆಯನ್ನು ಹೊರಡಿಸಿದನು. ವಿಜಾಪುರದ

ಸೈನ್ಯವು ಒಂದು ಪೆನುಗೊಂಡಕ್ಕೆ ಮುತ್ತಿಗೆಯನ್ನು ಹಾಕಿತು. ಆಗ ವಿಜಯನಗರದ ದಳವಾಯಿಯಾದ ಜಗದೇವರಾಯನು ಬಹು ಶೌರ್ಯದಿಂದ ಹಗೆಯನ್ನು ಪ್ರತಿಭಟಿಸಿ ರಾಜಧಾನಿಯನ್ನು ಸಂರಕ್ಷಿಸಿದನು (೧೫೭೭). ಹೀಗೆ ವಿಜಯನಗರ ಸಾಮ್ರಾಜ್ಯದ ಈ ಎರಡನೆಯ ರಾಜಧಾನಿಯನ್ನು ವಿನಾಶಗೊಳಿಸಬೇಕೆಂದು ಅಲೀಶಹನು ಮಾಡಿದ ಎರಡೂ ಪ್ರಯತ್ನಗಳು ನಿಷ್ಫಲವಾದುವು.

ಅತ್ತ ಆಂಧ್ರ ಪ್ರಾಂತದಲ್ಲಿಯೂ ಕೊಸರಾಟವು ನಡೆಯಿತು. ಕುತುಬಶಹನು ಕೃಷ್ಣೆಯನ್ನು ದಾಟಿ ಸಾಮ್ರಾಜ್ಯದ ಈಶಾನ್ಯ ಪ್ರದೇಶದಲ್ಲಿ ಏರಾಟವನ್ನು ಹೂಡಿದನು. ವಿನುಕೊಂಡ, ಕಂಬಂ ಮೊದಲಾದ ಕೋಟೆಗಳನ್ನು ಕಸಿಯುತ್ತ ಕೊಂಡವೀಡು ದುರ್ಗವನ್ನು ಮುತ್ತಿದನು. ಶಹನು ಬಹುದಿನಗಳ ವರೆಗೆ ಬಹುಪ್ರಯಾಸ ಪಟ್ಟು ಕೊನೆಗೆ ಕೊಂಡವೀಡನ್ನು ಕಿತ್ತುಕೊಂಡನು. ಉದಯಗಿರಿಯೂ ಆತನಿಗೆ ವಶವಾಯಿತು (೧೫೮೦). ಆದರೆ ಮುಂದೆ ನಾಲ್ಕು ವರ್ಷಗಳಾದ ಬಳಿಕ ರಾಯನು ಸ್ವತಃ ಈ ಪ್ರಾಂತದಲ್ಲಿ ದಂಡಯಾತ್ರೆಯನ್ನು ಕೈಕೊಂಡು, ಅರಿಗಳು ಆಕ್ರಮಿಸಿದ ಕೆಲವು ಪ್ರದೇಶವನ್ನು ಮತ್ತೆ ಗೆದ್ದುಕೊಂಡನು (೧೫೮೪).

ಇದೇ ಸುಮಾರಿಗೆ ಕುತುಬಶಹನೂ ರಾಷ್ಟ್ರದ್ರೋಹಿಯಾದ ಹಂಡೆ ಮಲಕಪ್ಪನಾಯಕನೂ ಕೂಡಿ ಕರ್ನೂಲ ಪ್ರಾಂತದಲ್ಲಿ ದಾಳಿಯನ್ನು ಮಾಡಿ ಅಹೋಬಲ ಕ್ಷೇತ್ರವನ್ನು ವಿಧ್ವಂಸಗೊಳಿಸಿದರು. ಆಗ ರಾಯನು ದಂಡನ್ನು ಕಳುಹಿ ಈ ದಾಳಿಗಾರರನ್ನು ದೂರಕ್ಕೆ ಅಟ್ಟಿದನು. ರಾಯನ ಈ ವಿಜಯದ ಸ್ಮಾರಕವಾಗಿ ಅಹೋಬಲ ದೇವಸ್ಥಾನದಲ್ಲಿ ಜಯಸ್ತಂಭವು ನಿಲ್ಲಿಸಲಾಯಿತು (೧೫೮೪–೮೫).

ತಿರುಮಲರಾಯನು ಕರ್ನಾಟಕ ಪ್ರಾಂತದ ಮಹಾಮಂಡಲೇಶ್ವರನಾಗಿ ನಿಯೋಜಿಸಿದ ರಾಮದೇವನ ಆಳಿಕೆಯು ಸಾಕಷ್ಟು ಬಲಿಷ್ಠವಾಗಲಿಲ್ಲ. ಈ ಪ್ರಾಂತದಲ್ಲಿ ಅವಿಧೇಯತೆಯ ಪ್ರವೃತ್ತಿಯು ಕೆಲವೆಡೆ ಹೆಚ್ಚಾಗಿ ದೃಗ್ಗೋಚರವಾಯಿತು. ಕೆಳದಿಯ ಅರಸರು ಸಾಮ್ರಾಜ್ಯನಿಷ್ಠರಾಗಿಯೆ ವರ್ತಿಸಿದರು. ಆದರೆ ಮೈಸೂರ ಅರಸರು ಮಾತ್ರ ತಮ್ಮ

ಸಾಮರ್ಥ್ಯವನ್ನು ಬೆಳೆಸುತ್ತ ಹೆಚ್ಚು ಹೆಚ್ಚು ಸ್ವತಂತ್ರರಾಗಲು ಹವಣಿಸಿದರು. ಬೆಟ್ಟದ (ಐವಡಿ) ಚಾಮರಾಜನ ತರುವಾಯ ರಾಜ ಒಡೆಯನು ಮೈಸೂರಿಗೆ ದೊರೆಯಾದನು (೧೫೭೬–೧೬೧೭). ಈತನು ಪರಾಕ್ರಮಿಯೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಈತನು ನೆರೆಯ ಪ್ರದೇಶಗಳಲ್ಲಿ ದಾಳಿಗಳನ್ನು ಮಾಡಿ ತನ್ನ ರಾಜ್ಯವನ್ನು ವಿಸ್ತಾರಗೊಳಿಸಿದನು. ಅತ್ತ ಗೋವೆಯ ಪೋರ್ತುಗೀಜರು ತಮ್ಮ ಕಾಲುಗಳನ್ನು ಚಾಚುತ್ತ ಗೇರಸೊಪ್ಪೆ, ಹೊನಾವರ, ಬಸರೂರು, ಮಂಗಳೂರು ಮೊದಲಾದ ಸ್ಥಲಗಳಲ್ಲಿ ಆಕ್ರಮಣವನ್ನು ಹೂಡಿದ್ದರು. ರಾಮದೇವರಾಯನ ಮರಣವಾದ ಬಳಿಕ ಆತನ ಹಿರಿಯ ಮಗನಾದ (ಇಮ್ಮಡಿ) ತಿರುಮಲನು ಕರ್ನಾಟಕ ವಿಭಾಗದ ಮಹಾಮಂಡಲೇಶ್ವರನಾದನು (ಸು. ೧೫೮೨).

ರಾಯನ ಎರಡನೆಯ ತಮ್ಮನಾದ ವೆಂಕಟಪತಿಯು ತಮಿಳು ಪ್ರಾಂತವನ್ನು ಆಳುತ್ತಲಿದ್ದನು. ಈತನು ಲಂಕೆಯ ವರೆಗೆ ತನ್ನ ಪ್ರಭಾವವನ್ನು ಬೀರಿದನು. ಮದುರೆ, ತಂಜಾವೂರು, ಜಿಂಜಿ, ವೆಲ್ಲೂರು ಮೊದಲಾದುವುಗಳ ನಾಯಕರು ಈತನ ಅಧಿಕಾರಕ್ಷೇತ್ರಕ್ಕೆ ಒಳಪಟ್ಟಿದ್ದರು. ಇವರೆಲ್ಲರೂ ಸ್ವಾಮಿನಿಷ್ಠರಾಗಿ ಸಾಮ್ರಾಜ್ಯದ ಬಲವನ್ನು ಕಾಯಲು ಸಹಾಯರಾದರು. ಇವರಲ್ಲಿ ತಂಜಾವೂರ ಅಚ್ಯುತನಾಯಕನು ವಿಶೇಷವಾದ ನಿಷ್ಠೆಯಿಂದ ಸಾಮ್ರಾಜ್ಯದ ಗೌರವವನ್ನು ಪಾಲಿಸಿದನು. ಆದರೆ ಕೆಲಕಾಲ ಸ್ವಾಮಿನಿಷ್ಠನಾಗಿದ್ದ ಮದುರೆಯ ವೀರಪ್ಪನಾಯಕನು ಮುಂದೆ ತಾನು ವೆಂಕಟಪತಿಗೆ ಸಲ್ಲಿಸತಕ್ಕ ಕಪ್ಪವನ್ನು ನಿರಾಕರಿಸುವ ಪುಂಡತನವನ್ನು ಆರಂಭಿಸಿದನು. ಆದುದರಿಂದ ವೆಂಕಟಪತಿಯು ಅಚ್ಯುತನಾಯಕನೊಂದಿಗೆ ಆತನ ಮೇಲೆ ದಂಡೋಪಾಯವನ್ನು ಕೈಕೊಳ್ಳಬೇಕಾಯಿತು (ಸು. ೧೫೮೨). ಎರಡೂ ಪಕ್ಷಗಳ ನಡುವೆ ಕಠೋರವಾದ ಕದನಪ್ರಸಂಗವು ನಡೆಯಿತು. ಅದರಲ್ಲಿ ವೀರಪ್ಪನಾಯಕನು ಸೋತು ಮತ್ತೆ ಸಾಮ್ರಾಜ್ಯಾಧಿಕಾರಕ್ಕೆ ತಲೆಬಾಗಿದನು.

ರಾಯನು ಅತ್ಯಂತ ಕರುಣಾಳುವೂ ಉದಾರನೂ ಆಗಿದ್ದನು. ಅನೇಕ ಧರ್ಮಕಾರ್ಯಗಳಿಗೆ ಮುಕ್ತಹಸ್ತದಿಂದ ಧನವನ್ನು ನೀಡಿದನು.

ವಿದ್ಯಾವಂತರಿಗೆ ಅನೇಕ ದಾನಗಳನ್ನು ಕೊಟ್ಟನು. ತಿರುಪತಿ, ಶ್ರೀರಂಗಂ, ಮೇಲುಕೋಟೆ, ಶ್ರೀಪುಷ್ಣಂ, ಅಹೋಬಲ, ಮುಂತಾದ ದೇವಸ್ಥಾನಗಳು ಈತನ ಔದಾರ್ಯದಿಂದ ವಿಶೇಷವಾದ ಶೋಭೆಯನ್ನು ತಳೆದುವು. ಈತನಿಗೆ ರಾಮಾನುಜಮತದಲ್ಲಿ ವಿಶ್ವಾಸವಿದ್ದಿತು. ಲಕ್ಷ್ಮೀವಿಲಾಸಂ ಎಂಬ ತೆಲುಗು ಕಾವ್ಯವನ್ನು ಬರೆದ ರಾಯಸಂ ವೆಂಕಟಪತಿಯು ಆಸ್ಥಾನ ಕವಿಯಾಗಿದ್ದನು. ರಾಯನಿಗೆ ಇಬ್ಬರು ಹೆಂಡಂದಿರಿದ್ದರು; ಗಂಡು ಮಕ್ಕಳಿರಲಿಲ್ಲ. ರಾಯನು ೧೫೮೫ರಲ್ಲಿ ಮರಣವೈದಿದನು.

ತಂದೆಯಂತೆ ಅತಿಸಂಕಟಮಯವಾದ ಕಾಲದಲ್ಲಿ ಸಾಮ್ರಾಜ್ಯದ ಸೂತ್ರಗಳು ಶ್ರೀರಂಗರಾಯನ ಕೈಯಲ್ಲಿ ಬಂದುವು. ಈಗಾಗಲೇ ಬಲಗೊಂಡ ಸಾಮ್ರಾಜ್ಯವಿನಾಶಕ ಶಕ್ತಿಗಳು ಅಖಂಡವಾಗಿ ಕಾರ್ಯತತ್ಪರವಾಗಿದ್ದುವು. ರಾಯನು ಇವುಗಳನ್ನು ವಿರೋಧಿಸಲು ಸಾಹಸಪಟ್ಟನು. ಈತನ ಪರಿಶ್ರಮಗಳು ಕೆಲವಂಶದಿಂದ ಸಫಲವೂ ಆದುವು. ತಮ್ಮಂದಿರ ಸಹಾಯದಿಂದ ಈತನು ಕೈಕೊಂಡ ಉಪಾಯಗಳು ಸಾಮ್ರಾಜ್ಯದ ವಿನಾಶವನ್ನು ಕೆಲಕಾಲ ತಡೆದು ನಿಲ್ಲಿಸಿದುವು. ಇದಕ್ಕೂ ಹೆಚ್ಚಿನ ಸಾಮರ್ಥ್ಯವನ್ನೂ ತತ್ಪರತೆಯನ್ನೂ ಈತನು ತೋರಿಸಬೇಕಾಗಿದ್ದಿತು, ಎಂದು ಎನಿಸುತ್ತಿದ್ದರೂ ಅದು ಈತನಿಂದ ಸಾಧ್ಯವಾಗಲಿಲ್ಲ. ಇಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಕಳೆಗುಂದಿದ ಸಾಮ್ರಾಜ್ಯ ವೈಭವವನ್ನು ಅಂಶತಃ ಕಳೆಯೇರಿಸಿದ ಶ್ರೇಯಸ್ಸು ಈತನಿಗೆ ಸಲ್ಲುತ್ತದೆ.



## ಇಪ್ಪತ್ತೆರಡನೆಯ ವಿಲಾಸ

# ೩. ವೆಂಕಟಪತಿದೇವರಾಯ

## (೧೫೮೫-೧೬೧೪)

## ೧

## ಸಾಮ್ರಾಜ್ಯಶಕ್ತಿಯ ಪುನರುಜ್ಜೀವನ

## ಮಂಡಲಾಧಿಪತಿಗಳ ಪ್ರಾಬಲ್ಯ

ಶ್ರೀರಂಗರಾಯನು ಮರಣವೈದಿದ ಬಳಿಕ, ಆತನ ತಮ್ಮನಾದ ರಾಮದೇವನು ಮೊದಲೆ ತೀರಿಕೊಂಡುದರಿಂದಲೂ ಆತನ ಮಕ್ಕಳು ಇನ್ನೂ ಚಿಕ್ಕವರಿದ್ದುದರಿಂದಲೂ ತಿರುಮಲರಾಯನ ಕಡೆಯ ಮಗನೂ ಶ್ರೀರಂಗರಾಯನ ಕಿರಿಯ ತಮ್ಮನೂ ಆದ ವೆಂಕಟಪತಿದೇವರಾಯನು ಮಂತ್ರಿ, ನಾಯಕ ಮೊದಲಾದವರ ಸಮ್ಮತಿಯಿಂದ ಸಿಂಹಾಸನವನ್ನೇರಿದನು. ತಂದೆಯ ಕಾಲದಿಂದಲೂ ರಾಜ್ಯಕಾರ್ಯದಲ್ಲಿ ವಿಶೇಷವಾದ ಭಾಗವನ್ನು ಸ್ವೀಕರಿಸಿ, ಅನೇಕ ಅನುಭವಗಳನ್ನು ಪಡೆದವನೂ ಪರಾಕ್ರಮಿಯೂ ಆದ ಈತನ ಆಳಿಕೆಯು ಬಲಶಾಲಿಯಾಯಿತು.

ರಾಕ್ಷಸತಂಗಡಿಯ ಪರಾಭವದಿಂದ ಮುಹಮ್ಮದೀಯರ ಬಾಧೆಯು ಹೆಚ್ಚಾಗಿ ಅವರ ದಾಳಿಗಳಿಂದ ಸಾಮ್ರಾಜ್ಯಕ್ಕೆ ಬಹಳ ಹಾನಿಯಾಗಿತ್ತು. ಅವರ ವಿಷಯದಲ್ಲಿ ಕಳೆದ ಎರಡು ಆಳಿಕೆಗಳಲ್ಲಿ ಆಚರಿಸಿದ ರೀತಿಯು ಕೇವಲ ಆತ್ಮಸಂರಕ್ಷಣೆಯದಾಗಿತ್ತು. ಈ ದೌರ್ಬಲ್ಯವನ್ನು ಹೋಗಲಾಡಿಸಲು ನಿರ್ಧಾರಮಾಡಿದ ರಾಯನು ಪಟ್ಟವೇರಿದ ಕೂಡಲೆ ಆಕ್ರಮಣನೀತಿಯನ್ನು ಕೈಕೊಂಡು ಮುಹಮ್ಮದೀಯ ರಾಜ್ಯಗಳ ಮೇಲೆ ಎರಾಟಗಳನ್ನು ಆರಂಭಿಸಿದನು. ಈ ಮಧ್ಯದಲ್ಲಿ ವಿಜಾಪುರದ ಅಲೀ ಆದಿಲಶಹನ ಕೊಲೆಯಾಗಿ (೧೫೮೦) ಆತನ ಮಗನಾದ ಇಮ್ಮಡಿ

ಇಬ್ರಾಹಿಮುಶಹನು ಪಟ್ಟಕ್ಕೆ ಬಂದಿದ್ದನು. ಅತ್ತ ಗೋವಳಕೊಂಡ ದಲ್ಲಿಯೂ ಇಬ್ರಾಹಿಮು ಕುತುಬಶಹನು ಮರಣಹೊಂದಿ ಆತನ ಮಗ ನಾದ ಮುಹಮ್ಮದ ಕುಲಿ ಕುತುಬಶಹನು ಸುಲ್ತಾನನಾಗಿದ್ದನು.

ರಾಯನು ಮೊದಲು ಗೋವಳಕೊಂಡದ ಮೇಲೆ ಕತ್ತಿಯನ್ನು ಹಿರಿದನು. ತನ್ನ ರಾಜ್ಯದಲ್ಲಿ ವಿಜಯನಗರದವರು ಹೂಡಿದ ದಾಳಿಗಳಿಗೆ ಮುಯ್ಯಿವಾದ ಕುತುಬಶಹನು ದೊಡ್ಡ ದಂಡಿನೊಡನೆ ಬಂದು ಪೆನು ಗೊಂಡವನ್ನು ಮುತ್ತಿದನು. ರಾಯನು ಸಂಧಾನದ ಮಾತುಗಳನ್ನು ಆಡುತ್ತ ಯುದ್ಧವಿರಾಮವನ್ನು ಪಡೆದು, ಈ ಅವಧಿಯಲ್ಲಿ ಹೆಚ್ಚಿನ ಸೈನ್ಯವನ್ನೂ ಸಾಮಗ್ರಿಯನ್ನೂ ಬರಮಾಡಿಕೊಂಡನು. ಸೇನಾನಿಯಾದ ಜಗದೇವರಾಯನೂ ತಂಜಾವೂರ ನಾಯಕಪುತ್ರನಾದ ರಘುನಾಥನೂ ಆತನನ್ನು ಬಂದು ಕೂಡಿದರು.

ಶಹನು ಮುತ್ತಿಗೆಯನ್ನು ಮುಂದೆ ಸಾಗಿಸಿದನು. ಆದರೆ ಬೇಗನೆ ವಿಜಯನಗರದ ಪ್ರಬಲವಾದ ಪ್ರಹಾರಗಳನ್ನು ತಾಳಲಾರದೆ ಮುತ್ತಿಗೆ ಯನ್ನು ಕಿತ್ತುಕೊಂಡು ಪಲಾಯನ ಮಾಡಿದನು. ರಾಯನ ಸೈನ್ಯವು ಓಡಿಹೋಗುವ ಹಗೆಗಳನ್ನು ಬೆಂಬತ್ತಿ ಗೋವಳಕೊಂಡದ ಸೀಮೆಯ ವರೆಗೆ ಬಡಿದಟ್ಟಿತು. ಈ ವಿಜಯದಲ್ಲಿ ಮಹಮ್ಮದೀಯರ ಸಮೃದ್ಧ ವಾದ ಶಿಬಿರಸನ್ನಾಹವು ರಾಯನ ಕೈಗೆ ಸಿಕ್ಕಿತು. ಈ ಪರಾಭವವು ಗೋವಳಕೊಂಡಕ್ಕೆ ಬಹಳ ಬಾಧಕವಾಯಿತು. ಹೀಗೆ ಸೋತು ಅಪ ಮಾನಿತನಾದ ಮುಹಮ್ಮದಶಹನು ಮುಂದೆ ಮುಖವನ್ನು ಮೇಲಕ್ಕೆ ಎತ್ತಲಿಲ್ಲ. ಈ ಸಂಗ್ರಾಮದಲ್ಲಿ ರಾಯನ ಸೇನಾಪತಿಯಾದ ಮಾಟ್ಲ ಅನಂತನು ಬಹಳ ಪರಾಕ್ರಮವನ್ನು ಮೆರೆಸಿದನು (೧೫೮೬).

ಇತ್ತ ಈ ಸಂಗರವು ನಡೆದಿರುವಾಗಲೆ ರಾಯನು ಉದಯಗಿರಿ ಪ್ರದೇಶದಲ್ಲಿ ಗೋವಳಕೊಂಡದ ಶಕ್ತಿಯನ್ನು ಪ್ರತಿಭಟಿಸಲು ಒಂದು ಲಕ್ಷ ಸೈನ್ಯವನ್ನು ಕಳುಹಿದನು. ಅಷ್ಟರಲ್ಲಿ ಗೋವಳಕೊಂಡದ ಮುರ್ತಜಾಖಾನನು ಕಡಪಾಪ್ರಾಂತದಲ್ಲಿ ಹಾವಳಿಯೆಬ್ಬಿಸಿದುದನ್ನು ಕೇಳಿ ಈ ಸೈನ್ಯದ ಒಂದು ದಳವನ್ನು ಆತನ ಮೇಲೆ ಅಟ್ಟಿದನು. ಇದನ್ನು

ನೋಡಿ ರುಸ್ತುಮಖಾನನು ಮರ್ತಜಾಖಾನನ ಸಹಾಯಕ್ಕೆ ಬಂದನು. ಖಾನದ್ವಯರು ವಿಜಯನಗರದ ಬಲುಹಿನ ಹೊಡೆತಕ್ಕೆ ಈಡಾಗಿ ಜರ್ಜರಿತ ರಾದರು.

ಇದೇ ಸಮಯಕ್ಕೆ ವಿಜಯನಗರದ ಈ ವಿಜಯಗಳಿಂದ ಉತ್ತೇಜಿತರಾದ ಇಲ್ಲಿಯ ನೆರೆಯ ಪ್ರದೇಶದ ಅನೇಕ ಹಿಂದು-ಮಹಮ್ಮದೀಯ ನಾಯಕರು ಮತ್ತು ಜಾಗೀರದಾರರು ಗೋವಳಕೊಂಡದ ವಿರುದ್ಧವಾಗಿ ಬಂಡಾಯವನ್ನು ಹೂಡಿ ವಿಜಯನಗರದ ಆಧಿಪತ್ಯವನ್ನು ಅಂಗೀಕರಿಸಿದರು. ಅವರನ್ನು ಮಣಿಸಲು ಕುತುಬಶಹನು ಕೈಕೊಂಡ ಕ್ರೂರ ಉಪಾಯಗಳೆಲ್ಲ ನಿಷ್ಫಲವಾದುವು. ಇಷ್ಟರಲ್ಲಿ ಕುತುಬಶಹನೊಡನೆ ವಿರೋಧವನ್ನು ಹೂಡಿದ ಕಾಸಿಮಕೊಟ್ಟದ (ವಿಜಗಾಪಟ್ಟಣ ಜಿಲ್ಲೆ) ಮಾಂಡಲಿಕ ಅರಸನಾದ ಮುಕುಂದರಾಜನ ಅವ್ಹಾನವನ್ನು ಸ್ವೀಕರಿಸಿ ರಾಯನು ಎರಡುಲಕ್ಷ ಸೇನೆಯೊಂದಿಗೆ ಕೊಂಡವೀಡು ಪ್ರದೇಶದಲ್ಲಿ ವಿರಾಟವನ್ನು ಹೂಡಿದನು. ಕುತುಬಶಹನು ಆತನನ್ನು ಹಿಮ್ಮೆಟ್ಟಿಸಲು ಮಾಡಿದ ಪ್ರಯತ್ನವು ವ್ಯರ್ಥವಾಯಿತು.

ಈ ಮೇರೆಗೆ ರಾಯನ ಪರಾಕ್ರಮದ ಮುಂದೆ ಎಲ್ಲೆಡೆಯಲ್ಲಿಯೂ ಪರಾಭೂತನಾದ ಶಹನು ಸಂಧಿಯನ್ನು ಯಾಚಿಸಿದನು. ಗೋವಳಕೊಂಡದವರು ಇದುವರೆಗೆ ಗೆದ್ದುಕೊಂಡಿದ್ದ ಕೃಷ್ಣೆಯವರೆಗಿನ ವಿಜಯನಗರದ ಎಲ್ಲ ಪ್ರಾಂತದ ಮೇಲೆ ತನ್ನ ಅಧಿಕಾರ ಹೇಳುವುದನ್ನು ಬಿಡಲೊಪ್ಪಿ ಒಡಂಬಡಿಕೆಯನ್ನು ಮಾಡಿಕೊಂಡನು. ಎಂದಿನಂತೆ ಕೃಷ್ಣೆಯು ಮತ್ತೆ ವಿಜಯನಗರಸಾಮ್ರಾಜ್ಯದ ಉತ್ತರದ ಮೇರೆಯಾಯಿತು.

ಈ ನಡುವೆ ಇಬ್ರಾಹಿಮ ಆದಿಲಶಹನು ಪೂರ್ವಕ್ರಮದಂತೆ ವಿಜಯನಗರದ ಪಶ್ಚಿಮಪ್ರದೇಶಗಳಲ್ಲಿ ಕಿರುಕುಳಗಳನ್ನು ನಡೆಸಿದ್ದನು. ರಾಯನು ಆತನ ಸಮಾಚಾರವನ್ನೊಮ್ಮೆ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿ, ಆತನ ವಿರುದ್ಧವಾಗಿ ಅಹಮದನಗರದ ಬುರ್ಹಾಣ ನಿಜಾಮಶಹನೊಂದಿಗೆ ಸಂಧಾನವನ್ನು ಮಾಡಿದನು. ಇದಕ್ಕೆ ಪ್ರತಿಯಾಗಿ ಆದಿಲಶಹನು ಪೆನುಗೊಂಡದ ಮೇಲೆ ದಾಳಿಯನ್ನು ತಂದನು. ರಾಯನು

ಇದನ್ನು ಇದಿರಿಸಲು ಏಳೂವರೆ ಲಕ್ಷ ಸೈನ್ಯವನ್ನು ಸಿದ್ಧಪಡಿಸಿದನು. ಮಾಟ್ಲ ಅನಂತನು ಸೇನಾಧಿಪತ್ಯವನ್ನು ವಹಿಸಿ ಆದಿಲಶಹನನ್ನು ಪ್ರತಿರೋಧಿಸಿದನು. ಪೆನುಗೊಂಡಕ್ಕೆ ಮೂರು ತಿಂಗಳವರೆಗೆ ಮುತ್ತಿಗೆಯು ಬಿದ್ದಿತು. ವಿಜಾಪುರಪಕ್ಷದ ಬೇಡರ ಹಂಡೆ ತಿಮ್ಮನಾಯಕನು ಒಡೆದು ರಾಯನ ಪಕ್ಷಕ್ಕೆ ಬಂದು ಕೂಡಿದನು. ಕೊನೆಗೆ ಶಹನು ವಿಜಯನಗರದವರ ಹಿಂಸೆಯನ್ನು ತಾಳಲಾರದೆ ಮುತ್ತಿಗೆಯನ್ನು ಕಿತ್ತುಕೊಂಡು ಎದ್ದುಹೋದನು (೧೫೯೨).

ಇಷ್ಟರಲ್ಲಿ ದಕ್ಷಿಣದ ಈ ಮುಹಮ್ಮದೀಯ ರಾಜ್ಯಗಳ ಮೇಲೆ ಒಂದು ದೊಡ್ಡ ಸಂಕಟವು ಉಪಸ್ಥಿತವಾದುದರಿಂದ ಅವರಿಗೆ ಮುಂದೆ ವಿಜಯನಗರದತ್ತ ಹೊರಳಿ ನೋಡುವುದು ಆಗಲಿಲ್ಲ. ದಿಲ್ಲಿಯ ಮೊಗಲ ಸಮ್ರಾಜನಾದ ಅಕಬರನು ಉತ್ತರಭಾರತದ ದಿಗ್ವಿಜಯಗಳನ್ನು ಮುಗಿಸಿಕೊಂಡು ದಕ್ಷಿಣದಿಗ್ವಿಜಯಕ್ಕಾಗಿ ಹೊರಟನು (೧೫೯೩). ಅಹಮುದನಗರದ ಮೇಲೆ ಆತನ ದಾಳಿಗಳು ಆರಂಭವಾಗಿ ಕೊನೆಗೆ ಅಹಮುದನಗರವು ಆತನಿಗೆ ಅಂಕಿತವಾಯಿತು (೧೬೦೦).

ಆಗ ಅಕಬರನು ಅಸಿರಗಡದ ಬಳಿಯಲ್ಲಿರುವಾಗ ರಾಯನ ಓಲಗಕ್ಕೆ ರಾಯಭಾರಿಯನ್ನು ಕಳುಹಿದನು. ರಾಯನು ಅಕಬರನ ಒಗೆಗೆ ಸಾಶಂಕನಾಗಿದ್ದನು. ಈಗ ತನ್ನ ಧರ್ಮಬಾಂಧವರಾದ ಈ ಮುಹಮ್ಮದೀಯ ರಾಜ್ಯಗಳ ಅಭಿಲಾಷೆಯನ್ನು ಹಿಡಿದ ಈತನು, ಅವುಗಳನ್ನು ಗೆದ್ದ ಬಳಿಕ ನಾಳೆ ವಿಜಯನಗರರಾಜ್ಯಕ್ಕೂ ಮುಳುವಾಗದೆ ಇರನು, ಎಂದು ಯೋಚಿಸಿದ ರಾಯನು ಅಕಬರನೊಡನೆ ವಿರೋಧವಾಗಿಯೆ ವರ್ತಿಸಬೇಕು ಎಂದು ನಿರ್ಧರಿಸಿ ಈ ರಾಯಭಾರಿಯು ತಂದ ಕಾಣಿಕೆಗಳನ್ನು ನಿರಾಕರಿಸಿ ಅವನನ್ನು ತಿರುಗಿ ಕಳುಹಿದನು (೧೬೦೦).

ನಾಲ್ಕು ವರ್ಷಗಳಾದ ಬಳಿಕ ದಕ್ಷಿಣದ ದಂಡಯಾತ್ರೆಯಲ್ಲಿ ಅಧಿಕ ಜಯಶಾಲಿಯಾದ ಅಕಬರನು ಇನ್ನೊಂದು ಬಾರಿ ರಾಯನಲ್ಲಿಗೆ ರಾಯಭಾರಿಯನ್ನು ಕಳುಹಿದನು (೧೬೦೪). ಇದೇ ಕಾಲಕ್ಕೆ ದಿಲ್ಲಿಯ ಈ ಗಂಡಾಂತರಕ್ಕೆ ಹೆದರಿದ ಆದಿಲಶಹನು ವಿಜಯನಗರದೊಂದಿಗೆ

ಸ್ನೇಹದ ಸಂಧಾನವನ್ನು ನಡೆಸಿದನು. ಈ ಸಂದರ್ಭದಲ್ಲಿ ಇಲ್ಲಿಯ ಪೋರ್ತುಗೀಜ ರಾಜ್ಯಾಧಿಕಾರಿಯು ಸೂಚಿಸಿದಂತೆ ದಕ್ಷಿಣದ ಸುಲ್ತಾನರೆಲ್ಲರೂ ಒಂದುಗೂಡಿ ವಿಜಯನಗರದ ಬೆಂಬಲವನ್ನು ಪಡೆದು ಆಕ್ರಮಣ ಪರವಾದ ಈ ಮೊಗಲಶಕ್ತಿಯನ್ನು ವಿರೋಧಿಸಬೇಕು ಎಂಬ ಆಲೋಚನೆಯು ತಲೆದೋರಿತು. ಆದರೆ ಅಷ್ಟರಲ್ಲಿ ಅಕಬರನು ಮರಣಹೊಂದಿದುದರಿಂದ ಈ ವಿಚಾರವು ಅಲ್ಲಿಯೆ ಉಳಿಯಿತು.

ಈ ಮೇರೆಗೆ ರಾಯನು ಹೊರಗಿನ ಶತ್ರುಗಳನ್ನು ಪ್ರತಿಭಟಿಸುತ್ತಿರುವಾಗ, ಅತಃಸ್ಥ ಶತ್ರುಗಳ ಹಾವಳಿಯೂ ಹೆಚ್ಚಾಯಿತು. ಸಾಮ್ರಾಜ್ಯದೊಳಗಿನ ಅನೇಕ ಮಾಂಡಲಿಕರೂ ಅರಸರೂ ನಾಯಕರೂ ರಾಯನಿಗೆ ಪಟ್ಟವಾದಂದಿನಿಂದ ವಿರೋಧವನ್ನು ತಾಳಿ ಒಂಡಾಯವನ್ನು ಹೂಡಿ ಅಂತಃಕಲಹದ ಬೇಗೆಯನ್ನು ಹರಡಿಸಿದರು. ರಾಯನು ಒಂದೊಂದಾಗಿ ಇವರೆಲ್ಲರ ಪಾರುಪತ್ಯವನ್ನು ಮಾಡಿ ಸಾಮ್ರಾಜ್ಯದಲ್ಲಿ ಶಾಂತತೆಯನ್ನೂ ವ್ಯವಸ್ಥೆಯನ್ನೂ ಸ್ಥಾಪಿಸಿದನು. ಮಾಟ್ಲ ಅನಂತನು ಈ ಪುಂಡುಗಾರರಲ್ಲಿ ಕೆಲವರಾದ ನಂದ್ಯಾಲ ಕೃಷ್ಣಮನು, ವೆಂಕಟಾದ್ರಿಯ ವೇಲಿಗೌಡನು ಮುಂತಾದವರನ್ನು ಸದೆದಿಕ್ಕಿ ಜಮ್ಮಲಮಡುಗುವಿನ (ಕಡಪಾ ಜಿಲ್ಲೆ) ಯುದ್ಧದಲ್ಲಿ ಜಯಶಾಲಿಯಾಗಿ ಕಟಕಪುರಿಯನ್ನು ವಿಧ್ವಂಸಗೊಳಿಸಿದನು. ತಿಮ್ಮಯ್ಯಮಂತ್ರಿಯೂ ವೇಲುಗೋಟಿ ಪಚಮನಾಯಕನೂ ತಂಜಾವೂರ ನಾಯಕಪುತ್ರನಾದ ರಘುನಾಥನೂ ಅಲ್ಲಲ್ಲಿಯ ದೊಂಬೆಗಳನ್ನು ತಗ್ಗಿಸಲು ರಾಯನಿಗೆ ಬಹಳ ನೆರವಾದರು.

ಕಿರಿಕಿರಿಯರಾದ ಈ ಅರಸರಲ್ಲದೆ ಕೆಲವು ಪ್ರಮುಖ ನಾಯಕರೂ ಬಲಿಷ್ಠರಾದ ಮಂಡಲಾಧಿಪತಿಗಳೂ ರಾಯನಿಗೆ ಪ್ರತಿಕೂಲರಾಗಿ ವರ್ತಿಸಿದರು. ಇಂತಹರಲ್ಲಿ ಮದುರೆಯ ನಾಯಕರು ಅಗ್ರೇಸರರಾದರು. ಇವರು ವಿಜಯನಗರದ ಒಡೆಯರನ್ನು ಕುರಿತು ಅನಿಶ್ಚಿತವಾದ ವೃತ್ತಿಯನ್ನು ಅವಲಂಬಿಸಿ ತಾವು ಕೊಡತಕ್ಕ ಕಪ್ಪವನ್ನು ಆಗಾಗ ನಿರಾಕರಿಸಿದರು. ಅದಕ್ಕಾಗಿ ರಾಯನು ಹಲವು ಸಲ ಮದುರೆಯ ಮೇಲೆ ದಂಡೋಪಾಯಗಳನ್ನು ಕೈಕೊಂಡು ಜಯಶಾಲಿಯಾಗಿ, ಮತ್ತೆಮತ್ತೆ

ಸಾಮ್ರಾಜ್ಯದ ಅಧಿಕಾರವನ್ನು ಪ್ರಸ್ಥಾಪಿಸಿದನು. ಇಂತಹ ಮೊದಲ ನೆಯ ಸಂದರ್ಭವು ವೀರಪ್ಪನಾಯಕನ ಆಳಿಕೆಯಲ್ಲಿ (೧೫೯೫) ಉದ್ಭವಿಸಿತು. ಎರಡನೆಯ ಪ್ರಸಂಗವು ಇಮ್ಮಡಿ ಕೃಷ್ಣಪ್ಪನ ಆಳಿಕೆಯಲ್ಲಿ(೧೫೯೯) ಒದಗಿತು. ಮುಂದೆ ಹನ್ನೆರಡು ವರ್ಷಗಳಾದ ಬಳಿಕ ಮದುರೆಯ ಪಟ್ಟಕ್ಕೆ ಬಂದಿದ್ದ ಮುತ್ತುವೀರಪ್ಪನಾಯಕನು ಮತ್ತೆ ಸಾಮ್ರಾಜ್ಯದ ಕಪ್ಪವನ್ನು ನಿರಾಕರಿಸಿದನು. ಮಾಟ್ಲ ಅನಂತನು ಈತನನ್ನು ಸೋಲಿಸಿ ಮತ್ತೆ ಈತನ ಮೇಲೆ ಕಪ್ಪವನ್ನು ಹೇರಿದನು (೧೬೧೦).

ಎಂದಿಗೂ ಮದುರೆಗಿಂತ ಹೆಚ್ಚು ರಾಜನಿಷ್ಠೆಯಿಂದ ವರ್ತಿಸಿದ ತಂಜಾವೂರ ಅಚ್ಯುತಪ್ಪನಾಯಕನಲ್ಲಿಯೂ ಮುಂದೆ ತನ್ನ ರಾಜ್ಯವನ್ನು ಬೆಳೆಸಬೇಕೆಂಬ ಮಹತ್ವಾಕಾಂಕ್ಷೆಯು ಹುಟ್ಟಿ ಆತನು ಕಂಚಿಯವರೆಗಿನ ಪ್ರದೇಶವನ್ನು ಹಿಡಿದುಕೊಂಡನು (೧೫೯೫). ಅಚ್ಯುತಪ್ಪನ ತರುವಾಯ ಪಟ್ಟಕ್ಕೆ ಬಂದ ರಘುನಾಥನಾಯಕನು ಕೆಲಕಾಲ ರಾಜನಿಷ್ಠೆಯನ್ನು ಪಾಲಿಸಿ ಮುಂದೆ ತಾನೂ ಕಪ್ಪವನ್ನು ನಿರಾಕರಿಸಿದನು (೧೬೦೬). ಮುಂದೆ ನಾಲ್ಕು ವರ್ಷಗಳಾಗಲು ರಾಯನು ಪೋರ್ತುಗೀಜರ ಸೆಂಟ ಥೋಮ ಪಾಳ್ಯಕ್ಕೆ ಮುತ್ತಿಗೆಯನ್ನು ಆರಂಭಿಸಲು, ರಘುನಾಥನು ಪೋರ್ತುಗೀಜರನ್ನು ಕೂಡಿದನು (೧೬೧೦).

ಜಿಂಜಿಯ ಕೃಷ್ಣಪ್ಪನಾಯಕನು,ರಾಯನು ಪಟ್ಟಕ್ಕೆ ಬಂದಕೂಡಲೆ ಬಂಡಾಯವನ್ನು ಹೂಡಿದವರಲ್ಲಿ ಪ್ರಮುಖನಾಗಿದ್ದನು. ಈ ಅಪರಾಧಕ್ಕಾಗಿ ರಾಯನು ಆತನನ್ನು ದಂಡಿಸಿ ಪೆನುಗೊಂಡದ ಸೆರೆಮನೆಯಲ್ಲಿ ತಂದಿರಿಸಿದನು (೧೫೮೬). ಮುಂದೆ ಆತನು ತಂಜಾವೂರ ರಘುನಾಥ ನಾಯಕನ ಮಧ್ಯಸ್ಥಿಕೆಯಿಂದ ಬಿಡುಗಡೆ ಹೊಂದಿ ತನ್ನ ರಾಜ್ಯಕ್ಕೆ ಹೋದನು. ಕೆಲವು ವರ್ಷಗಳಾದ ಬಳಿಕ ಆತನು ವಿಜಯನಗರಕ್ಕೆ ಕೊಡತಕ್ಕ ಕಪ್ಪವನ್ನು ಸಲ್ಲಿಸಲಿಲ್ಲ (೧೬೦೦). ರಾಯನು ಆತನ ಮೇಲೆ ದಂಡಯಾತ್ರೆಯನ್ನು ಕಳುಹುವ ವಿಚಾರದಲ್ಲಿರಲು, ಆತನು ಭ್ರಮಿಷ್ಟನಾದ ವಾರ್ತೆಯು ಬಂದಿತು. ಮುಂದೆ ಇದೊಂದು ಮೋಸವಾಗಿದೆಯೆಂದು ತಿಳಿದು,ರಾಯನು ಏಚಮನಾಯಕನನ್ನು ಆತನ ಶಾಸನಕ್ಕೆ ಕಳುಹಿದನು.

ಕೃಷ್ಣಪ್ಪನಾಯಕನು ದಾರುಣವಾದ ಪರಾಭವ-ಮಾನಹಾನಿಗಳನ್ನು ಅನುಭವಿಸಿ ರಾಯನಿಗೆ ಶರಣಾಗತನಾದನು (ಸು. ೧೬೦೮).

ಜಿಂಜಿಯ ಆಧಿಪತ್ಯಕ್ಕೆ ಒಳಪಟ್ಟ ಚಿಕ್ಕದಾದ ವೆಲ್ಲೂರ ನಾಯಕ ರಾಜ್ಯವು ಇದುವರೆಗೆ ವಿಜಯನಗರಕ್ಕೆ ವಿಧೇಯವಾಗಿಯೆ ಬಾಳಿತ್ತು. ಆದರೆ ಈ ಆಳಿಕೆಯಲ್ಲಿ ಚಿನ್ನಬೊಮ್ಮನಾಯಕನ ತರುವಾಯ ರಾಜ್ಯಕ್ಕೆ ಒಡೆಯನಾದ ಲಿಂಗಮನಾಯಕನು ರಾಯನ ವಿರುದ್ಧವಾಗಿ ದೊಂಬೆ ಯನ್ನು ಹೂಡಿದನು (೧೬೦೩). ಕೂಡಲೆ ರಾಯನ ದಂಡು ಬಂದು ಭದ್ರವಾದ ವೆಲ್ಲೂರು ಕೋಟೆಯನ್ನು ಮುತ್ತಿತು. ಎರಡು ತಿಂಗಳವರೆಗೆ ಮುತ್ತಿಗೆಯೂ ನಡೆಯಿತು. ಲಿಂಗಮನಾಯಕನು ಸೆರೆಸಿಲುಕಿದನು. ಕೋಟೆಯೂ ವಶವಾಯಿತು (೧೬೦೪). ರಾಯನು ದುರ್ಭೇದ್ಯವಾದ ಈ ಸ್ಥಳವನ್ನು ಮುಂದೆ ತನ್ನ ಈ ಪ್ರಾಂತದ ಆಡಳಿತಕ್ಕೆ ಕೇಂದ್ರವಾಗಿ ಮಾಡಿಕೊಂಡನು (೧೬೦೬).

ಅತ್ತ ಸಾಮ್ರಾಜ್ಯದ ಪಶ್ಚಿಮಪ್ರದೇಶದಲ್ಲಿ ಆದಿಲಶಹನು ಎಂದಿ ನಂತೆ ವಿಜಯನಗರದ ಚಿಕ್ಕಚಿಕ್ಕ ಮಂಡಲರಾಜ್ಯಗಳಿಗೆ ಕೈಚಾಚುತ್ತ ತನ್ನ ವರ್ಚಸ್ಸನ್ನು ಬೆಳೆಸುವ ಉದ್ಯೋಗವನ್ನು ಸಣ್ಣಾಗಿ ನಡೆಸಿದ್ದನು. ಈ ಚಿಕ್ಕಚಿಕ್ಕ ಅರಸರಾದರೂ ಒಮ್ಮೆ ಆತನ ಒಡೆತನವನ್ನು ಒಪ್ಪುತ್ತ ಇನ್ನೊಮ್ಮೆ ಆತನ ಅಧಿಕಾರವನ್ನು ನಿರಾಕರಿಸುತ್ತ ಹೊತ್ತುಬಂದಂತೆ ವರ್ತಿಸುತ್ತಿದ್ದರು. ೧೫೯೭-೯೮ರಲ್ಲಿ ಆದಿಲಶಹನು ಕೈಕೊಂಡ ದಂಡೋ ಪಾಯಗಳಿಂದ ಆತನಿಗೆ ಅಂಕಿತರಾದಂತೆ ನಟಿಸಿದ ಈ ಉತ್ತರ ಕನ್ನಡ ಪ್ರಾಂತದ ಅರಸರು ಮುಂದೆ ಆತನ ಲಕ್ಷ್ಯವು ಕಡಿಮೆಯಾಗಲು ಕಪ್ಪ ವನ್ನು ನಿರಾಕರಿಸಿದರು.

ಅವರನ್ನು ಹದಗೊಳಿಸಲು ಬಂದ (೧೫೦೩) ಮಂಜುನಖಾನನು ಆ ಕೆಲಸವನ್ನು ನೆರವೇರಿಸಿ, ಇಲ್ಲಿಯ ನಾಯಕರ ಬೆಂಬಲದಿಂದ ಮೈಸೂರನ್ನು ಮುತ್ತಿ ಹಿಡಿದುಕೊಂಡನು. ಅಷ್ಟರಲ್ಲಿ ಶಹನ ತಮ್ಮನು ಬೆಳಗಾವಿಯಲ್ಲಿ ಬಂಡಾಯವನ್ನು ಎಬ್ಬಿಸಿದುದರಿಂದ ಮಂಜುನಖಾನನು ಅತ್ತ ಹೋಗಬೇಕಾಯಿತು. ಖಾನನು ತೆರಳಿದ ಕೂಡಲೆ ಮೈಸೂರು

ಆತನ ಕೈಬಿಟ್ಟು ಹೋಯಿತು. ಮುಂದೆ ಅಲ್ಪಾವಧಿಯಲ್ಲಿ ಈ ಚಿಕ್ಕ ಚಿಕ್ಕ ಅರಸರು ವಿಜಾಪುರಪ್ರಭುತ್ವದ ವಿರುದ್ಧವಾಗಿ ಅಲ್ಲಲ್ಲಿ ದೊಂಬಿಗಳನ್ನು ಎಬ್ಬಿಸಿ ಆಪ್ರದೇಶದಿಂದ ಮಹಮ್ಮದೀಯರ ಬಲವನ್ನು ಬಡಿದೋಡಿಸಿ ಸ್ವಾತಂತ್ರ್ಯವನ್ನು ಗಳಿಸಿಕೊಂಡರು (೧೫೫೬).

ಅತ್ತ ರಾಯನ ಅಣ್ಣನ ಹಿರಿಯಮಗನಾದ ಇಮ್ಮಡಿ·ತಿರುಮಲನು ಕರ್ನಾಟಕ ವಿಭಾಗದ ಮಹಾಮಂಡಲೇಶ್ವರನಾಗಿ ಶ್ರೀರಂಗಪಟ್ಟಣದಲ್ಲಿ ಆಳುತ್ತಿದ್ದನಷ್ಟೆ. ಹಲವು ಕಾರಣಗಳಿಂದ ಆತನಿಗೂ ರಾಯನಿಗೂ ವೈಮನಸ್ಯವು ಹುಟ್ಟಿ ಬೆಳೆಯಿತು. ಆತನ ತಮ್ಮನಾದ ಶ್ರೀರಂಗನನ್ನು ಪ್ರೀತಿಸುತ್ತಿದ್ದ ರಾಯನಿಗೆ ದಿನದಿನಕ್ಕೆ ಅತನ ಹೆಸರು ಕೂಡ ಅಪ್ರಿಯವಾಯಿತು. ಮದುರೆಯ ವೀರಪ್ಪನಾಯಕನು ೧೫೯೫ರಲ್ಲಿ ಬಂಡಾಯವನ್ನು ಹೂಡಿದಾಗ ರಾಯನು ಆತನ ಶಾಸನಕ್ಕೆ ತಿರುಮಲನನ್ನು ಕಳುಹಿದನು. ಈ ಸಮಯದಲ್ಲಿ ತಿರುಮಲನು ನಾಯಕನಿಂದ ಲಂಚವನ್ನು ತೆಗೆದುಕೊಂಡು ಸರಿಯಾಗಿ ಯುದ್ಧಮಾಡಲಿಲ್ಲವೆಂತಲೂ ಸ್ವಾಮಿ-ದ್ರೋಹವನ್ನು ಬಗೆದನೆಂತಲೂ ಆತನ ಮೇಲೆ ಆರೋಪವು ಹೊರಿಸಲಾಯಿತು.

ಇದಲ್ಲದೆ, ತಿರುಮಲನಿಗೆ ಪ್ರಬಲನಾದ ಪ್ರತಿಸ್ಪರ್ಧಿಯೊಬ್ಬನು ಉಂಟಾಗಿದ್ದನು. ಆತನ ರಾಜಧಾನಿಯ ನೆರೆಯಲ್ಲಿಯೆ ನೆಲೆಸಿದ ಮೈಸೂರ ಪ್ರದೇಶಕ್ಕೆ ದೊರೆಯಾದ ರಾಜಒಡೆಯನು ಪರಾಕ್ರಮಶಾಲಿಯೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಈತನು ಪಟ್ಟಕ್ಕೆ ಬಂದಂದಿನಿಂದ ನೆರೆಯ ನಾಡಿನಲ್ಲಿ ದಾಳಿಗಳನ್ನು ಮಾಡುತ್ತ ತನ್ನ ರಾಜ್ಯವನ್ನು ವಿಸ್ತಾರಗೊಳಿಸುವ ಉದ್ಯೋಗವನ್ನು ನಡೆಸಿದ್ದನು. ಮುಂದೆ ಈತನು ತಿರುಮಲನಿಗೆ ಕೊಡತಕ್ಕ ಕಪ್ಪವನ್ನು ನಿರಾಕರಿಸಿದನು. ಸ್ವತಃ ವೆಂಕಟಪತಿರಾಯನಿಗೆ ಈತನ ಕೃತಿಗಳು ಕೇಡಾಗಿದ್ದಂತೆ ತೋರಲಿಲ್ಲ. ರಾಜಒಡೆಯನ ಬೆಳೆಯುತ್ತಿರುವ ಈ ಶಕ್ತಿಯನ್ನು ತಡೆಯಲಿಕ್ಕೆ ತಿರುಮಲನು ಅಸಮರ್ಥನಾದನು.

ತಿರುಮಲನ ಆಡಳಿತವು ಎಲ್ಲ ರೀತಿಯಿಂದ ಅಯಶಸ್ವಿಯೂ ಅಕೀರ್ತಿಕರವೂ ಆಗುವಂತೆ ಪ್ರಯತ್ನಗಳಾದುವು. ಬಳಿಕ ಈ ಮೇರೆಗೆ

ಹತಬಲನಾಗಿ ತೇಜೋಭಂಗವನ್ನು ಹೊಂದಿದ ತಿರುಮಲನ ರಾಜಧಾನಿಯಾದ ಶ್ರೀರಂಗಪಟ್ಟಣದ ಮೇಲೆ ರಾಜಒಡೆಯನು ಏರಾಟವನ್ನು ಮಾಡಿದನು(೧೬೧೦). ಅಸಹಾಯನಾದ ತಿರುಮಲನು ಶ್ರೀರಂಗಪಟ್ಟಣವನ್ನು ಬಿಟ್ಟು ತೆರಳಿದನು. ಮುಂದೆ ಆತನು ತಲಕಾಡಿಗೆ ಹೋಗಿ ಕೆಲಕಾಲ ಜೀವಿಸಿದನು. ಇಂದಿಗೆ ಹಿರಿಯ ತಿರುಮಲರಾಯನು ಸುಮಾರು ನಾಲ್ವತ್ತು ವರ್ಷಗಳ ಹಿಂದೆ ಸ್ಥಾಪಿಸಿದ ಕರ್ನಾಟಕ ಮಂಡಲಾಧಿಪತ್ಯವು ಸಮಾಪ್ತಿ ಹೊಂದಿತು.

**ಇಂತು ಬರಿದಾದ ಕರ್ನಾಟಕದ ರಾಜಧಾನಿಯಾದ ಶ್ರೀರಂಗಪಟ್ಟಣದಲ್ಲಿಯೂ ಅಲ್ಲಿಯ ಕರ್ನಾಟಕದ ರತ್ನಸಿಂಹಾಸನದ ಮೇಲೆಯೂ ರಾಜಒಡೆಯನು ವಿರಾಜಮಾನನಾದನು. ವಿಜಯನಗರಸಾಮ್ರಾಜ್ಯದ ಅಧಿಕಾರಸೂಚಕವಾದ ಕರ್ನಾಟಕದ ಈ ಸಿಂಹಾಸನವು ಪೂಜ್ಯ ಅವಶೇಷವೆಂದು ಇಂದಿಗೂ ಮೈಸೂರ ಅರಮನೆಯಲ್ಲಿ ಕಾದಿಟ್ಟುದಾಗಿದೆ.**

ರಾಜಒಡೆಯನು ಎಂದಿಗೂ ವೆಂಕಟಪತಿರಾಯನಿಗೆ ವಿಧೇಯನಾಗಿಯೇ ಇದ್ದನು. ರಾಯನು ರಾಜಒಡೆಯನು ಗಳಿಸಿದ ಈ ನೂತನವಾದ ಅಧಿಕಾರವನ್ನು ಮನ್ನಿಸಿ, ಶ್ರೀರಂಗಪಟ್ಟಣದ ಆತನ ಒಡೆತನವನ್ನು ಸ್ಥಿರಗೊಳಿಸುವುದಲ್ಲದೆ ಉಮ್ಮತ್ತೂರನ್ನೂ ಆತನ ವಶಕ್ಕೆ ಒಪ್ಪಿಸಿದನು. ಹೀಗೆ ಅಧಿಕಾರವನ್ನೂ ಸ್ವಾತಂತ್ರ್ಯವನ್ನೂ ಸಾಮರ್ಥ್ಯವನ್ನೂ ಪಡೆದುಕೊಂಡು, ದಿನದಿನಕ್ಕೆ ಪ್ರಭಾವಶಾಲಿಯಾದರೂ ಸಾಮ್ರಾಜ್ಯದೊಡನೆ ಸ್ವಾಮಿನಿಷ್ಠೆಯಿಂದ ನಡೆದುಕೊಂಡು ಬಾಳಿದ ಮೈಸೂರ ಅರಸರಿಂದ ಮುಂದಿನ ವಿಪತ್ಕಾಲದಲ್ಲಿ ಸಾಮ್ರಾಜ್ಯಕ್ಕೆ ಬಹಳ ಪ್ರಯೋಜನವಾಯಿತು.

ಇದೇ ಕಾಲದಲ್ಲಿ ಕರ್ನಾಟಕದ ಭಾಗದಲ್ಲಿ ಇನ್ನೊಂದು ರಾಜ್ಯವು ಮೈಸೂರಂತೆ ತನ್ನ ಶಕ್ತಿಯನ್ನು ಬೆಳೆಸತೊಡಗಿತ್ತು. ಇದು ಇಕ್ಕೇರಿಯು. ಸಣ್ಣ ಸಂಕಣ್ಣನನಂತರ ಆಳಿದ ರಾಮರಾಯನ ತರುವಾಯ ವೆಂಕಟಪ್ಪನಾಯಕನು ಈ ರಾಜ್ಯಕ್ಕೆ ಒಡೆಯನಾಗಿದ್ದನು (೧೫೮೨). ಈತನು ವೆಂಕಟಪತಿರಾಯನಿಗೆ ವಿಧೇಯನಾಗಿಯೇ ಬಾಳಿದರೂ ಮುಂದೆ

ಬರುಬರುತ್ತ ತನ್ನ ದೇಶವನ್ನು ವಿಸ್ತಾರಗೊಳಿಸಿ ಮೈಸೂರ ಅರಸರಿಗೆ ಪ್ರತಿಸ್ಪರ್ಧೆಯನ್ನು ಉಂಟುಮಾಡಿದನು.

ರಾಯನ ಇನ್ನೊಬ್ಬ ಮಾಂಡಲಿಕನಾದ ಏಚಮನಾಯಕನು ಅತ್ಯಂತ ಸ್ವಾಮಿನಿಷ್ಠನಾಗಿ ಅನೇಕ ವಿಧದಿಂದ ಸಾಮ್ರಾಜ್ಯದ ಸೇವೆಯನ್ನು ಮಾಡಿದನು. ಈತನು ಅತಿಶಯ ಬಲಶಾಲಿಯಾಗಿದ್ದು, ಈತನ ಪ್ರಭಾವವು ಅರಿರಾಷ್ಟ್ರಗಳಲ್ಲಿಯೂ ಹಬ್ಬಿತ್ತು. ವಿಜಾಪುರ, ಅಹಮದನಗರ, ಗೋವಳಕೊಂಡದ ಸುಲ್ತಾನರು ಈತನಿಗೆ ಬೆಲೆಯುಳ್ಳ ಕಾಣಿಕೆಗಳನ್ನು ಕಳುಹುತ್ತಿದ್ದರು. ದಿಲ್ಲಿ, ಆಗ್ರಾ, ಅಹಮದನಗರ, ಸಿರಾಜ, ಮಂಡುವಾ, ಬಿದರ, ಮಾಹಿಷ್ಮತಿ ಮೊದಲಾದ ಪಟ್ಟಣಗಳ ಜನರು ಈತನ ಬಗೆಗೆ ವಿಶೇಷವಾದ ಮನ್ನಣೆಯನ್ನು ತಳೆಯುತ್ತಿದ್ದರು ಎಂದು ವರ್ಣಿಸಲಾಗಿದೆ.

ಈ ಕಾಲದಲ್ಲಿ ಪೂರ್ವಪರಿಚಿತರಾದ ಪೋರ್ತುಗೀಜರಲ್ಲದೆ ಡಚ, ಇಂಗ್ಲಿಶ್ ಈ ಪಾಶ್ಚಾತ್ಯ ಜನಾಂಗಗಳು ದಕ್ಷಿಣ ಭಾರತದಲ್ಲಿ ಕಾಲಿಟ್ಟುದರಿಂದ ವಿಜಯನಗರಸಾಮ್ರಾಜ್ಯದೊಡನೆ ಅವರ ಹೊಸ ಸಂಬಂಧಗಳು ಉಂಟಾದುವು.

ಪೋರ್ತುಗೀಜರು ಈಗಾಗಲೆ ಪಶ್ಚಿಮ ದಂಡೆಯ ಮೇಲೆ ಗೋವೆ ಮುಂತಾದ ಪ್ರದೇಶದಲ್ಲಿಯೂ ಪೂರ್ವದಂಡೆಯ ಮೇಲೆ ಮದ್ರಾಸದ ಬಳಿಯಲ್ಲಿ ಸೆಂಟ ಥೋಮ ಪಾಳ್ಯದಲ್ಲಿಯೂ ಸ್ಥಿರವಾಗಿ ಊರಿಕೊಂಡು, ತಮ್ಮ ರಾಜಕೀಯ ಮತ್ತು ವ್ಯಾವಹಾರಿಕ ಕಾರ್ಯಕಲಾಪಗಳ ವ್ಯಾಪವನ್ನು ಬೆಳೆಸತೊಡಗಿದ್ದರು. ಅವರು ಹಿಂದೆ ನೋಡಿದಂತೆ ಸಾಧ್ಯವಾದಲ್ಲಿ ಆಗಾಗ ಇಲ್ಲಿಯ ರಾಜ್ಯತಂತ್ರದಲ್ಲಿ ಕೈಯನ್ನು ಚಾಚುತ್ತಲೂ ಇದ್ದರು. ಈ ಆಳಿಕೆಯಲ್ಲಿ ಅವರು ತಮ್ಮ ಇನ್ನೊಂದು ಉದ್ದೇಶವಾದ ಧರ್ಮಪ್ರಸಾರದ ಉದ್ಯೋಗವನ್ನು ವಿಶೇಷ ಆಸ್ಥೆಯಿಂದ ಪ್ರಾರಂಭಿಸಿದರು. ವಿಶಾಲಹೃದಯನಾದ ರಾಯನು ಕ್ರಿಸ್ತಧರ್ಮೋಪದೇಶಕರನ್ನು ಆದರಪೂರ್ವಕವಾಗಿ ಬರಮಾಡಿಕೊಂಡನು.

ರಾಯನ ಹಾಗೂ ಆತನ ಮಂಡಲಾಧಿಕಾರಿಗಳ ಉದಾರವಾದ ಕೃಪಾದೃಷ್ಟಿಯಿಂದ ಪ್ರೇರಿತರಾದ ಜೆಸೂಟ್ ಪಂಥದ ಪಾದ್ರಿಗಳು

ವೆಲ್ಲೂರು, ಚಂದ್ರಗಿರಿ, ಮದುರೆ, ಜಿಂಜಿ ಮೊದಲಾದ ಸ್ಥಲಗಳಲ್ಲಿ ತಮ್ಮ ಧಾರ್ಮಿಕ ಕೇಂದ್ರಗಳನ್ನು ಸ್ಥಾಪಿಸಿದರು. ಆದರೆ ಇವರ ಧರ್ಮಾಂತರದ ಕಾರ್ಯವು ಮಾತ್ರ ಅತ್ಯಲ್ಪಪ್ರಮಾಣದಲ್ಲಿ ಸಾಧ್ಯವಾಯಿತು. ಸ್ವಧರ್ಮನಿಷ್ಠರೂ ಪರಧರ್ಮಸಹಿಷ್ಣುಗಳೂ ಆದ ಈ ಕಾಲದ ಹಿಂದುಗಳು ಇವರ ಉಪದೇಶಕ್ಕೆ ಆಸ್ಪದಕೊಡುತ್ತಿದ್ದರೂ ಧರ್ಮಾಂತರಕ್ಕೆ ಮಾತ್ರ ಸಿದ್ಧರಾಗುತ್ತಿರಲಿಲ್ಲ. "ನಿಮ್ಮ ಧರ್ಮವು ಸಾಧುವಾಗಿರಬಹುದು. ಆದರೆ ನಮ್ಮ ಧರ್ಮವೂ ಸಾಧುವಾಗಿದೆ. ನಮ್ಮ ಧರ್ಮದಲ್ಲಿಯೂ ನಮಗೆ ಅಂತಿಮಸುಖವು ದೊರೆವುದು. ನಿಮ್ಮದೇನು ಹೆಚ್ಚಿನದು ?" ಎಂಬ ವೃತ್ತಿಯ ಉತ್ತರಗಳನ್ನು ಅವರು ಈ ಧರ್ಮಪ್ರಸಾರಕರಿಗೆ ಕೊಡುತ್ತಿದ್ದರು.

ಹಿಂದುಗಳ ಈ ಪರಂಪರಾಪ್ರೇಮವನ್ನು ಕಂಡುಹಿಡಿದು, ಅವರಿಗೆ ಒಪ್ಪಿಗೆಯಾಗುವಂತೆ ಅವರ ರೀತಿಗಳನ್ನೇ ಆಚರಿಸಿ ಧರ್ಮಾಂತರಕ್ಕೆ ಅವರ ಮನಸ್ಸುಗಳನ್ನು ಒಲಿಸಬೇಕೆಂದು ರಾಬರ್ಟ ದ ನೊಬಿಲಿ ಎಂಬ ಉಪದೇಶಕನು ನಿರ್ಧಾರಮಾಡಿದನು. ಆತನು ಅತ್ಯಂತ ಶುದ್ಧವೂ ಸಾತ್ವಿಕವೂ ಆದ ಬ್ರಾಹ್ಮಣ ಸಂನ್ಯಾಸಿಯ ವೇಷ ಮತ್ತು ಆಹಾರ ವಿಹಾರಗಳನ್ನು ಪೂರ್ಣವಾಗಿ ಅವಲಂಬಿಸಿ, ಸಂಸ್ಕೃತ ಭಾಷೆಯನ್ನೂ ಧರ್ಮಗ್ರಂಥಗಳನ್ನೂ ಚೆನ್ನಾಗಿ ಅಧ್ಯಯನಮಾಡಿ, ಮದುರೆಯಲ್ಲಿ ೫೪ ವರ್ಷಗಳ ವರೆಗೆ ( ೧೬೦೬–೬೦ ) ಧರ್ಮಪ್ರಸಾರದ ಕಠೋರವಾದ ವ್ರತವನ್ನು ಆಚರಿಸಿದನು. ಇಷ್ಟಾದರೂ ಆತನ ಮನೋರಥವು ಸಫಲವಾಗಲಿಲ್ಲ. ಕೆಳಗಿನ ಜಾತಿಯ ಕೆಲವು ಹಿಂದುಗಳಲ್ಲದೆ ಉಚ್ಚವರ್ಣದವರು ಯಾರೂ ಆತನ ಧರ್ಮಬೋಧೆಗೆ ಒಳಗಾಗಲಿಲ್ಲ !

ರಾಯನು ಪೋರ್ತುಗೀಜರೊಡನೆ ಸಾಮಾನ್ಯವಾಗಿ ಸಖ್ಯದಿಂದಲೆ ವರ್ತಿಸಿದನು. ಆದರೆ ಪೋರ್ತುಗೀಜರು ಮಾತ್ರ ಮಹತ್ವಾಕಾಂಕ್ಷೆಯಿಂದಲೂ ಅವಿವೇಕದಿಂದಲೂ ಕೆಲವು ಸಲ ಅತಿಕ್ರಮಗಳನ್ನು ನಡೆಸಿದರು. ಆದುದರಿಂದ ರಾಯನು ಅವರ ಮೇಲೆ ಮುನಿವ ಸಂದರ್ಭಗಳು ಉಂಟಾದುವು. ಪೋರ್ತುಗೀಜರು ಮದ್ರಾಸದ ಹಿಂದು ಅಧಿಕಾರಿಯನ್ನು ಹಿಂಸಿಸಿದುದಕ್ಕೆ ರಾಯನು ಅವರ ಮೇಲೆ ಕಿಡಿಕಿಡಿಯಾಗಿ

ಅವರ ಪಾಳ್ಯವನ್ನು ವಿಧ್ವಂಸಮಾಡಲು ಉದ್ಯುಕ್ತನಾದನು (ಸು. ೧೬೦೭). ಆದರೆ ಮುಂದೆ ಆತನ ಕೋಪವು ಶಾಂತವಾಯಿತು. ಮುಂದೆ ಇಂತಹ ಇನ್ನೊಂದು ಪ್ರಸಂಗವು ಒದವಿತು (೧೬೧೧).

ಈ ಕಾಲದಲ್ಲಿ ರಾಯನ ರಾಜ್ಯಕ್ಕೆ ಬಂದ ಡಚ, ಮತ್ತು ಇಂಗ್ಲಿಶ್ ವರ್ತಕರು ವ್ಯಾಪಾರದ ಪಾಳ್ಯಗಳನ್ನು ಸ್ಥಾಪಿಸುವ ಪ್ರಯತ್ನವನ್ನು ನಡೆಸಿದರು. ಆದುದರಿಂದ ಪೋರ್ತುಗೀಜರಿಗೂ ಅವರಿಗೂ ಸ್ಪರ್ಧೆಯುಂಟಾಗಿ ರಾಯನ ವಿಷಯದಲ್ಲಿ ಪೋರ್ತುಗೀಜರ ಮನಸ್ಸುಗಳು ಕಲುಷಿತವಾದುವು. ರಾಯನಿಗೆ ಬೇಕಾಗುವ ಯುದ್ಧಸಾಮಗ್ರಿಯನ್ನು ಯುರೋಪದಿಂದ ಒದಗಿಸಿ ಕೊಡುವೆವು ಎಂಬ ಒಡಂಬಡಿಕೆಯಿಂದ ಡಚರು ಪುಲಿಕತ ಬಂದರದಲ್ಲಿ ನೆಲೆಸಲು ಅಪ್ಪಣೆಯನ್ನು ಪಡೆದುಕೊಂಡರು (೧೬೦೬). ಮರುವರ್ಷ ಇಂಗ್ಲಿಶರು ಮಛಲಿಪಟ್ಟಣದಲ್ಲಿ ನೆಲೆಯಾದರು ( ೧೬೦೭ ). ಪರಕೀಯರು ಹೀಗೆ ರಾಯನ ಆಶ್ರಯ ಪಡೆಯುತ್ತಿದ್ದುದನ್ನು ಕಂಡು ಪೋರ್ತುಗೀಜರ ಮತ್ಸರಾಗ್ನಿಯು ಪ್ರಜ್ವಲಿತವಾಯಿತು. ಅವರು ಡಚರ ಪುಲಿಕತದ ಪಾಳ್ಯವನ್ನು ಧ್ವಂಸ ಮಾಡಿದರು (೧೬೧೨). ಆದರೆ ಮುಂದೆ ರಾಯನ ಬೆಂಬಲದಿಂದ ಪೋರ್ತುಗೀಜರನ್ನು ಹಿಮ್ಮೆಟ್ಟಿಸಿ, ಡಚರು ಮತ್ತೆ ಅದನ್ನು ಹಿಡಿದುಕೊಂಡರು (೧೬೧೪). ಪುಲಿಕತದಲ್ಲಿ ಕಾಲೂರಲು ಇಂಗ್ಲಿಶರೂ ಪ್ರಯತ್ನಿಸಿದರು; ಆದರೆ ಅವರಿಗೆ ಯಶವು ದೊರೆಯಲಿಲ್ಲ. ಹೀಗೆ ಡಚರು ಪುಲಿಕತದಲ್ಲಿ ಸ್ಥಾಪಿತವಾದುದರಿಂದ ಪೋರ್ತುಗೀಜರ ವಶದಲ್ಲಿದ್ದ ಪುಲಿಕತದ ನಾಮಾಂಕಿತ ಬಟ್ಟೆಯು ಮೊದಲಾದ ವ್ಯಾಪಾರವೆಲ್ಲವೂ ಅವರ ಕೈಯಲ್ಲಿ ಹೋಗಿ ಅವರು ಬಹಳ ಧನಾಢ್ಯರಾದರು.

———

## ಇಪ್ಪತ್ತುಮೂರನೆಯ ವಿಲಾಸ

# ೩. ವೆಂಕಟಪತಿದೇವರಾಯ (೧೫೮೫-೧೬೧೪)

೨

## ಶೀಲ — ಸ್ವಭಾವ — ಕರ್ತೃತ್ವ

ವೆಂಕಟಪತಿದೇವರಾಯನ ಆಳಿಕೆಯಲ್ಲಿ ಪೆನುಗೊಂಡವೆ ಸಾಮ್ರಾಜ್ಯದ ಅಧಿಕೃತವಾದ ರಾಜಧಾನಿಯಾಗಿದ್ದಿತು. ಆದರೆ ಹಿಂದೆ ರಾಯನು ತಮಿಳು ನಾಡಿನ ಮಂಡಲೇಶ್ವರನಾಗಿರುವಾಗ ಚಂದ್ರಗಿರಿಯಲ್ಲಿ ಬಹು ಕಾಲ ನೆಲಸಿದ್ದುದರಿಂದಲೂ ರಾಯನ ಆರಾಧ್ಯದೈವತವಾದ ಶ್ರೀವೆಂಕಟೇಶನ ಸ್ಥಾನವಾದ ತಿರುಪತಿಯ ಸಾನ್ನಿಧ್ಯದ ಮೂಲಕವೂ ಚಂದ್ರಗಿರಿಯು ರಾಯನ ಪ್ರೀತಿಯ ನಿವಾಸವಾಯಿತು. ೧೫೯೭ರಿಂದ ಆತನು ಬಹುಶಃ ಚಂದ್ರಗಿರಿಯಲ್ಲಿಯೆ ಕಾಲವನ್ನು ಕಳೆಯುತ್ತಿದ್ದನು. ಗಿರಿರಾಜಿಯಿಂದ ಸುರಕ್ಷಿತವಾಗಿ ದುರ್ಭೇದ್ಯವಾದ ಈ ಪಟ್ಟಣವು ಎಂದಿನಿಂದಲೂ ಸಾಮ್ರಾಜ್ಯದ ಪ್ರಮುಖ ಕೇಂದ್ರಸ್ಥಳವಾಗಿದ್ದಿತು. ಹಿಂದಿನ ವಿಜಯನಗರದ ಅರಸರು ಇಲ್ಲಿಯ ದುರ್ಗವನ್ನು ಭದ್ರವಾಗಿ ಇರಿಸಿದ್ದರು.

ಅಂತೆಯೆ ರಾಕ್ಷಸತಂಗಡಿಯ ವಿಪ್ಲವದಿಂದ ಪಾರಾದ ತಿರುಮಲ-ವೆಂಕಟಾದ್ರಿಗಳು ಮೊದಲು ಇಲ್ಲಿಗೆ ಪ್ರಯಾಣ ಬೆಳೆಸಿದರು. ವಿಪತ್ಕಾಲದಲ್ಲಿ ಇದು ವಿಜಯನಗರದ ಅರಸರ ಆಶ್ರಯಸ್ಥಾನವಾಗಿ ಎಣಿಸಲಾಗುತ್ತಿತ್ತು. ರಾಯನ ಪ್ರೀತಿಪಾತ್ರವಾದ ಈ ಪಟ್ಟಣಕ್ಕೆ ಈ ಕಾಲದಿಂದ ಎರಡನೆಯ ರಾಜಧಾನೀಸ್ಥಳದ ಸೌಭಾಗ್ಯವು ಪ್ರಾಪ್ತವಾಯಿತು. ಈ ಕಾರಣದಿಂದಲೆ ಮುಂದೆ ಈ ವಿಜಯನಗರದ ನಾಲ್ಕನೆಯ ಮನೆತನದ ಅರಸರಿಗೆ ಚಂದ್ರಗಿರಿಯ ಅರಸರು ಎಂಬ ಅಯಥಾರ್ಥವಾದ ಹೆಸರು ಬಳಕೆಯಲ್ಲಿ ಬಂದಿತು. ಚಂದ್ರಗಿರಿಯಲ್ಲದೆ, ವೆಲ್ಲೂರನ್ನು ಗೆದ್ದುಕೊಂಡ ಬಳಿಕ, ರಾಯನು ಅಲ್ಲಿಯೂ ಆಗಾಗ ಇರಲಾರಂಭಿಸಿದನು (೧೬೦೬).

ಶಾಂತಿಪ್ರಧಾನವಾದ ರಾಯನ ಆಳಿಕೆಯು ಧರ್ಮ, ವಿದ್ಯೆ, ಸಾಹಿತ್ಯ, ಕಲೆ ಇವುಗಳ ಬೆಳವಣಿಗೆಯ ಪ್ರಚಾರದಿಂದ ವಿಜಯನಗರದ ಇತಿಹಾಸದಲ್ಲಿ ಚಿರಸ್ಮರಣೀಯವಾಗಿದೆ. ಕೃಷ್ಣದೇವರಾಯ—ಅಚ್ಯುತ ರಾಯರ ಕಾಲದಿಂದ ವಿಶೇಷ ಪ್ರಮಾಣದಲ್ಲಿ ವೃದ್ಧಿಂಗತವಾಗುತ್ತಲಿರುವ ಶ್ರೀವೈಷ್ಣವಮತದ ಪ್ರಸಾರವೂ ತಿರುಪತಿಯ ಶ್ರೀವೆಂಕಟೇಶ ಭಕ್ತಿಯೂ ಈ ಆಳಿಕೆಯಲ್ಲಿ ಪರಮಾವಧಿಯನ್ನು ಹೊಂದಿದುವು. ಸ್ವತಃ ರಾಯನಿಂದಲೂ ಮಧುರೆ, ಜಿಂಜಿ, ಮೊದಲಾದ ಮಾಂಡಲಿಕ ಅರಸರಿಂದಲೂ ಇವುಗಳು ಪ್ರೋತ್ಸಾಹ-ಪೋಷಣೆಗಳನ್ನು ಪಡೆದುವು. ರಾಯನು ಉಜ್ವಲ ಶ್ರೀವೈಷ್ಣವಮತನಿಷ್ಠನೂ ವಿಷ್ಣುಭಕ್ತನೂ ಆಗಿದ್ದನು. ಆದರೂ ಆತನ ಉದಾರವಾದ ಧರ್ಮಭಾವನೆಯ ಮೂಲಕ ಮಾಧ್ವ, ಶಾಂಕರ, ವೀರಶೈವ, ಜೈನ, ಕ್ರೈಸ್ತ ಮೊದಲಾದ ಅನ್ಯಧರ್ಮಮತಗಳೂ ಆತನ ರಾಜ್ಯದಲ್ಲಿ ಪೋಷಣೆಯನ್ನು ಪಡೆದು ಸುಖವಾಗಿ ಬಾಳಿದುವು. ಈ ಕಾಲದಲ್ಲಿ ತಿರುಪತಿ ಮೊದಲಾದ ಅನೇಕ ಪ್ರಸಿದ್ಧ ದೇವಸ್ಥಾನಗಳಲ್ಲದೆ, ಬೇರೆ ಧರ್ಮ–ಮತಗಳ ಸಂಸ್ಥೆಗಳು, ಗುರುಗಳು, ಉಪದೇಶಕರು ದಾನ, ಬಹುಮಾನ ಮೊದಲಾದ ರೂಪದಿಂದ ಆಶ್ರಯ-ಆದರಗಳನ್ನು ಸಂಪಾದಿಸಿದರು.

ಧರ್ಮದಂತೆ ವಿದ್ಯೆಯಲ್ಲಿಯೂ ರಾಯನಿಗೆ ವಿಶೇಷವಾದ ಆಸಕ್ತಿಯಿದ್ದಿತು. ರಾಯನು ಒಳ್ಳೆಯ ವಿದ್ಯಾವಂತನೂ ಬಹುಶ್ರುತನೂ ತತ್ತ್ವಜಿಜ್ಞಾಸುವೂ ಗುಣಗ್ರಾಹಿಯೂ ಮರ್ಮಜ್ಞನೂ ಆಗಿದ್ದನು. ಆತನು ತನ್ನ ಆಸ್ಥಾನದಲ್ಲಿ ಅನೇಕ ಪಂಡಿತರನ್ನೂ ಸಾಹಿತಿಗಳನ್ನೂ ಬರಮಾಡಿಕೊಳ್ಳುತ್ತಿದ್ದನು. ಕ್ರೈಸ್ತ ಧರ್ಮೋಪದೇಶಕರಿಗೂ ಆತನು ಸ್ವಾಗತವಿತ್ತನು. ಇವರೆಲ್ಲರೂ ನಿತ್ಯವೂ ನಡೆಸುವ ಧರ್ಮ, ತತ್ತ್ವಜ್ಞಾನ, ಕಾವ್ಯ, ಶಾಸ್ತ್ರ ಮೊದಲಾದ ಅನೇಕ ಗೋಷ್ಠಿಗಳಲ್ಲಿಯೂ ಚರ್ಚೆಗಳಲ್ಲಿಯೂ ಆತನು ಉತ್ಸಾಹದಿಂದ ಭಾಗಿಯಾಗುತ್ತಿದ್ದನು. ಆತನು ವೇದ, ಶಾಸ್ತ್ರ, ಸಾಹಿತ್ಯ ಮೊದಲಾದ ವಿದ್ಯೆಗಳಲ್ಲಿ ಪಾರಂಗತರಾದ ಅನೇಕ ಪಂಡಿತರಿಗೆ ಹೇರಳವಾಗಿ ವೃತ್ತಿಗಳನ್ನು ಕಲ್ಪಿಸಿಕೊಟ್ಟನು.

ರಾಮಾನುಜ ಮತೀಯ ಆಚಾರ್ಯರೂ ಮಹಾನ್ ಪಂಡಿತರೂ

ಸಾತ್ವಿಕ ಬ್ರಹ್ಮವಿದ್ಯಾವಿಲಾಸ ಎಂಬ ತತ್ತ್ವಜ್ಞಾನಗ್ರಂಥದ ಕರ್ತರೂ ಆದ ತಾತಾಚಾರ್ಯರು ರಾಯನಿಗೆ ರಾಜಗುರುಗಳಾಗಿದ್ದರು. ಸುಪ್ರಸಿದ್ಧ ಅದ್ವೈತಿಯೂ ನೂರಾರು ಸಂಸ್ಕೃತ ಗ್ರಂಥಗಳನ್ನು ರಚಿಸಿದವನೂ ಆದ ಅಪ್ಪಯ್ಯ ದೀಕ್ಷಿತನು ರಾಯನಿಂದ ಮನ್ನಣೆಯನ್ನು ಪಡೆದು, ಆತನ ಪ್ರೇರಣೆಯಿಂದ ಕುವಲಯಾನಂದ ಎಂಬ ಅಲಂಕಾರಗ್ರಂಥವನ್ನು ಬರೆದನು. ವೆಂಕಟಾರ್ಯನಿಂದ ರಚಿತವಾದ ವೆಂಕಟೇಶಮಾಹಾತ್ಮ್ಯವು ಈ ಕಾಲದಲ್ಲಿ ಹುಟ್ಟಿತು. ಮಾಧ್ವಯತೀಯ ಸುಮತೀಂದ್ರಮಠದ ಗುರುಗಳೂ ಘನವಿದ್ವಾಂಸರೂ ಆದ ಸುಧೀಂದ್ರತೀರ್ಥರು ರಾಯನಿಂದ ಸತ್ಕೃತರಾದರು. ರಾಯನ ಕಡುಗಲಿ ಸೇನಾನಿಯಾದ ಮಾಟ್ಲ ಅನಂತನು ಒಳ್ಳೆಯ ಕವಿಯಾಗಿದ್ದು ಕಕುತ್ಸ್ಥವಿಜಯಂ ಎಂಬ ತೆಲುಗು ಕಾವ್ಯವನ್ನು ಬರೆದನು. ತೆಲುಗು ಕವಿಯೂ ಸುಪ್ರಸಿದ್ಧ ವಿಕಟಹಾಸ್ಯಗಾರನೂ ಆದ ತೆನ್ನಾಲಿ ರಾಮಕೃಷ್ಣನು ಲಿಂಗಪುರಾಣ, ಪಾಂಡುರಂಗ-ಮಾಹಾತ್ಮ್ಯವು ಇವುಗಳನ್ನು ಬರೆದನು. ಈತನು ಕೃಷ್ಣದೇವರಾಯನ ಕಾಲದಿಂದ ಈ ಆಳಿಕೆಯವರೆಗೆ ಜೀವಿಸಿದ್ದನು ಎಂದು ಹೇಳುತ್ತಾರೆ. ಶಬ್ದಾನುಶಾಸನ ಎಂಬ ಸುಪ್ರಸಿದ್ಧ ಕನ್ನಡ ವ್ಯಾಕರಣದ ಕರ್ತನೂ ಜೈನ ಪಂಡಿತನೂ ಆದ ಭಟ್ಟಾಕಳಂಕನು ರಾಯನಿಂದ ಪೋಷಿತನಾದನು.

ರಾಯನ ಅನೇಕ ಮಾಂಡಲಿಕರ ರಾಜಧಾನಿಗಳೂ ವಿದ್ಯೆ-ಸಾಹಿತ್ಯಗಳ ನೆಲೆವೀಡುಗಳಾಗಿದ್ದುವು. ಮದುರೆಯು ದಕ್ಷಿಣ ಪ್ರಾಂತದಲ್ಲಿ ವಿದ್ಯೆಯ ಕೇಂದ್ರವಾಗಿದ್ದಿತು. ಇಲ್ಲಿ ಅನೇಕವಿದ್ಯಾಪಾರಂಗತರಾದ ಅನೇಕ ಪಂಡಿತರೂ ಹತ್ತುಸಾವಿರ ವಿದ್ಯಾರ್ಥಿಗಳೂ ಇದ್ದು, ಉಚ್ಚತರ ಗತಿಯ ಅಧ್ಯಯನವು ನಡೆಯುತ್ತಿತ್ತು. ತಂಜಾವೂರ ಆಸ್ಥಾನವು ವಿದ್ಯೆ-ಕಲೆಗಳ ತವರುಮನೆಯಾಗಿ ಶೋಭಿಸುತ್ತಿತ್ತು. ಮಾಧ್ವಯತಿಗಳೂ ಉನ್ನತಪಂಡಿತರೂ ಅಪ್ಪಯ್ಯ ದೀಕ್ಷಿತನ ಪ್ರತಿಸ್ಪರ್ಧಿಗಳೂ ಆದ ವಿಜಯೀಂದ್ರತೀರ್ಥರು ತಂಜಾವೂರ ನಾಯಕರಿಂದ ಸನ್ಮಾನಿತರಾದರು. ಅಚ್ಯುತ-ರಘುನಾಥ ನಾಯಕರ ವಿದ್ವಾನ್ ಮಂತ್ರಿಯಾದ ಗೋವಿಂದ ದೀಕ್ಷಿತನು ಅದ್ವೈತ ವೇದಾಂತ ಮತ್ತು ದರ್ಶನಗಳಲ್ಲಿ ಪ್ರಮಾಣ ಪುರುಷನಾಗಿದ್ದು ಸಾಹಿತ್ಯಸುಧಾ ಮೊದಲಾದ ಅನೇಕ ಗ್ರಂಥಗಳನ್ನು

ಬರೆದನು. ಸ್ವತಃ ರಘುನಾಥನಾಯಕನು ವಿದ್ಯಾಪೋಷಕನೂ ಕಲಾವಿದನೂ ಕವಿಯೂ ಗ್ರಂಥಕಾರನೂ ಆಗಿದ್ದನು. ಗೋವಿಂದ ದೀಕ್ಷಿತನ ಮಗನೂ ಸಂಸ್ಕೃತದಲ್ಲಿ ಸಾಹಿತ್ಯರತ್ನಾಕರ ಎಂಬ ಐತಿಹಾಸಿಕ ಕಾವ್ಯವನ್ನು ಬರೆದವನೂ ಆದ ಯಜ್ಞನಾರಾಯಣ ದೀಕ್ಷಿತನು ರಘುನಾಥನಾಯಕನ ಶಿಷ್ಯನಾಗಿದ್ದನು. ಈತನ ಶಿಷ್ಯೆಯಾದ ಕವಯಿತ್ರೀ ರಾಮಭದ್ರಾಂಬೆಯು ಸಂಸ್ಕೃತದಲ್ಲಿ ರಘುನಾಥಾಭ್ಯುದಯಂ ಎಂಬ ಈತನ ಚರಿತ್ರಾತ್ಮಕ ಕಾವ್ಯವನ್ನು ಬರೆದಿರುವಳು.

ಈ ಕಾಲದಲ್ಲಿ ಮೈಸೂರು ಪ್ರಾಂತದಲ್ಲಿ ವೀರಶೈವ, ಜೈನ ಮೊದಲಾದ ಅನೇಕ ಕವಿಗಳು ಉದಯಿಸಿ ಕನ್ನಡಸಾಹಿತ್ಯವನ್ನು ಬೆಳೆಸಿದರು. ಇವರಲ್ಲಿ ವೀರಶೈವರು ಹೆಚ್ಚು. ವಿಖ್ಯಾತ ಚೆನ್ನಬಸವಪುರಾಣಕಾರನಾದ ವಿರೂಪಾಕ್ಷಪಂಡಿತನು ಸುಮಾರು ಇದೇ ಕಾಲದಲ್ಲಿ ಬಾಳಿದನು (೧೫೮೪).

ಈ ಕಾಲದಲ್ಲಿ ರಾಯನ ಆಸ್ಥಾನದಲ್ಲಿಯೂ ಮದುರೆ, ತಂಜಾವೂರು ಮೊದಲಾದೆಡೆಯ ರಾಜಾಶ್ರಯದಲ್ಲಿಯೂ ಸಂಗೀತ ಮೊದಲಾದ ಕಲೆಗಳು ಪೋಷಿತವಾದಂತೆ, ರಾಯನ ವಿಶಿಷ್ಟವಾದ ಅಭಿರುಚಿಯ ಮೂಲಕ ಚಿತ್ರಕಲೆಯೂ ರಾಜಾಶ್ರಯವನ್ನು ಪಡೆದಿತು. ಗುಣಪಕ್ಷಪಾತಿಯಾದ ರಾಯನು ಜೆಸೂಟ್ ಧರ್ಮೋಪದೇಶಕರೊಡನೆ ತನ್ನ ಓಲಗಕ್ಕೆ ಬಂದ ಪಾಶ್ಚಾತ್ಯ ಚಿತ್ರಕಾರರಿಗೂ ಚಿತ್ರಕಲೆಗೂ ತಕ್ಕುದಾದ ಮನ್ನಣೆಯನ್ನಿತ್ತನು. ಅಲೇಕ್ಸಾಂಡರ ಫ್ರೇ ಎಂಬ ಆಂಗ್ಲ ಚಿತ್ರಕಾರನು ಮತ್ತು ಬಾರ್ಟೋಲೋಮಿಯೊ ಫಾಂಟೆಬೊನಾ ಎಂಬ ಇಟಾಲಿಯನ ಚಿತ್ರಕಾರನು ತಮ್ಮ ಕಲಾನೈಪುಣ್ಯದಿಂದ ರಾಯನ ಹೃದಯವನ್ನು ಸೆಳೆದುಕೊಂಡರು.

ಫ್ರೇನ ತರುವಾಯ ಫಾಂಟೆಬೊನಾ ಈತನು ರಾಯನ ಆಸ್ಥಾನದಲ್ಲಿ ಪ್ರವೇಶಮಾಡಿದನು. ರಾಯನು ಈತನ ಚಿತ್ರಕಲಾಚಾತುರಿಯನ್ನು ನೋಡಿ ಕೌತುಕಪಟ್ಟು, ಈತನೊಡನೆ ವಿಶೇಷವಾದ ಸಖ್ಯವನ್ನು ಬಳಸಿದನು. ರಾಯನು ಈತನ ಕೈಯಿಂದ ತನ್ನ ಸ್ವಂತದ ಒಂದು



ವಿಜಯನಗರ ಅರಸರ ಅರಮನೆ

ಚಂದ್ರಗಿರಿ

ಪೂರ್ಣ ಚಿತ್ರಾಕೃತಿಯನ್ನು ಬರೆಸಿದನು. ಯೇಸೂಕ್ರಿಸ್ತನ ಅವತಾರದ ಸಂನಿವೇಶವನ್ನು ಕುರಿತು ಈತನಿಂದ ರಚಿತವಾದ ಒಂದು ಸುಂದರವಾದ ಚಿತ್ರಪಟವನ್ನು ತನ್ನ ಸಭಾಮಂದಿರದೊಳಗೆ ಪ್ರಮುಖ ಸ್ಥಾನದಲ್ಲಿ ಇರಿಸಿದನು. ಇದಕ್ಕಾಗಿ ಅಸಹ್ಯಪಟ್ಟು ತನ್ನನ್ನು ಪ್ರಶ್ನಿಸಿದ ಪಂಡಿತರನ್ನು ಕುರಿತು ರಾಯನು ಹೇಳಿದ ಉತ್ತರವು ಮನಸೆಳೆಯುವಾಗಿದೆ: "ಇಕೊ! ಈಗ ನಾನೂ ನೀವೂ ಕುಳಿತ ಈ ರತ್ನಗಂಬಳಿಯು ಎಲ್ಲಿಂದ ಬಂದಿದೆ? ಅವರ ದೇಶದಿಂದಲೆ ಅಲ್ಲವೆ? ಇದಕ್ಕಾಗಿ ನಿಮಗೆ ಆಕ್ಷೇಪಣೆಯಿಲ್ಲವಾದರೆ, ಪಾಪ! ಆ ಭಾವಚಿತ್ರವೆ ಏನು ಮಾಡಿದೆ! ಅಷ್ಟೇಕೆ? ಮಹಾಸ್ವಾಮಿಗಳೆ, ಈ ನಿಮ್ಮ ಮಸ್ತಕವನ್ನು ಭೂಷಿಸುತ್ತಲಿರುವ ಈ ಮಖಮಲ್ಲಿನ ಟೊಪ್ಪಿಗೆಯಾದರೂ ಅವರ ದೇಶದಿಂದ ಬಂದುದು ಆಗಿಲ್ಲವೆ?"

ರಾಯನು ರೂಪದಿಂದ ಬಹು ಸುಂದರನು. ನೀಳವಾದ ಕಣ್ಣುಗಳು. ಮೈಬಣ್ಣವು ಸ್ವಲ್ಪ ಸಾದಗಪ್ಪಿನ ಮೇಲೆ. ನಿಲುವಿಕೆಯು ಮಧ್ಯಮ. ದೇಹಯಷ್ಟಿಯು ಸುದೃಢವೂ ಪ್ರಮಾಣಬದ್ಧವೂ ಆದುದು. ಉಡುಪು ತೊಡುಪುಗಳು ಬಹು ಸೊಗಸಿನವು. ರಾಜಠೀವಿಯೂ ಗಾಂಭೀರ್ಯವೂ ಆತನಿಗೆ ಬಹಳ ಸೇರುತ್ತಿದ್ದಿತು. ಆದರೂ ಆತನ ನಡೆನುಡಿಗಳಲ್ಲಿ ಒಂದು ಬಗೆಯ ಸರಲತೆಯೂ ಮೋಹಕತೆಯೂ ನೆಲೆಗೊಂಡಿತ್ತು. ವಿಶಾಲವಾದ ಹೃದಯವು; ಬಹು ಉದಾರವಾದ ಸ್ವಭಾವವು. ರಾಯನು ಶೀಲಸಂಪನ್ನನಾಗಿದ್ದನು. ಆತನ ಚಾರಿತ್ರ್ಯವು ಉದಾತ್ತವಾದುದು. ಮೇಲೆ ವಿವರಿಸಿದ ಇಟಾಲಿಯನ ಚಿತ್ರಕಾರನಾದ ಫಾಂಟಿಬೋನಾ ಈತನು ಆತನನ್ನು ಕುರಿತು ಹೀಗೆ ಹೇಳುವನು: "ಈತನು ಮಹಾಶಕ್ತಿಶಾಲಿಯೂ ವಿಶೇಷಬುದ್ಧಿವಂತನೂ ಬಹು ವಿವೇಕಸಂಪನ್ನನೂ ಆದ ದೊರೆಯು. ಯುರೋಪದ ಬೇಕಾದ ಅರಸನನ್ನು ಸರಿದೂಗಬಲ್ಲನು."[೧]

ರಾಯನಿಗೆ ತಿರುಪತಿಯ ಶ್ರೀವೆಂಕಟೇಶನಲ್ಲಿ ಅತಿಶಯವಾದ ಭಕ್ತಿ-

---

೧. "A lord of great authority, prudence and understanding as much as any European." A. D. P. 509.

ಯಿದ್ದಿತು. ಈ ವೆಂಕಟೇಶಭಕ್ತಿಯು ವಿಜಯನಗರದ ಅರಸರಲ್ಲಿ ಸಾಳುವ ನರಸಿಂಹರಾಯನನ್ನು ಮೊದಲುಗೊಂಡು ನಡೆದುಬಂದುದಾಗಿದ್ದಿತು. ಕೃಷ್ಣದೇವರಾಯ, ಅಚ್ಯುತರಾಯ, ತಿರುಮಲರಾಯ ಮೊದಲಾದವರು ಇತರ ದೇವರುಗಳಿಗೆ ಆದರವನ್ನು ತೋರಿಸುತ್ತಿರುವಾಗಲೂ ತಮ್ಮ ವೆಂಕಟೇಶಭಕ್ತಿಯನ್ನು ಅನೇಕ ಪರಿಯಿಂದ ಪ್ರಕಟಪಡಿಸಿರುವರು.

ಈ ಮೇರೆಗೆ ಸಂಗಮರ ಕಾಲಕ್ಕೆ ಅರಸುಮನೆತನದಲ್ಲಿ ಪ್ರಬಲವಾಗಿದ್ದ ಶಿವನಿಷ್ಠೆಯು ಮುಂದಿನ ಮನೆತನಗಳಲ್ಲಿ ಕಡಿಮೆಯಾಗಿ, ಅದರ ಸ್ಥಳದಲ್ಲಿ ವಿಷ್ಣುನಿಷ್ಠೆಯೂ ವೆಂಕಟೇಶಭಕ್ತಿಯೂ ಪ್ರಬಲವಾದುದನ್ನು ನೋಡಬಹುದಾಗಿದೆ. ಹೀಗಿದ್ದರೂ ವಿಜಯನಗರಸಾಮ್ರಾಜ್ಯದ ಅಧಿದೈವತವು ಶ್ರೀವಿರೂಪಾಕ್ಷನೆ ಉಳಿದುಕೊಂಡಿದ್ದನು. ಅರವೀಡು ಮನೆತನದ ಇಮ್ಮಡಿ ಶ್ರೀರಂಗರಾಯನ ವರೆಗಿನ ಶಾಸನಗಳಲ್ಲಿ ಎಂದಿನಂತೆ 'ಶ್ರೀವಿರೂಪಾಕ್ಷ'ವೆ ವಿಜಯನಗರದ ಅಂಕಿತವಾಗಿದ್ದಿತು. ಆದರೆ ಈ ವೆಂಕಟಪತಿರಾಯನು ಮಾತ್ರ ಅದನ್ನು ಬಿಟ್ಟು. **'ಶ್ರೀವೆಂಕಟೇಶ'** ಎಂಬ ಹೊಸ ಮುದ್ರಿಕೆಯೊಂದಿಗೆ ತನ್ನ ಶಾಸನಗಳನ್ನು ಹೊರಡಿಸತೊಡಗಿದನು.

ರಾಯನಿಗೆ ಆರು ಮಂದಿ ಹೆಂಡಂದಿರು ಇದ್ದರು. ಇವರಲ್ಲಿ ಓಬಮಾಂಬೆಯು ಬಹು ಕರ್ತೃತ್ವಶಾಲಿನಿಯಾಗಿದ್ದು ರಾಜ್ಯಕಾರ್ಯದಲ್ಲಿ ವಿಶೇಷ ಲಕ್ಷವನ್ನು ಪೂರಯಿಸುತ್ತಿದ್ದಳು. ರಾಯನು ಈಕೆಗೆ ಉಂಬಳಿಯಾಗಿ ಪುಲಿಕತ ಬಂದರವನ್ನು ಕೊಟ್ಟಿದ್ದನು. ಅದರ ಮೇಲೆ ಈಕೆಯು ಸ್ವತಂತ್ರವಾಗಿ ತನ್ನ ಅಧಿಕಾರವನ್ನು ನಡೆಸುತ್ತಿದ್ದಳು. ಈಕೆಯ ಕೃತ್ಯಗಳಿಗೆ ರಾಯನ ಒಪ್ಪಿಗೆಯು ಇರುತ್ತಿತ್ತು. ಓಬಮಾಂಬೆಯ ತಂದೆಯೂ ರಾಯನ ಮಾವನೂ ಆದ ಗೊಬ್ಬೂರಿ ಓಬರಾಯನು ಒಲಿಷ್ಠನೂ ರಾಯನಿಂದ ಸನ್ಮಾನಿತನೂ ಆಗಿದ್ದನು. ಈತನ ಪ್ರಭಾವವು ಸಾಮ್ರಾಜ್ಯದಲ್ಲಿ ಬಹಳವಾಗಿ ನಡೆಯುತ್ತಿತ್ತು. ಈತನ ಇಳಿವಯಸ್ಸಿನಲ್ಲಿ ಈತನ ಮಗನಾದ ಓಬರಾಯನು ಅಥವಾ ಜಗರಾಯನು ರಾಜ್ಯಕಾರ್ಯದಲ್ಲಿ ತನ್ನ ವರ್ಚಸ್ಸನ್ನು ಬೀರತೊಡಗಿದನು.

ರಾಯನಿಗೆ ಪುತ್ರಸಂತಾನವಾಗಲಿಲ್ಲ. ಆತನ ಹೆಂಡತಿಯಾದ ಬಾಯಮ್ಮನು (ಓಬವಾಂಬೆ?), ರಾಯನ ಪ್ರೇಮವೂ ರಾಜ್ಯದಲ್ಲಿ ಪ್ರತಿಷ್ಠೆಯೂ ತನಗೆ ದೊರೆಯಬೇಕೆಂಬ ಹವ್ಯಾಸದಿಂದ ಒಬ್ಬ ಬ್ರಾಹ್ಮಣಿಯ ಕೂಸನ್ನು ತಂದು ತನ್ನ ಕೂಸಾಗಿ ಪ್ರಸಿದ್ಧಪಡಿಸಿದಳು.[೨] ಈ ಮೋಸವು ರಾಯನಿಗೆ ತಿಳಿದರೂ ರಾಣಿಯ ಪ್ರೇಮಕ್ಕಾಗಿ ಆತನು ಬಹಿರಂಗವಾಗಿ ಅದನ್ನು ಪ್ರಕಟಮಾಡಲಿಲ್ಲ. ರಾಯನು ರಾಣಿಯ ಸಂತೋಷಕ್ಕಾಗಿ ಈ ಬಾಲಕನಿಗೆ ಯುವರಾಜಪದಸೂಚಕವಾಗಿ ಚಿಕ್ಕರಾಯ ಎಂಬ ಹೆಸರನ್ನು ಕೊಟ್ಟು ಮನ್ನಿಸಿದನು. ಆದರೆ ಆತನು ನಿಜವಾದ ತನ್ನ ಮಗನೆಂದು ಎಂದೂ ಭಾವಿಸಲಿಲ್ಲ. ರಾಯನು ಈ ಕುಮಾರನನ್ನು ಯಾವಾಗಲೂ ಚಂದ್ರಗಿರಿಯ ಅರಮನೆಯಲ್ಲಿ ಭದ್ರವಾದ ಪ್ರತಿಬಂಧದಲ್ಲಿ ಇರಿಸುತ್ತಿದ್ದನು.

ರಾಯನಿಗೆ ಆಕಾಲದಲ್ಲಿ ದಿನದಿನಕ್ಕೆ ಮುಪ್ಪು ಅಡರಿದಂತೆ ಮುಂದೆ ಪಟ್ಟಾಧಿಕಾರಿಯಾರು ಎಂಬ ಪ್ರಶ್ನೆಯು ಎಲ್ಲರನ್ನು ಬಾಧಿಸತೊಡಗಿತು. ರಾಯನ ಅಣ್ಣನ ಮಕ್ಕಳಲ್ಲಿ ಹಿರಿಯನಾದ ಇಮ್ಮಡಿ ತಿರುಮಲನ ವಿಷಯದಲ್ಲಿ ಆತನಿಗೆ ತೀಕ್ಷ್ಣವಾದ ತಿರಸ್ಕಾರವಿದ್ದಿತು. ಆತನು ಈಗಾಗಲೆ ಅಧಿಕಾರಚ್ಯುತನೂ ದೇಶಭ್ರಷ್ಟನೂ ಆಗಿದ್ದನು. ಆತನ ತಮ್ಮನಾದ ಶ್ರೀರಂಗನ ಮೇಲೆ ರಾಯನ ವಾತ್ಸಲ್ಯವು ವಿಶೇಷವಾಗಿದ್ದಿತು. ರಾಯನು ಈತನನ್ನು ಚಿಕ್ಕಂದಿನಿಂದಲೆ ತನ್ನಲ್ಲಿ ತಂದಿರಿಸಿ ಪುತ್ರನಿರ್ವಿಶೇಷ ಪ್ರೇಮದಿಂದ ಲಾಲಿಸಿ ಪಾಲಿಸಿ ನಿಜವಾದ ಚಿಕ್ಕರಾಯ (ಯುವರಾಜ)ನೆಂದು ಮನ್ನಿಸುತ್ತಿದನು. ಬರುಬರುತ್ತ ಈ ಶ್ರೀರಂಗನಿಗೆ ಪಟ್ಟವಾಗಬೇಕೆಂದು ರಾಯನ ಹಂಬಲವು ಪ್ರಬಲಿಸಿತು.

ರಾಯನ ಕೊನೆಕೊನೆಯ ದಿನಗಳು ಅತ್ಯಂತ ವ್ಯಾಕುಲತೆಯಲ್ಲಿ ಕಳೆದುವು. ಬಲಿಯುತ್ತಿರುವ ವಾರ್ಧಕ್ಯ ಮತ್ತು ರೋಗಗಳಿಂದಲೂ ರಾಜ್ಯದ ವಿವಂಚನೆಯಿಂದಲೂ ಆತನ ದೇಹ-ಮನಸುಗಳು ಬಹಳ

---

೨. ಶುಕ್ರವಾರ ಕಥೆಯ ಮೂಲವನ್ನು ಕೆಲಮಟ್ಟಿಗೆ ಈ ಸನ್ನಿವೇಶದಲ್ಲಿ ಕಾಣಬಹುದಲ್ಲವೆ?

ಹಣ್ಣಾದುವು. ಪಟ್ಟಕ್ಕಾಗಿ ಅರಮನೆಯಲ್ಲಿ ಕಲಹಗಳೂ ಒಳಸಂಚು ಗಳೂ ನಡೆದುವು. ಅರಸಿಯರ ಬಳಗದವರ ಪ್ರಸ್ಥವು ಬೆಳೆಯಿತು. ತನ್ನ ಮನಸಿನಲ್ಲಿ ಬೇರೊಂದು ಇದ್ದರೂ ರಾಣಿಯರ ಮನಸ್ಸನ್ನು ಮುರಿಯ ಲಾರದೆ ರಾಯನು ದಾರುಣವಾದ ವ್ಯಥೆಗೆ ಗುರಿಯಾದನು.

ಅಂತ್ಯಕಾಲಕ್ಕೆ ಮೂರು ದಿನಗಳು ಉಳಿದಿರುವಾಗ, ರಾಯನು ಕೃತಕ ಮಗನನ್ನು ಬಿಟ್ಟು ಶ್ರೀರಂಗನನ್ನು ತನ್ನ ಹಾಸಿಗೆಯ ಬಳಿಯಲ್ಲಿ ಕರೆದು ರಾಜ್ಯದ ಅಧಿಕಾರಿಗಳ ಮತ್ತು ನಾಯಕರ ಸಮಕ್ಷವಾಗಿ ತನ್ನ ರಾಜಮುದ್ರೆಯನ್ನು ಆತನಿಗೆ ಕೊಡಬಯಸಿದನು. ಶ್ರೀರಂಗನು ಶೋಕಾಕುಲನಾಗಿ ಅದನ್ನು ನಿರಾಕರಿಸಿದನು. ಆಗ ರಾಯನು ಅತ್ಯಾ ಗ್ರಹಪಟ್ಟು ಎರಡನೆಯ ಬಾರಿ ಅದನ್ನು ಆತನಿಗೆ ಒಪ್ಪಿಸಿದನು. ಕೂಡಲೆ ರಾಯನ ಅನುಯಾಯಿಗಳು ಶ್ರೀರಂಗನು ವಿಜಯನಗರದ ದೊರೆಯಾದ ನೆಂದು ಎಲ್ಲೆಡೆಯಲ್ಲಿ ಘೋಷಣೆಯನ್ನು ಹಬ್ಬಿಸಿದರು. ಮುಂದೆ ರಾಯನು ಮರಣವೈದಲು (೧೬೧೪ ಆಕ್ಟೋಬರ), ಆತನ ಮೂವರು ಹೆಂಡಂದಿರು ಸಹಗಮನವಾಡಿದರು.

ಅನೇಕ ಮಹತ್ವದ ಸಂವಿಧಾನಗಳಿಂದ ತುಂಬಿದ ರಾಯನ ಈ ಆಳಿ ಕೆಯು ಈ ಮನೆತನದ ಚರಿತ್ರೆಯಲ್ಲಿಯಂತೂ ಸರಿ, ವಿಜಯನಗರದ ಚರಿ ತ್ರೆಯಲ್ಲಿಯೂ ಸಂಸ್ಮರಣೀಯವಾಗಿದೆ. ರಾಯನ ಆಳಿಕೆಯ ವೃತ್ತಾಂ ತವನ್ನು ಪರಿಶೀಲಿಸುವಾಗ ನೂರು ವರ್ಷಗಳ ಹಿಂದಿನ ತೇಜಸ್ವಿಯಾದ ಕೃಷ್ಣದೇವರಾಯನ ಆಳಿಕೆಯು ನೆನಪಿಗೆ ಬರುತ್ತದೆ. ರಾಯನ ಕೈ ಯಲ್ಲಿ ಸಾಮ್ರಾಜ್ಯಸೂತ್ರಗಳು ಬಂದೊಡನೆ ಹಿಂದಿನ ಎರಡು ಆಳಿಕೆ ಗಳಲ್ಲಿಯ ವಿಜಯನಗರದ ದೌರ್ಬಲ್ಯವೂ ನಿಸ್ತೇಜಸ್ವಿತೆಯೂ ಅಳಿದು ಹೋಗಿ, ಸಾಮ್ರಾಜ್ಯವು ಮತ್ತೆ ಚೇತರಿಸಿಕೊಂಡೆದ್ದು, ತನ್ನ ಉಜ್ವಲವಾದ ಪೂರ್ವವೈಭವದ ಪಥವನ್ನು ಆಕ್ರಮಿಸಲು ಆರಂಭಿಸಿತು. ರಾಯನು ಹಿಂದಿನ ಆಳಿಕೆಯಲ್ಲಿಯ ಬರಿಯ ಆತ್ಮರಕ್ಷಣೆಯ ನೀತಿಯನ್ನು ಬದಿಗಿರಿಸಿ, ಸಾಮ್ರಾಜ್ಯದ ಶತ್ರುಗಳ ಮೇಲೆ ಆಕ್ರಮಣವನ್ನು ಹೂಡಿ ವಿಜಾಪುರ, ಗೋವಳಕೊಂಡದ ಸುಲ್ತಾನರು ಅಪಹರಿಸಿದ ವಿಜಯನಗರದ

ಪ್ರದೇಶಗಳನ್ನೂ ಗೌರವವನ್ನೂ ಮರಳಿ ಸೆಳೆದು ತಂದನು. ಎಂದಿನಂತೆ ಕೃಷ್ಣೆ-ತುಂಗಭದ್ರೆಗಳು ವಿಜಯನಗರದ ಉತ್ತರದ ಗಡಿಗಳಾಗಿ ನಿಂತುವು. ಬರಿಯ ಈ ರಾಜ್ಯವಿಸ್ತಾರಕ್ಕಾಗಿಯೆ ಅಲ್ಲ, ಸುವ್ಯವಸ್ಥಿತವಾದ ಅಂತರ್ಗತ ಆಡಳಿತ, ಅದರಿಂದ ದೇಶದಲ್ಲಿ ನೆಲೆಸಿದ ಶಾಂತಿ, ಈ ಶಾಂತಿಯ ಮೂಲಕ ಧರ್ಮ, ವಿದ್ಯೆ, ಸಾಹಿತ್ಯ, ಕಲೆ ಮುಂತಾದುವುಗಳ ಬೆಳವಣಿಗೆಯಿಂದ ಜನಾಂಗದಲ್ಲಿ ಉಂಟಾದ ನಾಗರಿಕತೆಯ ಉತ್ಕರ್ಷ ಇವುಗಳ ವಿಚಾರದಿಂದಲೂ ಈ ರಾಯನ ಆಳಿಕೆಯು ಅಭಿನಂದನೀಯವಾಗಿದೆ.

ಆದರೆ ಇದೆಲ್ಲವು ಹಗಲು ಕಂಡ ಕನಸಿನಂತೆ ಕ್ಷಣಿಕವಾಯಿತು. ರಾಯನ ಕರ್ತೃತ್ವಬಲದಿಂದ ಸಾಮ್ರಾಜ್ಯವು ಮತ್ತೆ ಕಸುವುಗೊಂಡು ಕೆಲಕಾಲ ಹುರಿಯಾಗಿ ನಿಂತಿತಾದರೂ ಅದರ ಈ ಸಾಮರ್ಥ್ಯವು ಬಹುಕಾಲ ಬಾಳುವಂತೆ ಆಗಲಿಲ್ಲ. ಏಕೆಂದರೆ ವಿಜಯನಗರಸಾಮ್ರಾಜ್ಯದ ಶರೀರದಲ್ಲಿ ನೆಟ್ಟ ವಿನಾಶಕ ಶಕ್ತಿಯ ಬೀಜಗಳು ಈಗಾಗಲೆ ಮೊಳೆತು ಮರವಾಗಿ ಬೆಳೆಯತೊಡಗಿದ್ದುವು. ರಾಕ್ಷಸತಂಗಡಿಯಿಂದ ಉಂಟಾದ ದಾರುಣವಾದ ಶೈಥಿಲ್ಯದಿಂದಲೂ ತಿರುಮಲರಾಯನು ಅದೂರದೃಷ್ಟಿಯಿಂದ ನಿರ್ಮಿಸಿಕೊಟ್ಟ ಸಾಮ್ರಾಜ್ಯದ ವಿಭಕ್ತೀಕರಣದಿಂದಲೂ ಮಾಂಡಲಿಕ ರಾಜರಲ್ಲಿ ಸಾಮ್ರಾಜ್ಯದ ಅನಾದರವೂ ಸ್ವಾತಂತ್ರ್ಯಾಭಿಲಾಷೆಯೂ ಸ್ವಾರ್ಥಬುದ್ಧಿಯೂ ಹೆಚ್ಚಾಗುತ್ತ ನಡೆದಿದ್ದುವು. ರಾಯನು ಇವುಗಳನ್ನು ಕೆಲಮಟ್ಟಿಗೆ ಕುಗ್ಗಬಡಿಯಲು ಸಮರ್ಥನಾದನೆ ಹೊರತು ಆತನಿಂದ ಅವುಗಳ ನಿರ್ಮೂಲನವಾಗಲಿಲ್ಲ.

ಈ ರಾಜಕೀಯ ದುರ್ಘಟನೆಯಲ್ಲದೆ ರಾಯನಲ್ಲಿಯ ಕೆಲವು ವೈಯಕ್ತಿಕ ವೈಗುಣ್ಯಗಳಿಂದಲೂ ರಾಯನ ಯಶಸ್ವಿತೆಯಲ್ಲಿ ಕೆಲವು ಲೋಪಗಳು ಉಂಟಾದುವು. ರಾಯನ ಧವಲಕೀರ್ತಿಗೆ ಸದಾಶಿವರಾಯನ ಕೊಲೆಯ ಅಪವಾದದ ಕಲಂಕವು ತಗಲಿದೆ.[೧] ಈತನು ತನ್ನ ಅಣ್ಣನ ಮಕ್ಕಳಾದ ತಿರುಮಲ-ಶ್ರೀರಂಗರನ್ನು ಬದಿಗಿರಿಸಿ ಪಟ್ಟಕ್ಕೆ ಬಂದುದು ಕೆಲವರಿಗೆ ಸಮ್ಮತವಾಗಿರಲಿಲ್ಲ. ಇದರಿಂದ ಮೊದಲೆ ಈ ಮನೆತನದ ಬಗೆಗೆ

೧. ೧೮ನೆಯ ವಿಲಾಸ, ೩ನೆಯ ಟಿಪ್ಪಣಿ, ಪು. ೧೮೧.

ಹೊತ್ತುತ್ತಲಿರುವ ಅಸಂತೋಷದ ಬೆಂಕೆಗೆ ಪುಟವು ದೊರೆತಿತು. ಈ ಕಾರಣಗಳನ್ನು ಮುಂದೆ ಮಾಡಿಕೊಂಡು ಸಾಮ್ರಾಜ್ಯದ ಕೆಲವು ಮಾಂಡಲಿಕರು, ನಾಯಕರು ರಾಯನ ಆಳಿಕೆಯ ಆರಂಭದಲ್ಲಿ ಕೆಲಕಾಲ ದೊಂಬಿಯನ್ನು ಹೂಡಿದರು. ಈ ಅಂತಃಕಲಹಗಳನ್ನು ನಂದಿಸುವುದರಲ್ಲಿ ರಾಯನ ಶಕ್ತಿ-ಕಾಲಗಳು ವ್ಯಯವಾದುವು. ತನ್ನ ಅಣ್ಣನ ಮಗನೂ ಶ್ರೀರಂಗಪಟ್ಟಣದ ಮಹಾಮಂಡಲೇಶ್ವರನೂ ಆದ ಇಮ್ಮಡಿ ತಿರುಮಲನ ಬಗೆಗೆ ರಾಯನು ತೋರಿದ ಮನೋವೃತ್ತಿಯು ಅನಿರ್ವಚನೀಯವೂ ಅಸಮರ್ಥನೀಯವೂ ಆಗಿದೆ. ಈ ಉದಾಹರಣೆಯು ಸಾಮ್ರಾಜ್ಯಕ್ಕೆ ಹಿತಪರಿಣಾಮಿಯಾಗಲಿಲ್ಲ. ಕೊನೆಗೆ ರಾಯನ ಅಂತ್ಯಕಾಲದ ಅನುಕಂಪನೀಯವಾದ ಅಸಹಾಯತೆಯಿಂದಲೂ ಪಟ್ಟದ ವಿಷಯದಲ್ಲಿಯ ಅಸ್ಥಿರವಾದ ವರ್ತನೆಯಿಂದಲೂ ಸಾಮ್ರಾಜ್ಯದ ಮೇಲೆ ಅನೇಕ ಅನರ್ಥಗಳು ಒದ್ದಿದುವು. ಅದು ಹೇಗೆ ಎಂಬುದು ಮುಂದಿನ 'ವಿಲಾಸ'ದಲ್ಲಿ ವಿಶದವಾಗುವುದು.

---

## ಇಪ್ಪತ್ತನಾಲ್ಕನೆಯ ವಿಲಾಸ

# ೪. ಮುಮ್ಮಡಿ ಶ್ರೀರಂಗರಾಯ (೧೬೧೪)

### ಜ್ಞಾತಿಯುದ್ಧದ ಬೇಗೆ (೧೬೧೪-೧೬)

ವೆಂಕಟಪತಿರಾಯನು ತನ್ನ ಮೃತ್ಯುಶಯ್ಯೆಯಿಂದ ವಿಜಯನಗರ-ಸಾಮ್ರಾಜ್ಯಸಿಂಹಾಸನಕ್ಕೆ ಏರಿಸಿದ (ಮುಮ್ಮಡಿ) ಶ್ರೀರಂಗನು ನಿರ್ಭಾಗ್ಯನೂ ಬಲು ಹೇಡಿಯೂ ಆಗಿದ್ದನು. ಆಳುವ ಅರಸನಲ್ಲಿ ಇರಬೇಕಾದ ಧೈರ್ಯ, ಚಾತುರ್ಯ, ಕರ್ತೃತ್ವ, ಜನಸಂಗ್ರಾಹಕತೆ ಮೊದಲಾದ ಗುಣಗಳಲ್ಲಿ ಒಂದಾದರೂ ಆತನಲ್ಲಿ ಇರಲಿಲ್ಲವಾಗಿ ಕಂಡು

ಬಂದಿತು. ಪಟ್ಟವಾದಾಗ ಪರಿಸ್ಥಿತಿಯೂ ಆತನಿಗೆ ಅನುಕೂಲವಾಗಿಯೆ ಇದ್ದಿತು. ಆದರೆ ಆತನ ದುರ್ಬಲತೆ ಮತ್ತು ಅಯೋಗ್ಯತೆಯ ಮೂಲಕ ಮುಂದೆ ಆತನ ವಿರೋಧಿಗಳಿಗೆ ಸಾಕಷ್ಟು ಆಸ್ಪದವು ದೊರೆತು ಅವರು ತಮ್ಮ ಪಕ್ಷವನ್ನು ಬಲಿಸತೊಡಗಿದರು.

ಶ್ರೀರಂಗನಿಗೆ ಪಟ್ಟವಾದುದು ಹಲವು ರಾಜಬಾಂಧವರಿಗೆ ಸಮ್ಮತವಿರಲಿಲ್ಲ. ವೆಂಕಟಪತಿರಾಯನ ಕೃತಕಪುತ್ರನಾದ ಚಿಕ್ಕರಾಯನಿಗೆ ರಾಜ್ಯವು ದೊರೆಯಬೇಕೆಂಬುದು ಅವರ ಮನೀಷೆಯಾಗಿದ್ದಿತು. ಈ ಪಕ್ಷದ ನೇತೃತ್ವವನ್ನು ಕೃತಕಪುತ್ರನ ತಾಯಿಯಾದ ಮಹಾರಾಣಿ ಬಾಯಮ್ಮನು ಸ್ವಾಭಾವಿಕವಾಗಿಯೆ ವಹಿಸುವವಳಾದಳು. ಹಲವು ಸಂಬಂಧಿಕರು ಈಕೆಗೆ ಬೆಂಬಲವಾಗಿ ಈ ಪಕ್ಷವನ್ನು ಪುರಸ್ಕರಿಸಿದರು. ವೆಂಕಟಪತಿರಾಯನ ಹೆಂಡಂದಿರಲ್ಲಿ ಇಬ್ಬರ ತಂದೆಯಾದ ಗೊಬ್ಬೂರಿ ಓಬರಾಯನಿಗೆ ಜಗರಾಯನೆಂಬ ಮಗನಿದ್ದನು. ಈ ಪಿತಾಪುತ್ರರು ಅತ್ಯಂತ ಬಲಿಷ್ಠರಾಗಿದ್ದು, ಇವರ ಕೈಯಲ್ಲಿ ಸೇನಾಧಿಪತ್ಯವು ಇದ್ದುದರಿಂದ ರಾಜ್ಯದಲ್ಲಿ ಇವರ ವರ್ಚಸ್ಸು ವಿಶೇಷವಾಗಿದ್ದಿತು. ಕೃತಕಪುತ್ರನಾದ ಚಿಕ್ಕರಾಯನು ಜಗರಾಯನ ಮಗಳನ್ನು ಮದುವೆಯಾಗಿದ್ದನು. ಆದುದರಿಂದ ಅಳಿಯನಾದ ಚಿಕ್ಕರಾಯನ ಅಭಿಮಾನವೂ ಆತನಿಗೇ ಪಟ್ಟವಾಗಬೇಕೆಂಬ ಆಗ್ರಹವೂ ಜಗರಾಯನಲ್ಲಿ ದೃಢವಾಗಿದ್ದಿತು. ಈ ಮೇರೆಗೆ ಅರಮನೆಯ ರಾಜ್ಞಿಯರಿಂದಲೂ ಜಗರಾಯ ಮೊದಲಾದ ಅವರ ಬಂಧುವರ್ಗದವರಿಂದಲೂ[1] ಎತ್ತಿ ಹಿಡಿಯಲ್ಪಟ್ಟ ಚಿಕ್ಕರಾಯನ ಪಕ್ಷವು ಸುಸಂಘಟಿತವಾಗಿದ್ದಿತು.

ಬಲಿಷ್ಠನಾದ ಜಗರಾಯನಿಗೆ ರಾಜ್ಯದ ಕೆಲವು ನಾಯಕರು ಅನುಕೂಲರಾಗಿದ್ದರು. ಇವರು ಯಾರೂ ಪಟ್ಟಾಭಿಷೇಕಸಮಾರಂಭದಲ್ಲಿ

---

೧. ಬಾಯಮ್ಮನು ಯಾವ ರಾಣಿಯು ಎಂಬುದು ಸಂದೇಹಾಸ್ಪದವಾಗಿದೆ. ಓಬಮಾಂಬೆಯೆಂದು ಇಟ್ಟುಕೊಂಡರೆ ಹೆಚ್ಚು ಸಯುಕ್ತಿಕವಾಗುತ್ತದೆ. ಕೆಲರು ವೆಂಕಟಾಂಬೆಯೆಂದು ಸೂಚಿಸಿರುವರು. ಅರಮನೆಯ ಈ ಸಂಬಂಧಗಳು ಬಹು ಸಂದಿಗ್ಧವೂ ತೊಡಕಿನವೂ ಆಗಿವೆ. ಹೆಚ್ಚು ಸಮಂಜಸವಾಗಿ ತೋರಿದ ಉಪಪತ್ತಿಯನ್ನು ಇಲ್ಲಿ ಸ್ವೀಕರಿಸಿದ್ದೇನೆ.

ಭಾಗವಹಿಸಲಿಲ್ಲ, ಶ್ರೀರಂಗನಿಗೆ ಮನ್ನಣೆಯನ್ನು ಸಲ್ಲಿಸಲು ಬರಲಿಲ್ಲ. ಮುಂದೆ ಅಲ್ಪಾವಧಿಯಲ್ಲಿಯೆ ಶ್ರೀರಂಗನು ತನ್ನ ಅವಿವೇಕದಿಂದ ಕೆಲವು ನಾಯಕರ ಮನಸುಗಳನ್ನು ನೋಯಿಸಿದನು. ಇವರು ಜಗರಾಯನ ಪಕ್ಷವನ್ನು ಕೂಡಿದರು.

ಹೀಗೆ ಬಲಗೊಂಡ ಜಗರಾಯನು, ರಾಯನಿಗೆ ತನ್ನ ನಿಷ್ಠೆಯನ್ನು ಸಲ್ಲಿಸುವ ನಿಮಿತ್ತವನ್ನು ಮುಂದೆ ಮಾಡಿ ತನ್ನ ಅನುಯಾಯಿಗಳೊಡನೆ ರಾಜಧಾನಿಗೆ[೨] ಬಂದನು. ಶ್ರೀರಂಗನ ಅರಿವುಗೇಡಿತನದ ಮೂಲಕ ರಾಜಧಾನಿಯಲ್ಲಿ ಕಾವಲು ಮೊದಲಾದ ಭದ್ರತೆಯು ಇರಲಿಲ್ಲ. ಜಗರಾಯನು ಈ ಸುಸಂಧಿಯನ್ನು ನೋಡಿಕೊಂಡು ಯುಕ್ತಿಯಿಂದ ರಾಜಪಕ್ಷದವರನ್ನು ಪ್ರತಿಬಂಧಿಸಿ ಅರಮನೆಯ ಮೇಲೆ ಏರಿಹೋದನು. ಜಗರಾಯನ ಸಾಮರ್ಥ್ಯವನ್ನು ಕಂಡ ಶ್ರೀರಂಗನು ಕೂಡಲೆ ಆತನಿಗೆ ಶರಣಾಗತನಾದನು. ಬಳಿಕ ಜಗರಾಯನು ಶ್ರೀರಂಗನನ್ನು ಭದ್ರವಾದ ಕಾರಾಗೃಹದಲ್ಲಿರಿಸಿ ಚಿಕ್ಕರಾಯನಿಗೆ ಪಟ್ಟವನ್ನು ಕಟ್ಟಿ ಆತನೆ ರಾಜನೆಂದು ಡಂಗುರ ಹೊಡಿಸಿದನು. ಜಗರಾಯನ ಈ ವಿಜಯದ ವರ್ಚಸ್ಸಿಗೆ ವ್ಯಸೋತ ಅನೇಕ ನಾಯಕರು ಚಿಕ್ಕರಾಯನ ಒಡೆತನವನ್ನು ಒಪ್ಪಿಕೊಂಡರು.

ಆದರೆ ಕೆಚ್ಚೆದೆಯವನಾದ ಒಬ್ಬ ನಾಯಕನು ಜಗರಾಯನಿಗೆ ಒಗ್ಗಲಿಲ್ಲ. ಪರಾಕ್ರಮಮೂರ್ತಿಯೂ ಅತ್ಯಂತ ಸ್ವಾಮಿನಿಷ್ಠನೂ ಆಗಿದ್ದ ಎಚಮನಾಯಕನು ಜಗರಾಯನ ಈ ದುರಾಗ್ರಹವನ್ನು ಪ್ರತಿಭಟಿಸುತ್ತ ಚಿಕ್ಕರಾಯನ ದೊರೆತನವನ್ನು ಮನ್ನಿಸಲಿಲ್ಲ. ಆತನನ್ನು ವಶಮಾಡಿಕೊಳ್ಳಲು ಜಗರಾಯನು ಬಹಳ ಪ್ರಯಾಸಪಟ್ಟನು. ಆತನ ಬಿಗುವನ್ನು ನೋಡಿ ಕೊನೆಗೆ ಹೆದರಿಕೆಯನ್ನು ಹಾಕಿದನು. "ಯಾವನ ಕುಲ-ಗೋತ್ರ-ಜಾತಿಗಳ ಮಾತಂತಿರಲಿ, ತಂದೆತಾಯಿಗಳ ಕುರುಹು

೨. ಈ ಘಟನೆಗಳು ಯಾವ ಸ್ಥಳದಲ್ಲಿ ಸಂಭವಿಸಿದುವು ಎಂಬದು ಎಲ್ಲಿಯೂ ಉಕ್ತವಾಗಿಲ್ಲವಾದರೂ ವೆಂಕಟಪತಿರಾಯನ ನಿಧನವೂ ಮುಂದಿನ ಈ ರಾಜ್ಯಕ್ರಾಂತಿಯ ಮುಖ್ಯ ಸಂಗತಿಗಳೂ ವೆಲ್ಲೂರಲ್ಲಿ ನಡೆದುವು ಎಂದು ತೋರುತ್ತದೆ.

ಕೂಡ ಇಲ್ಲವೋ, ಅಂತಹ ರಾಜನಿಗೆ ನಾನು ಎಂದೆಂದಿಗೂ ತಲೆಬಾಗೆನು'' ಎಂದು ತನ್ನ ಅಚಲವಾದ ಪ್ರತಿಜ್ಞೆಯನ್ನು ವಿಜಯನಾಯಕನು ಜಗರಾಯನಿಗೆ ತಿಳಿಸಿದನು.

ಬಳಿಕ ನಾಯಕನು ಶ್ರೀರಂಗನನ್ನಾಗಲಿ, ಆತನ ಮಕ್ಕಳನ್ನಾಗಲಿ ಸೆರೆಯಿಂದ ಬಿಡಿಸಲು ದೀರ್ಘವಾದ ಸಾಹಸಗಳನ್ನು ಪ್ರಾರಂಭಿಸಿದನು. ಆತನು ಶ್ರೀರಂಗನ ವಿಮೋಚನೆಗಾಗಿ ಮಾಡಿದ ಉದ್ಯೋಗಗಳೆಲ್ಲವು ವ್ಯರ್ಥವಾದುವು. ಆದರೆ ಆತನ ಹನ್ನೆರಡು ವರ್ಷದ ಎರಡನೆಯ ಮಗನನ್ನು ಮಾತ್ರ ಒಬ್ಬ ಅಗಸನ ಸಹಾಯದಿಂದ ಬಿಡುಗಡೆ ಮಾಡುವಲ್ಲಿ ಆತನಿಗೆ ಯಶವು ದೊರೆತಿತು.

ನಾಯಕನ ಈ ಜಯದಿಂದಲೂ ಶ್ರೀರಂಗನ ಮುಕ್ತತೆಗಾಗಿ ಆತನು ನಡೆಸಿದ ಅವಿಶ್ರಾಂತ ಪ್ರಯತ್ನಗಳಿಂದಲೂ ಪ್ರಕ್ಷುಭಿತನಾದ ಜಗರಾಯನು ಕೂಡಲೆ ಶ್ರೀರಂಗನ ಹಾಗೂ ಆತನ ಸಮಗ್ರ ಕುಟುಂಬದ ಸಂಹಾರವಾಗಬೇಕೆಂದು ವಿಧಿಸಿದನು. ಜಗರಾಯನ ತಮ್ಮನಾದ ಚಿನ್ನ ಓಬಲರಾಯನು ಅಧಮಾಧಮವಾದ ಈ ಕೃತ್ಯವನ್ನು ನೆರವೇರಿಸಲು ಅಣ್ಣನಿಂದ ಪ್ರೇರಿತನಾದನು. ಕಟುತರವಾದ ಕಾರಾವಾಸದಲ್ಲಿ ಕಾಲ ಕಳೆಯುತ್ತಿದ್ದ ಶ್ರೀರಂಗರಾಯನು,ಓಬಲರಾಯನ ಶಾಸನದಂತೆ ಸ್ವಹಸ್ತದಿಂದ ತನ್ನ ಧರ್ಮಪತ್ನಿಯನ್ನೂ ಹಿರಿಯ ಮಗನ ಕೈಯಿಂದ ಆತನ ಅರ್ಧಾಂಗಿಯನ್ನೂ ಯಮಸದನಕ್ಕೆ ಕಳುಹಿ, ಒಂದು ಹೆಣ್ಣು, ಒಂದು ಗಂಡು ಹೀಗೆ ತನ್ನ ಎರಡು ಚಿಕ್ಕ ಮಕ್ಕಳ ಶಿರಶ್ಛೇದನನ್ನು ಮಾಡಿದನು. ಬಳಿಕ ತಾನೂ ತನ್ನ ಹಿರಿಯ ಮಗನೂ ಕತ್ತಿಯಿಂದ ಇರಿದುಕೊಂಡು ತಮ್ಮ ಇಹಲೋಕಯಾತ್ರೆಯನ್ನು ಮುಗಿಸಿದರು. ಶ್ರೀರಂಗನಿಂದ ಕೊಲ್ಲಲಾಗದೆ ಉಳಿದಿದ್ದ ಆತನ ಇನ್ನೊಂದು ಹೆಣ್ಣು ಮಗುವನ್ನು ಚಿನ್ನ ಓಬಲರಾಯನು ತುಂಡರಿಸಿ ಅಮಾನುಷವಾದ ಈ ಸಂಹಾರಸತ್ರವನ್ನು ಪರಿಸಮಾಪ್ತಿಗೊಳಿಸಿದನು ! (೧೬೧೪ ನವೆಂಬರ).

ಪೈಶಾಚಿಕವಾದ ಈ ಅತ್ಯಾಚಾರಗಳಿಂದ ಜನಮನಗಳು ತಲ್ಲಣಗೊಂಡುವು. ತನ್ನ ಆಸುರೀ ಮಹತ್ವಾಂಕ್ಷೆಯನ್ನು ಪೂರಯಿಸಿ

ಕೊಳ್ಳಲು ಎಂತಹ ಕ್ರೂರತನದ ಕೃತಿಯನ್ನು ಮಾಡಲಿಕ್ಕೂ ಈ ನರ ರಾಕ್ಷಸನು ಹೇಸನು ಎಂದು ಜನರಿಗೆ ಜಗರಾಯನಲ್ಲಿ ಜುಗುಪ್ಸೆ ಯುಂಟಾಯಿತು. ನಾಯಕರು ಆತನ ಪಕ್ಷವನ್ನು ಬಿಟ್ಟು ಹೋಗ ತೊಡಗಿದರು. ಯಚಮನಾಯಕನ ಪಕ್ಷದ ಬಲವು ಬೆಳೆಯಲಾರಂಭಿಸಿತು. ಜಗರಾಯನು ತನ್ನ ಅಳಿಯನೊಂದಿಗೆ ರಾಜಧಾನಿಯನ್ನು ತೊಲಗಿ ಪಲಾಯನ ಮಾಡಿದನು. ಯಚಮನಾಯಕನು ತಾನು ಜಗರಾಯನ ದಾಡೆಯೊಳಗಿಂದ ಬಿಡಿಸಿತಂದ ಶ್ರೀರಂಗನ ನಡುವಿನ ಮಗನಾದ **ರಾಮದೇವ**ನನ್ನು ಪಟ್ಟಕ್ಕೆ ಕುಳ್ಳಿರಿಸಿದನು (೧೬೧೫).

ಸ್ವಾಮಿಭಕ್ತನಾದ ಯಚಮನಾಯಕನು ಅಂಗೀಕರಿಸಿದ ಕಾರ್ಯ ದಲ್ಲಿ ಒಂದು ಭಾಗವು—ನ್ಯಾಯವಾಗಿ ಸಿಂಹಾಸನಕ್ಕೆ ಅರ್ಹವಾದ ರಾಜವಂಶದವರನ್ನು ಮರಳಿ ರಾಜ್ಯಕ್ಕೆ ತರುವುದು—ಹೇಗೋ ಈಡೇರಿ ದಂತಾಯಿತು. ಇಷ್ಟರಿಂದಲೆ ಮುಗಿಯಲಿಲ್ಲ. ರಾಜಕುಲಘಾತ ಕನೂ ರಾಷ್ಟ್ರದ್ರೋಹಿಯೂ ಆದ ಜಗರಾಯನನ್ನು ಸುಮ್ಮನೆ ಸುರಕ್ಷಿತವಾಗಿ ಬಿಡುವುದು ಅನರ್ಥಕರವಾಗಿದ್ದಿತು. ಆದುದರಿಂದ ನಾಯ ಕನು ಆತನ ಪಾರುಪತ್ಯದ ಕಾರ್ಯದಲ್ಲಿ ಮಗ್ನನಾದನು. ಜಗರಾಯನು ನಾಯಕನನ್ನು ಇದಿರಿಸಲಾರದೆ ಮೋರೆತಪ್ಪಿಸಿ ತಿರುಗಾಡಲಾರಂಭಿಸಿ ದನು. ನಾಯಕನು ಆತನನ್ನು ಬೆಂಬತ್ತಿ, ರಣಾಂಗಣದಲ್ಲಿ ಎಳೆದು ನಿಲ್ಲಿ ಸಿದನು. ಜಗರಾಯನು ಪ್ರಚಂಡವಾದ ನಾಯಕನ ಪ್ರಹಾರದಿಂದ ಪರಾಜಿತನಾಗಿ, ಭ್ರಾಂತಿಗೊಂಡು ಅರಣ್ಯವನ್ನು ಆಶ್ರಯಿಸಿದನು.

ಈಗಾಗಲೆ ಸಾಮ್ರಾಜ್ಯದಲ್ಲಿ ಉಂಟಾದ ಕೆಲವು ವಿಷಮಘಟನೆಗಳ ಮೂಲಕ ರಾಜ್ಯದ್ರೋಹಿಯಾದ ಜಗರಾಯನು ನಿರಾಧಾರನಾಗಿ ಉಳಿಯ ಬೇಕಾಗಲಿಲ್ಲ. ಹಿಂದೆ ನೋಡಿದಂತೆ ಕಳೆದ ಹಲವು ವರ್ಷಗಳಿಂದ ಮದುರೆಯ ನಾಯಕರಲ್ಲಿ ವಿಜಯನಗರದ ಬಗೆಗೆ ಕೃತಜ್ಞತಾಬುದ್ಧಿಯೂ ಸಾಮ್ರಾಜ್ಯ ನಿಷ್ಠೆಯೂ ಲುಪ್ತವಾಗಿ ಅವಿಧೇಯತೆಯು ಹೆಚ್ಚುತ್ತಲಿತ್ತು. ಸಾಧ್ಯವಿ ದ್ದಷ್ಟು ಸಾಮ್ರಾಜ್ಯಕ್ಕೆ ವಿರೋಧವನ್ನು ಬಗೆವ ಪ್ರವೃತ್ತಿಯೂ ಸ್ವತಂತ್ರ ರಾಗಬೇಕೆಂಬ ಮಹಕಾಂಕ್ಷೆಯೂ ಅವರಲ್ಲಿ ಬೆಳೆಯತೊಡಗಿದ್ದುವು. ಜಿಂಜಿಯ ಮೊದಲಾದ ನಾಯಕರೂ ಅವರ ಮಾರ್ಗವನ್ನೆ ಅನುಸರಿಸುವ

ಕ್ರಮವನ್ನು ಆಚರಿಸತೊಡಗಿದ್ದರು. ಸ್ವಾರ್ಥಾಂಧರೂ ಪುಂಡುಗಾರರೂ ಆದ ಈ ಸಾಮಂತ ಅರಸರು ಸಾಮ್ರಾಜ್ಯದ ಮೇಲೆ ಒದವಿದ ಈ ಸಂಕಟವು ತಮ್ಮ ಹಿತಸಾಧನೆಗೆ ಅನಾಯಾಸವಾಗಿ ಪ್ರಾಪ್ತವಾದ ಸುಸಂಧಿಯೆಂದು ಭಾವಿಸಿದರು. ವೆಂಕಟಪತಿರಾಯನ ಆಳಿಕೆಯ ಕೊನೆಯಲ್ಲಿ ಮಧುರೆಯ ಪಟ್ಟವನ್ನೇರಿದ (೧೬೦೯) ಮುತ್ತು ವೀರಪ್ಪನಾಯಕನು ಸಾಮ್ರಾಜ್ಯದ ಕಪ್ಪವನ್ನು ನಿರಾಕರಿಸಿ ದಂಡನೆಗೆ ಗುರಿಯಾಗಿದ್ದನು (೧೬೧೦). ಆತನ ಮೇಲಣ ಈ ದಂಡಯೋಜನೆಯಲ್ಲಿ ನೆರೆಯ ಅರಸನೂ ಮಧುರೆಯ ಪ್ರತಿಸ್ಪರ್ಧಿಯೂ ಆದ ತಂಜಾವೂರ ಅಚ್ಯುತಪ್ಪನಾಯಕನು ಸಮ್ರಾಜನಿಗೆ ನೆರವಾಗಿದ್ದನು. ಆದುದರಿಂದ ಮುತ್ತುವೀರಪ್ಪನು ವಿಜಯನಗರದ ಮೇಲೆಯೂ ತಂಜಾವೂರ ಮೇಲೆಯೂ ಕಿನಿಸಿನಿಂದ ಹಲ್ಲುಕಟೆಯುತ್ತಿದ್ದನು.

ಅಷ್ಟರಲ್ಲಿ ಈ ರಾಜ್ಯಕ್ರಾಂತಿಯ ಕೋಲಾಹಲವೆದ್ದು ಪರಾಭೂತನಾದ ಜಗರಾಯನು ಆತನಲ್ಲಿಗೆ ಬಂದು ಸಹಾಯವನ್ನು ಯಾಚಿಸಿದನು. ತಾನು ಸಂಕಲ್ಪಿಸಿದ ಮನೋರಥಗಳನ್ನು ಈಡೇರಿಸಲಿಕ್ಕೆ ತನ್ನ ಸುದೈವವೆ ತನ್ನ ಮನೆಗೆ ನಡೆದು ಬಂದಿತು ಎಂದು ಮುತ್ತುವೀರಪ್ಪನಾಯಕನು ಬಗೆದನು. ಆತನು ಆನಂದದಿಂದ ಈ ರಾಜ್ಯದ್ರೋಹಿಗೆ ಆಸರವನ್ನಿತ್ತು ಯುದ್ಧದ ಸಿದ್ಧತೆಯನ್ನು ನಡೆಸಿದನು. ಆತನು ಸಾಮ್ರಾಜ್ಯಪಕ್ಷಪಾತಿಯಾಗಿ ತನಗೆ ಮುಳುವಾಗಿದ್ದ ತಂಜಾವೂರ ನಾಯಕನನ್ನು ಇದೇ ಕಾವಿನಲ್ಲಿ ನೆಲಕ್ಕುರುಳಿಸಬೇಕೆಂದು ಯೋಚಿಸಿ, ತನ್ನ ರಾಜಧಾನಿಯನ್ನು ತಂಜಾವೂರಕ್ಕೆ ಹೆಚ್ಚು ಸಮೀಪವೂ ತನ್ನ ಅನುಯಾಯಿಗಳ ಎಲ್ಲ ಕಾರ್ಯಕಲಾಪಗಳಿಗೆ ಬಹು ಅನುಕೂಲವಾದ ಮಧ್ಯವರ್ತಿ ಸ್ಥಳವೂ ಆಗುತ್ತಿದ್ದ ತ್ರಿಚನಾಪಲ್ಲಿಗೆ ತಂದನು. ಜಗರಾಯನ, ಮಧುರೆಯ, ಜಿಂಜಿಯ ಈ ಮೂರು ಬಲವಾದ ದಂಡುಗಳು ಶ್ರೀರಂಗಂದ ಬಳಿಯಲ್ಲಿ ಒಟ್ಟುಗೂಡಿ, ಕಾವೇರಿಯ ದಕ್ಷಿಣ ತಡಿಯಲ್ಲಿ ತೋಪೂರು(ಈಗಿನ ತೋಹೂರು) ಎಂಬೂರ ಬಳಿಯಲ್ಲಿ ಬೀಡು ಬಿಟ್ಟುವು. ಪೋರ್ತುಗೀಜರೂ ಇವರಿಗೆ ನೆರವಾಗಿ ತಮ್ಮ ಗುರಿಕಾರರ ದಳವನ್ನು ಕಳುಹಿದರು.

ಇತ್ತ ವಿಜಯನಾಯಕನು ಅಸಾವಧಾನನಾಗಿರಲಿಲ್ಲ. ವೈರಿಪಕ್ಷದ ಈ ಚಲನವಲನಗಳನ್ನು ಆತನು ನಿರೀಕ್ಷಿಸುತ್ತಲೆ ಇದ್ದನು. ಜಗರಾಯನ ಬೆನ್ನು ಕಟ್ಟಿದ ಈ ಸಾಮ್ರಾಜ್ಯದ್ರೋಹಿಗಳನ್ನು ಹಣಿದಿಕ್ಕಲು ಆತನು ಪ್ರಚಂಡವಾದ ಸೇನೆಯೊಂದಿಗೆ ಪ್ರಯಾಣ ಬೆಳೆಸಿದನು. ಈ ಸಮಯಕ್ಕೆ ತಂಜಾವೂರ ಅಚ್ಯುತಪ್ಪನಾಯಕನು ತಾನು ಬಹಳ ಮುದುಕನಾದುದರಿಂದ ಮಗನಾದ ರಘುನಾಥನಿಗೆ ಸ್ವಸಂತೋಷದಿಂದ ತನ್ನ ರಾಜ್ಯಾಧಿಕಾರವನ್ನು ಒಪ್ಪಿಸಿ ಪಟ್ಟಾಭಿಷೇಕ ಮಾಡಿಸಿದನು. ಹೀಗೆ ಹೊಸತಾಗಿ ತಂಜಾವೂರ ಒಡೆತನವನ್ನು ಪಡೆದ ರಘುನಾಥನಾಯಕನು ವಿಜಯನಾಯಕನಿಗೆ ಪ್ರಮುಖಸಹಾಯನಾಗಿ ಬಂದು ಸೇರಿದನು. ಎರಡೂ ಪಕ್ಷದವರು ಕಾಳಗಕ್ಕೆ ಅಣಿಯಾದರು.

ರಾಜಪಕ್ಷದವರೆ ಮೊದಲು ಕತ್ತಿಯನ್ನು ಹಿರಿದರು. ರಘುನಾಥನು ವೀರಾವೇಶದಿಂದ ವೈರಿಗಳ ಮೇಲೆ ಧುಮುಕಿದನು. ಆತನ ಆಘಾತದಿಂದಲೂ ವಿಜಯನಾಯಕನ ಇರಿತದಿಂದಲೂ ಅರಿಸೈನ್ಯವು ಹತಬಲವಾಗಿ ಹಿಂದೆಗೆಯಲಾರಂಭಿಸಿತು. ಜಗರಾಯನು ರಘುನಾಥನ ಭಲ್ಲೆಯ ತಿವಿತಕ್ಕೆ ತುತ್ತಾಗಿ ಯಮರಾಜನನ್ನು ಮೊರೆಹೊಕ್ಕನು. ಮುತ್ತುವೀರಪ್ಪ, ಜಿಂಜಿಯ ಕೃಷ್ಣಪ್ಪ ಮೊದಲಾದ ನಾಯಕರು ಸೋತು ಸಮರಾಂಗಣದಿಂದ ಪರಾಙ್ಮುಖರಾದರು. ಮುತ್ತುವೀರಪ್ಪನು ರಘುನಾಥನಿಗೆ ಕೈಸೆರೆಯಾದನು. ಆದರೆ ರಘುನಾಥನು ಆತನ ಅಪರಾಧಗಳನ್ನು ಕ್ಷಮಿಸಿ ಆತನಿಗೆ ಪ್ರಾಣದಾನವನ್ನು ನೀಡಿದನು. ಮುಂದೆ ಮುತ್ತು ವೀರಪ್ಪನು ರಘುನಾಥನಿಗೆ ತನ್ನ ಮಗಳನ್ನು ಮದುವೆಯಾಗಿ ಕೊಟ್ಟು ಆತನ ಸ್ನೇಹವನ್ನು ಸಂಪಾದಿಸಲು ಪ್ರಯತ್ನಿಸಿದನು. ಈ ಯುದ್ಧವು ೧೬೧೭, ಜುಲೈ ತಿಂಗಳಲ್ಲಿ ನಡೆಯಿತು. ಇಂತು ಮೂರು ವರ್ಷಗಳವರೆಗೆ ಲಂಬಿಸಿದ ಈ ಜ್ಞಾತಿಯುದ್ಧವು ಪರಿಸಮಾಪ್ತಿಗೊಂಡಿತು.*

* ಈ 'ವಿಲಾಸ'ದ ಆರಂಭದ ತಲೆಬರಹದಲ್ಲಿ 'ಜ್ಞಾತಿಯುದ್ಧದ ಬೇಗೆ(೧೬೧೪–೧೭)' ಎಂದು ತಿದ್ದಿಕೊಳ್ಳಬೇಕು.

# ನಾಲ್ವಡಿ ರಾಮದೇವರಾಯ (೧೬೧೫-೩೨).

ಈ ಮೇರೆಗೆ ಜಗದ್ದೇವ ನಾಯಕನ ಭಗೀರಥಪ್ರಯತ್ನಗಳಿಂದ ಲಭಿಸಿದ ವಿಜಯನಗರದ ಸಿಂಹಾಸನವು (ನಾಲ್ವಡಿ) ರಾಮದೇವರಾಯನಿಗೆ ಸ್ಥಿರವಾಯಿತು. ಆಗ ರಾಯನ ವಯಸ್ಸು ಇನ್ನೂ ಚಿಕ್ಕದಾಗಿದ್ದುದರಿಂದ ಆತನು ಪ್ರಬುದ್ಧನಾಗುವವರೆಗೆ ಜಗದ್ದೇವನಾಯಕನೇ ರಾಜಪ್ರತಿನಿಧಿಯಾಗಿ ರಾಜ್ಯಭಾರವನ್ನು ನಡೆಸಿಕೊಂಡು ಹೋದನು. ರಾಮದೇವರಾಯನ ಈ ಮುಂದಿನ ಆಳಿಕೆಯಲ್ಲಿ ರಾಜ್ಯದಲ್ಲಿ ಶಾಂತಿಯು ನೆಲೆಗೊಂಡಿತು. ಪರಕೀಯರ ಹಾವಳಿಯಾಗಲಿ, ಅಂತರ್ಗತ ಉಪದ್ರವವಾಗಲಿ ಅಂತಹವು ಯಾವುವೂ ಸಂಭವಿಸಲಿಲ್ಲ. ಮುಂದೆ ರಾಯನು ಪ್ರಬುದ್ಧನಾಗಿ ರಾಜ್ಯಕಾರ್ಯದಲ್ಲಿ ಹೆಚ್ಚು ನಿರತನಾದನು. ಈತನ ಆಳಿಕೆಯಲ್ಲಿ ಆಳಿಯ ರಾಮರಾಯನ ಮೊಮ್ಮಗನಾದ ( ಇಮ್ಮಡಿ ) ವೆಂಕಟಪತಿರಾಯನು ರಾಜಬಂಧುಗಳಲ್ಲಿ ಹಿರಿಯನಾದುದರಿಂದ ಯುವರಾಜಪದವನ್ನು ಪಡೆದು ರಾಜ್ಯಕಾರ್ಯದಲ್ಲಿ ನೆರವಾದನು.

ಈ ಆಳಿಕೆಯಲ್ಲಿ ಸಾಮ್ರಾಜ್ಯದ ಸಾಮಂತರಾದ ಮೈಸೂರು, ಇಕ್ಕೇರಿ ಮತ್ತು ತಂಜಾವೂರ ಅರಸರು ಸಾಮ್ರಾಜ್ಯದೊಡನೆ ವಿಶೇಷವಾದ ಸ್ವಾಮಿನಿಷ್ಠೆಯಿಂದ ವರ್ತಿಸಿದರು. ಹಿಂದಿನ ಆಳಿಕೆಯಲ್ಲಿ ಶ್ರೀರಂಗಪಟ್ಟಣದ ಕರ್ನಾಟಕಸಿಂಹಾಸನವನ್ನು ಪಡೆದುಕೊಂಡು ವೈಭವದಿಂದ ರಾಜ್ಯವಾಳತೊಡಗಿದ ರಾಜಒಡೆಯನು ಪಟ್ಟದ ಕಲಹದಲ್ಲಿ ರಾಜನಿಷ್ಠನಾಗಿ ಉಳಿದು, ಏಳು ವರ್ಷಗಳವರೆಗೆ ಅರಸುಗೆಯ್ದು ನಿಧನಹೊಂದಿದನು (೧೬೧೭). ಆತನ ತರುವಾಯ ಆತನ ಮೊಮ್ಮಗನಾದ (ಅರ್ವಡಿ) ಚಾಮರಾಜನು ಮೈಸೂರ ಪಟ್ಟಕ್ಕೆ ಬಂದನು (೧೬೧೭–೩೭). ಈತನು ಹಿಂದಿನ ರಾಜನೀತಿಯನ್ನೆ ಮುಂದುವರಿಸಿದನು.

ಈ ಪ್ರಾಂತದಲ್ಲಿ ಜಗದೇವರಾಯನೆಂಬ ಶೂರನಾಯಕನು ಕೆಲಕಾಲ ಹಿಂದೆ ಸ್ವಪರಾಕ್ರಮದ ಪ್ರತಿಫಲವಾಗಿ (ಪು. ೨೦೬) ಕೆಲ ಪ್ರದೇಶವನ್ನು ಪಡೆದುಕೊಂಡಿದ್ದನು. ಈತನ ರಾಜ್ಯವು ಮೈಸೂರ ಉತ್ತರದಲ್ಲಿ

ಹಬ್ಬಿತ್ತು. ಚನ್ನಪಟ್ಟಣವು ಈತನ ರಾಜಧಾನಿಯಾಗಿದ್ದಿತು. ಚಾಮು ರಾಜನು ದಂಡಯಾತ್ರೆಮಾಡಿ ಚನ್ನಪಟ್ಟಣವನ್ನು ಕಿತ್ತುಕೊಂಡನು (೧೬೩೦). ಜಗದೇವರಾಯನ ರಾಜ್ಯವೆಲ್ಲವು ಮೈಸೂರುರಾಜ್ಯಕ್ಕೆ ಸೇರ್ಪಡೆಯಾಯಿತು. ಚಾಮುರಾಜನು ವಾಲ್ಮೀಕಿರಾಮಾಯಣವನ್ನು ಕನ್ನಡ ಗದ್ಯದಲ್ಲಿ ಅನುವಾದಿಸಿರುವನು. ಇದು ಚಾಮುರಾಜೋಕ್ತಿವಿಲಾಸವೆಂದು ಹೆಸರುಗೊಂಡಿದೆ.

ಹಿಂದಿನ ಆಳಿಕೆಯಲ್ಲಿ ಇಕ್ಕೇರಿಗೆ ಒಡೆಯನಾಗಿದ್ದ ವೆಂಕಟಪ್ಪ ನಾಯಕನು ಅಚಲವಾದ ರಾಜನಿಷ್ಠೆಯಿಂದ ವರ್ತಿಸಿ ಪಶ್ಚಿಮ ಪ್ರದೇಶದಲ್ಲಿ ಸಾಮ್ರಾಜ್ಯಕ್ಕೆ ಬಲಿಷ್ಠ ಆಧಾರವಾಗಿ ನಿಂತುಕೊಂಡನು. ರಾಜ್ಯ-ವಿಪ್ಲವದ ಗಂಡಾಂತರದಲ್ಲಿ ಸಾಮ್ರಾಜ್ಯವನ್ನು ಆಕ್ರಮಿಸಬೇಕೆಂದು ಹವಣಿಸಿದ ವಿಜಾಪುರದ ಸುಲ್ತಾನನು ಈ ನಾಡಿನಲ್ಲಿ ದಂಡನ್ನು ಕಳುಹಿದನು. ನಾಯಕನು ಅದನ್ನು ಬಡಿದಟ್ಟಿ ಹಾನಗಲ್ಲಲ್ಲಿ (ಧಾರವಾಡಜಿಲ್ಲೆ) ವಿಜಯಸ್ತಂಭವನ್ನು ನಿಲ್ಲಿಸಿದನು. ಈತನು ಬಸವಪಟ್ಟಣ, ಗೇರಸೊಪ್ಪೆ, ಮೊದಲಾದೆಡೆಯ ಅರಾಜನಿಷ್ಠ ನಾಯಕರ ಸದ್ದನ್ನು ಅಡಗಿಸಿದನು. ನೆರೆಯ ಪ್ರದೇಶವನ್ನು ಆಕ್ರಮಿಸುತ್ತ ಕುಂಬಸೆ, ಬಿದನೂರು, ಕವಲೇದುರ್ಗ ಮೊದಲಾದ ಕೋಟೆಗಳನ್ನು ಸೆಳೆದುಕೊಂಡು ತನ್ನರಾಜ್ಯವನ್ನು ವಿಸ್ತಾರಗೊಳಿಸಿದನು.

ಅರಾಜಕದ ಪರ್ವಕಾಲದಲ್ಲಿ ಸಾಮ್ರಾಜ್ಯದ ನೊಗವನ್ನು ಕಿತ್ತೊಗೆದು ದಕ್ಷಿಣಪ್ರಾಂತದ ಅಧಿರಾಜನಾಗಬೇಕೆಂದು ಮದುರೆಯ ಮುತ್ತು ವೀರಪ್ಪನಾಯಕನು ಮಾಡಿದ ಪ್ರಯತ್ನವು ರಘುನಾಥನಾಯಕನ ವಿರೋಧದಿಂದ ವಿಫಲವಾದಂದಿನಿಂದ ಸಾಮ್ರಾಜ್ಯದ ವಿಷಯದಲ್ಲಿಯೂ ತಂಜಾವೂರ ವಿಷಯದಲ್ಲಿಯೂ ಆತನ ವಿದ್ವೇಷವು ದೃಢಮೂಲವಾಯಿತು. ಆತನ ತರುವಾಯ ಆತನ ತಮ್ಮನಾದ ತಿರುಮಲನು ಮದುರೆಯ ನಾಯಕನಾದನು (೧೬೨೩). ಈತನು ತನ್ನ ಅಣ್ಣನ ಮನೋವೃತ್ತಿಯನ್ನೆ ಅನುಸರಿಸಿ ಕೋಟೆಗಳನ್ನು ಕಟ್ಟಿಸಿ ದಂಡನ್ನು ಹೆಚ್ಚಿಸಿದನು. ಆದರೆ ಈತನು ಕೆಲಕಾಲ ಬಹಿರಂಗವಾಗಿ ಹೆಚ್ಚಿನ ವಿರೋಧವನ್ನು ಪ್ರಕಟಿಸಲಿಲ್ಲ.

ತೋಪೂರು ಕಾಳೆಗದಲ್ಲಿ ಪರಾಜಿತನಾದ ಜಿಂಜಿಯ ನಾಯಕನು ಸಾಮ್ರಾಜ್ಯದ ವಿರುದ್ಧವಾಗಿ ಇನ್ನೊಂದು ಪ್ರಯತ್ನವನ್ನು ಮಾಡಿ ಭಗ್ನವೀರ್ಯನಾದನು. ಅಂದಿನಿಂದ ಜಿಂಜಿಯು ಮತ್ತೆ ತಲೆಯೆತ್ತದೆ ಮೆತ್ತಗಾಗಿ ಬಾಳಿತು.

ಹಿಂದಿನ ಆಳಿಕೆಯಲ್ಲಿ ಸಾಮ್ರಾಜ್ಯದೊಡನೆ ಹೊಸತಾಗಿ ಉಂಟಾದ ಡಚ ಮತ್ತು ಇಂಗ್ಲಿಶರ ಸಂಬಂಧಗಳು ಈ ಆಳಿಕೆಯಲ್ಲಿ ಮುಂದುವರಿದುವು. ವಿಜಯನಗರದೊಡನೆ ಆಗಾಗ ವಿತುಷ್ಟವನ್ನು ಬೀರುತ್ತಿದ್ದ ಪೋರ್ತುಗೀಜರು, ಸಾಮ್ರಾಜ್ಯನೌಕೆಯು ಅರಾಜಕದ ಬಿರುಗಾಳಿಗೆ ಸಿಲುಕಿದ ಸುಸಂಧಿಯನ್ನು ನೋಡಿಕೊಂಡು ಪ್ರಕಟವಾಗಿಯೇ ಸಾಮ್ರಾಜ್ಯದ ಶತ್ರುತ್ವವನ್ನು ಹೂಡಿದರು. ವಿಜಯನಗರದ ಅಂಕಿತದಲ್ಲಿದ್ದ ಸೆಂಟ ಥೋಮ ಪಟ್ಟಣವು ವಿಜಯನಗರದ ಅಧಿಕಾರವನ್ನು ಕಿತ್ತೊಗೆದು ಸ್ವತಂತ್ರವಾಯಿತು (೧೬೧೪). ಇವರೀ ದ್ರೋಹಕ್ಕೆ ಶಾಸನವಾಗಿ ತಂಜಾವೂರ ನಾಯಕನು ನೆಗಾಪಟ್ಟಣದಲ್ಲಿ ನೆಲೆಸಿದ ಪೋರ್ತುಗೀಜರನ್ನು ಅಲ್ಲಿಂದ ತಳ್ಳಿದನು. ಅಲ್ಲಿಂದ ಇವರು ಲಂಕೆಗೆ ಹೋಗಿ ವಿಜಯನಗರದ ವಿರೋಧವನ್ನು ಮುಂದುವರಿಸಿದರು. ಇವರು ತೋಪೂರ ಕಾಳೆಗದಲ್ಲಿ ಸಾಮ್ರಾಜ್ಯದ್ರೋಹಿಯಾದ ಮುತ್ತುವೀರಪ್ಪನ ಪಕ್ಷವನ್ನು ಕೂಡಿದರು. ರಘುನಾಥನಾಯಕನು ದೇಶಕಂಟಕರಾದ ಇವರ ಬಾಧೆಯನ್ನು ಕುಗ್ಗಿಸಲು ಲಂಕೆಯ ಮೇಲೆ ದಂಡೋಪಾಯವನ್ನು ಕೈಕೊಳ್ಳಬೇಕಾಯಿತು (೧೬೨೭).

ಅತ್ತ ಪೋರ್ತುಗೀಜರ ಪ್ರತಿಸ್ಪರ್ಧಿಗಳಾದ ಡಚ ಮತ್ತು ಇಂಗ್ಲಿಶರ ಉದ್ಯೋಗಗಳು ಬೆಳೆಯತೊಡಗಿದ್ದುವು. ಅವರು ಪೋರ್ತುಗೀಜರ ಪೇಟೆಗಳನ್ನು ಕಸಿಯಲಾರಂಭಿಸಿದ್ದರು. ಪೂರ್ವದಂಡೆಯ ಮೇಲೆ ಪೆದ್ದಪಲ್ಲಿ, ಮಛಲಿಪಟ್ಟಣಗಳಲ್ಲಿ ಕಾಲೂರಿದ (೧೬೧೧) ಇಂಗ್ಲಿಶರು ಪಶ್ಚಿಮದಂಡೆಯ ಮೇಲೆಯೂ ಕಾಲಿಕತ ಮೊದಲಾದೆಡೆಯಲ್ಲಿ ಸ್ಥಾಪಿತರಾದರು(೧೬೧೬). ಮುಂದೆ ಪೋರ್ತುಗೀಜರನ್ನು ಪ್ರತಿಭಟಿಸುವ ಉದ್ದೇಶದಿಂದ ಡಚ ಮತ್ತು ಇಂಗ್ಲಿಶ ವರ್ತಕರಲ್ಲಿ ಪರಸ್ಪರ ಸಹಕಾರ್ಯದಿಂದ ಸಂಯುಕ್ತವ್ಯಾಪಾರ ಮಾಡಬೇಕೆಂದು ಒಡಂಬಡಿಕೆಯಾಯಿತು. ಈ

ಮೇರೆಗೆ ಡಚರ ಬೀಡಾದ ಪುಲಿಕತದಲ್ಲಿಯೂ ಇಂಗ್ಲಿಶರಿಗೆ ಪ್ರವೇಶವು ದೊರೆಕಿತು (೧೬೨೯).

ಆದರೆ ಅಲ್ಪಾವಧಿಯಲ್ಲಿಯೆ ಈ ಉಭಯರಲ್ಲಿ ವೈಮನಸ್ಯವು ಹುಟ್ಟಿತು. ಪೂರ್ವದ ನಡುಗಡ್ಡೆಯು ಅಂಬೋಯಿನಾ ಎಂಬಲ್ಲಿ ಡಚರು ಮಾಡಿದ ಇಂಗ್ಲಿಶರ ಕೊಲೆಯಿಂದ ಅದು ಏಕೋಪಕ್ಕೆ ಹೋಗಿ(೧೬೨೩), ಮತ್ತೆ ಈ ಉಭಯರು ವಿಭಕ್ತರಾದರು. ಇವರಲ್ಲದೆ, ಡೆನ್ಸರು ಮತ್ತು ಫ್ರೆಂಚರು ಈ ಇನ್ನೆರಡು ಯುರೋಪದ ಜನಾಂಗಗಳು ಈ ಕಾಲದಲ್ಲಿ ವ್ಯಾಪಾರದ ಅಭಿಲಾಷೆಯಿಂದ ಭರತಖಂಡದತ್ತ ದೃಷ್ಟಿಯನ್ನು ಹೊರಳಿಸಿದುವು. ಡಚರಿಂದ ಅಗಲಿದ ಇಂಗ್ಲಿಶರು ಪೂರ್ವದ್ವೀಪಗಳ ಗೊಡವೆಯನ್ನು ಬಿಟ್ಟು, ಭಾರತದ ಪೂರ್ವದಂಡೆಯ ಮೇಲೆಯೇ ಹೆಚ್ಚಾಗಿ ಪರಿಶ್ರಮಪಟ್ಟು ತಮ್ಮ ಕಾರ್ಯಕಲಾಪಗಳನ್ನು ಬೆಳೆಸಿಕೊಂಡರು. ಅವರು ೧೬೩೦ರಷ್ಟರಲ್ಲಿ ಅರ್ಮಗಾಂವ ಮೊದಲಾದ ಕೆಲವು ಹೊಸ ಕೇಂದ್ರಗಳನ್ನು ಸ್ಥಾಪಿಸಿಕೊಂಡರು.

ರಾಮದೇವರಾಯನ ಆಡಳಿತವು ನಿಸ್ಸತ್ವವೂ ನಿಸ್ತೇಜವೂ ಆಯಿತು. ಆತನ ಆಳಿಕೆಯ ಆರಂಭದಲ್ಲಿ ಮೂರು ವರ್ಷಗಳ ವರೆಗೆ ನಡೆದ ದಾರುಣವಾದ ಜ್ಞಾತಿಯುದ್ಧದಲ್ಲಿ ಜಯಲಕ್ಷ್ಮಿಯು ಕೊನೆಗೆ ಆತನನ್ನೇ ವರಿಸಿದಳಾದರೂ ಈ ಆಘಾತದ ಭಯಂಕರವಾದ ಗಾಯಗಳಿಂದ ಸಾಮ್ರಾಜ್ಯವು ಬಹುಕಾಲ ನರಳುತ್ತ ಬಿದ್ದಿತು. ಈ ಕದನದ ಘೋರವಾದ ಪರಿಣಾಮಗಳು ಚಿರಕಾಲಿಕವಾಗಿ ಸಾಮ್ರಾಜ್ಯವನ್ನು ಬಾಧಿಸಿ, ಅದರ ಅಂತ್ಯಕಾಲವನ್ನು ಸಮೀಪಕ್ಕೆ ಎಳೆದುವು. ರಾಕ್ಷಸತಂಗಡಿಯಿಂದ ಹತಪ್ರಭವಾದ ವಿಜಯನಗರಸಾಮ್ರಾಜ್ಯವು ಈ ಹಿಂದಿನ ವೆಂಕಟಪತಿರಾಯನ ಆಳಿಕೆಯಲ್ಲಿ ಮತ್ತೆ ಬಲವಾಗಿ ಚೇತರಿಸಿಕೊಂಡೆದ್ದು ಉತ್ಕರ್ಷಾಭಿಮುಖವಾಗಿದ್ದಿತು. ಶ್ರೀರಂಗನು ದೊರೆಯಾದ ಸಮಯದಲ್ಲಿ ಬಲಯುತವೂ ಶಾಂತಿಪೂರ್ಣವೂ ಆದ ಸಾಮ್ರಾಜ್ಯವೆ ಆತನ ಕೈಗೆ ಸೇರಿತ್ತು. ಬಹು ಅನುಕೂಲವಾದ ಈ ಪರಿಸ್ಥಿತಿಯಲ್ಲಿ ಸಾಮ್ರಾಜ್ಯರಥದ ಕಡಿವಾಣವನ್ನು ಹಿಡಿದ ಕರಗಳು ಬಲಿಷ್ಠವೂ ಕುಶಲವೂ ಆಗಿದ್ದರೆ, ಸಾಮ್ರಾಜ್ಯದ ಭಾಗ್ಯೋದಯವು ಮತ್ತೆ ಆಗಬಹುದಾಗಿತ್ತು.

ಆದರೆ ದುರ್ದೈವದಿಂದ ಶ್ರೀರಂಗನು ರಾಜ್ಯವಾಳಲು ಅಪಾತ್ರನೆಂಬುದು ಅಲ್ಪಾವಧಿಯಲ್ಲಿ ಸಿದ್ಧವಾಯಿತು. ವಿರೋಧಿಗಳ ಅಲ್ಪವಾದ ಪ್ರಹಾರವು ಆತನನ್ನು ನೆಲಕ್ಕುರುಳಿಸಿತು. ಮುಂದಿನ ಅರಾಜಕದಲ್ಲಿ ಸಾಮ್ರಾಜ್ಯದ್ರೋಹಿಗಳ ಹಾಗೂ ಸ್ವಾರ್ಥಸಾಧಕರ ಸ್ವೈರಾಚಾರಕ್ಕೆ ಯಥೇಷ್ಟವಾಗಿ ಅನುವು ದೊರೆತಿತು. ಬಳಿಕ ಅನಾಯಕತ್ವವು ಅಡಗಿ ರಾಮದೇವರಾಯನ ಅರಸೊತ್ತಿಗೆಯು ಪ್ರಸ್ಥಾಪಿತವಾದರೂ ಈ ಕೋಲಾಹಲದಲ್ಲಿ ಸಡಲಿದ ಸಾಮ್ರಾಜ್ಯದ ಕಟ್ಟು ಮತ್ತೆಂದಿಗೂ ಬಿಗಿಯಾಗಲಿಲ್ಲ. ಇದರಿಂದ ಸಾಮ್ರಾಜ್ಯಸಂಚಾಲನೆಗೆ ಆವಶ್ಯಕವಾಗಿದ್ದ ಕೇಂದ್ರ-ಪ್ರಭುತ್ವವು ಕ್ಷೀಣವಾಯಿತು. ಇದರಿಂದ ಸಾಮ್ರಾಜ್ಯದ ಅವಯವಗಳಾದ ಮಂಡಲಗಳ ಮತ್ತು ಸಾಮಂತರ ಮೇಲಿನ ನಿಯಂತ್ರಣವೂ ನಿಯಮನವೂ ಕಡಿಮೆಯಾಗಿ ಅವುಗಳಲ್ಲಿ ಸ್ವೈರವೃತ್ತಿ ಮತ್ತು ಸ್ವಪ್ರತಿಷ್ಠೆ ಇವುಗಳು ಪ್ರಬಲವಾದುವು. ಈ ಜ್ಞಾತಿಯುದ್ಧವು ರಾಕ್ಷಸತಂಗಡಿಯ ತರುವಾಯ ವಿಜಯನಗರದ ವಿನಾಶಕ್ಕೆ ಕಾರಣವಾದ ಎರಡನೆಯ ಪ್ರಚಂಡ ಆಘಾತವಾಗಿದೆ. ರಾಕ್ಷಸತಂಗಡಿಯಿಂದ ವಿಜಯನಗರದ ಪ್ರತಾಪ-ಪ್ರಭಾವಗಳು ಕುಗ್ಗಿದುವು. ಈ ಅಂತಃಕಲಹದಿಂದ ವಿಜಯನಗರದ ಅಂತಃಶಕ್ತಿಯು ಕುಂಠಿತವಾಯಿತು. ಹೀಗೆ ಅಂತಃಶಕ್ತಿಯನ್ನು ಕಳೆದುಕೊಂಡು ಸತ್ವಹೀನವಾದ ಸಾಮ್ರಾಜ್ಯದ ಅಧಃಪಾತವಾದರೂ ಬಹಳ ದೂರದ ದಾರಿಯಾಗಿರಲಿಲ್ಲ.

ಈ ಜ್ಞಾತಿಯುದ್ಧವು ಸಾಮ್ರಾಜ್ಯದ್ರೋಹಿಗಳ ಮತ್ತು ಪರಕೀಯರ ಸ್ವೇಚ್ಛಾಚಾರಕ್ಕೆ ಆಸ್ಪದವನ್ನು ಹೇಗೆ ಕಲ್ಪಿಸಿಕೊಟ್ಟಿತು ಎಂಬುದು ಮೇಲೆ ವಿವರಿಸಿದ ಮದುರೆಯ ನಾಯಕನ ಮತ್ತು ಪೋರ್ತುಗೀಜರ ಉದಾಹರಣೆಗಳಿಂದ ಸ್ಪಷ್ಟವಾಗುವುದು. ದಾಯಾದಿಗಳಲ್ಲಿಯ ಈ ಕದನದಿಂದ ಘಾತುಕವಾದ ಇನ್ನೂ ಕೆಲವು ಪರಿಣಾಮಗಳು ಉಂಟಾಗಿ ಸ್ವಲ್ಪ ಕಾಲದಲ್ಲಿಯೆ ಅವುಗಳ ವಿಪತ್ತಿಗೆ ತುತ್ತಾದ ದಕ್ಷಿಣ ಭಾರತೀಯ ಜನಾಂಗವು ಬಹು ಕಾಲ ತೊಳಲಿ ಒಳಲಿ ಬೆಂಡಾಗಬೇಕಾಯಿತು.

ಈ ಯುದ್ಧದಿಂದ ದೇಶದಲ್ಲಿ ದುರ್ಭಿಕ್ಷ, ಬರಗಾಲಗಳ ಬೇಗೆಯು

ಹಬ್ಬಿ ಬಡತನವು ಹೆಚ್ಚಿತು. ಜೀವನಕ್ಕೆ ಆವಶ್ಯಕವಾದ ಪದಾರ್ಥಗಳು ದೊರೆಯದಂತಾಗಿ ಜನರು ತಮ್ಮ ಮಕ್ಕಳು-ಮರಿಗಳನ್ನು ಮಾರಿಕೊಳ್ಳಲು ಉದ್ಯುಕ್ತರಾದರು. ಡಚ, ಇಂಗ್ಲಿಶ್ ಮೊದಲಾದ ವರ್ತಕರು, ವಿಶೇಷ ವಾಗಿ ಡಚ ವರ್ತಕರು, ದೇಶದ ಈ ದುರ್ಗತಿಯ ಲಾಭವನ್ನು ತೆಗೆದು ಕೊಂಡು ಈ ಮಾನವಪ್ರಾಣಿಗಳನ್ನು ಕೊಂಡಾಗಲಿ, ಕದ್ದು ತಂದಾಗಲಿ ಮಾರುವ ವ್ಯವಹಾರವನ್ನು ಪ್ರಾರಂಭಿಸಿ ಧನಸಂಪನ್ನರಾದರು. ಇದ ರಿಂದ ರಾಷ್ಟ್ರವು ಅಧಃಪತನಕ್ಕಿಳಿದು ಭಾರತೀಯ ಚರಿತ್ರೆಯಲ್ಲಿ ನೋಡಲಪರೂಪವಾಗಿದ್ದ, ಅಧಮವಾದ ದಾಸವಿಕ್ರಯಸಂಪ್ರದಾ ಯವು ಕೆಲಕಾಲ ರೂಢಿಗೆ ಬಂದಿತು ! ಈ ಸ್ಥಿತಿಯನ್ನು ಹೋಗಲಾಡಿಸಿ ಇಂತಹ ಪದ್ಧತಿಯನ್ನು ನಿಲ್ಲಿಸಿ, ಜನರ ಗೋಳನ್ನು ಹಿಂಗಿಸುವ ಉಪಾಯ ಗಳನ್ನು ಜನನಾಯಕರಾರೂ ಕಲ್ಪಿಸಲಿಲ್ಲ.

ನಿಕೃಷ್ಟವಾದ ಈ ಪರಿಸ್ಥಿತಿಯು ಸ್ವಲ್ಪ ವರ್ಷ ಮುಂದುವರಿ ಯಿತು. ಕಾಲದುದಕ್ಕೆ ಅಖಿಲಭಾರತದಲ್ಲಿ ಹಿಂದೆ ಎಂದೂ ಕಾಣದ ರೌದ್ರಸ್ವರೂಪಿಯಾದ ಕ್ಷಾಮವು ಉಂಟಾಗಿ ದೇಶವು ಭೀಷಣವಾದ ದುರ್ದೆಸೆಗೀಡಾಯಿತು (೧೬೩೦.) ಈ ವರ್ಷದ ಹಿಂದೆ ಮೂರು ವರ್ಷ ಗಳ ವರೆಗೆ ಮಳೆ ಬೆಳೆಗಳು ಸರಿಯಾಗಿ ಇರಲಿಲ್ಲ. ಭಯಾನಕವಾದ ಈ ಬರಗಾಲದಲ್ಲಿ ಒಕ್ಕಲಿಗರು, ನೇಕಾರರು ಮುಂತಾದ ಒಡಜನರು ಹಿಂಡು ಹಿಂಡಾಗಿ ದೇಶಾಂತರಗಳಿಗೆ ಗುಳೆಕಟ್ಟಿ, ಅಲೆದಲೆದು ಪ್ರಾಣಾಧಾರವು ದೊರೆಯದೆ ಪಟಪಟನೆ ಮೃತ್ಯುವಿನ ಬಾಯಿಗೆ ಗುರಿಯಾದರು. ಊರೂ ರಲ್ಲಿ ಹೆಣಗಳೇ ಹೆಣಗಳು ದೃಷ್ಟಿಗೆ ಬೀಳತೊಡಗಿದುವು !

ಕೆಲಕಾಲದಿಂದ ಪ್ರಾಧಾನ್ಯವನ್ನು ಪಡೆಯುತ್ತಿದ್ದ ಮದುರೆ, ತಂಜಾವೂರು ಮೊದಲಾದ ವಿಜಯನಗರದ ಸಾಮಂತ ಅರಸರು ಸಮ್ರಾ ಜರ ಸಂಪ್ರದಾಯವನ್ನು ಅನುಸರಿಸಿ ವಿದ್ಯೆ ಕಲೆಗಳಿಗೆ ಹೆಚ್ಚು ಹೆಚ್ಚು ಆಶ್ರಯ-ಪ್ರೋತ್ಸಾಹಗಳನ್ನು ಸಲ್ಲಿಸುತ್ತಲಿದ್ದರು. ತಂಜಾವೂರ ರಘು ನಾಥನಾಯಕನು ಸಮರವಿದ್ಯೆಯಂತೆ ಸಂಗೀತಕಲೆಯಲ್ಲಿಯೂ ಸಂಸ್ಕೃತ ಮತ್ತು ಆಂಧ್ರ ಸಾಹಿತ್ಯದಲ್ಲಿಯೂ ಬಲ್ಲಿದನಾಗಿದ್ದನು. ವೀಣೆಯಲ್ಲಿಯೂ

ಪ್ರವೀಣನಾಗಿದ್ದನು. ಸಂಗೀತಸುಧಾ ಎಂಬ ಸಂಸ್ಕೃತ ಗ್ರಂಥವನ್ನು ಬರೆದನು. ಇದರಲ್ಲಿ ಆತನು ಹೊಸತಾಗಿ ಕಲ್ಪಿಸಿದ ಕೆಲವು ತಾಳರಾಗಗಳ ವರ್ಣನೆಯುಂಟು. ಆತನು ಪಾರಿಜಾತಾಪಹರಣಂ, ವಾಲ್ಮೀಕಿ ಚರಿತ್ರಂ ಮೊದಲಾದ ಹಲವು ಕಾವ್ಯಗಳನ್ನು ರಚಿಸಿದನು.

ಇಕ್ಕೇರಿಯ ವೆಂಕಟಪ್ಪನಾಯಕನು ತಾನು ವೀರಶೈವಮತೀಯನಾಗಿದ್ದರೂ ಉದಾರವಾದ ಧರ್ಮಭಾವನೆಯುಳ್ಳವನಾಗಿದ್ದನು. ಈತನು ಅನಂತಪುರದಲ್ಲಿ ಚಂಪಕಸರಸ್ಸೆಂಬ ವೀರಶೈವ ಮಠವನ್ನು ಜೀರ್ಣೋದ್ಧಾರ ಮಾಡಿದನು. ಶೃಂಗೇರಿಯಲ್ಲಿ ಒಂದು ಹೊಸ ಮಠವನ್ನು ಕಟ್ಟಿಸಿದನು. ವೇದಪಾರಂಗತರಾದ ಪಂಡಿತರಿಗೆ ಅನೇಕ ಅಗ್ರಹಾರಗಳನ್ನು ಕೊಟ್ಟನು. ಯಜ್ಞಯಾಗಗಳನ್ನು ಮಾಡಿಸಿದನು. ತನ್ನ ರಾಜ್ಯದಲ್ಲಿಯ ಮಸೂತಿಗಳಿಗೆ ದಾನಗಳನ್ನು ಬಿಟ್ಟನು. ಈ ಮೊದಲಾಗಿ ವಿವಿಧವಾದ ಧರ್ಮಕಾರ್ಯಗಳನ್ನು ನೆರವೇರಿಸಿದನು. ಈತನ ಪ್ರೋತ್ಸಾಹದಿಂದ ಕಾವ್ಯ, ನಾಟಕ ಮೊದಲಾದ ಹಲವು ಸಾಹಿತ್ಯಗ್ರಂಥಗಳು ಉದಯಿಸಿದುವು. ಈತನು ಸ್ವತಃ ಪದ್ಮಪುರಾಣಾಂತರ್ಗತ ಶಿವಗೀತೆಗೆ ಸಂಸ್ಕೃತ ಟೀಕೆಯನ್ನು ಬರೆದನು.

ಪೆನುಗೊಂಡವು ಸಾಮ್ರಾಜ್ಯದ ಅಧಿಕೃತವಾದ ರಾಜಧಾನಿಯಾಗಿದ್ದರೂ ರಾಯನು ಹೆಚ್ಚಾಗಿ ವೆಲ್ಲೂರಲ್ಲಿ ವಾಸವಾಗಿರುತ್ತಿದ್ದನು. ರಾಯನು ಶ್ರೀವೈಷ್ಣವಮತಾನುಯಾಯಿಯಾಗಿದ್ದನು. ಆತನು ೧೬೩೨ ರಲ್ಲಿ ಮರಣ ಹೊಂದಿದನು. ರಾಯನಿಗೆ ಮಕ್ಕಳು ಇರಲಿಲ್ಲ. ಆದುದರಿಂದ ಆತನ ತರುವಾಯ ಅಳಿಯ ರಾಮರಾಯನ ಮೊಮ್ಮಗನೂ ರಾಜಬಾಂಧವರಲ್ಲಿ ಹಿರಿಯನೂ ಯುವರಾಜನೂ ಆಗಿದ್ದ

---

## ೬. ಇಮ್ಮಡಿ ವೆಂಕಟಪತಿರಾಯನು (೧೬೩೨-೪೨)

ಪಟ್ಟವೇರಿದನು. ಈತನ ಆಳಿಕೆಯು ಶಾಂತಿಪ್ರಧಾನವಾದರೂ ಬಲಶಾಲಿಯಾಗಲಿಲ್ಲ. ಹಿಂದಿನ ಆಳಿಕೆಯಲ್ಲಿ ಉಂಟಾದ ಪ್ರಭುತ್ವದ

ಅಸಮರ್ಥತೆಯು ಮತ್ತು ಮಂಡಲರಾಜ್ಯಗಳ ಪ್ರಾಬಲ್ಯವು ಮುಂದು ವರಿದು ಸಾಮ್ರಾಜ್ಯವು ಹೆಚ್ಚು ಹೆಚ್ಚು ಬಲಗುಂದಿತು. ಈ ಕಾಲದಲ್ಲಿ ಮದುರೆಯ ಮುಂತಾದ ನಾಯಕರು ಬಹಿರಂಗವಾಗಿ ಸಮ್ರಾಜನಿಗೆ ತಲೆಬಾಗುತ್ತ, ಪ್ರತ್ಯಕ್ಷವಾಗಿ ಸಾಮ್ರಾಜ್ಯವಿರೋಧವನ್ನು ಬಗೆಯ ಲಿಲ್ಲ. ಆದರೆ ಅವರಲ್ಲಿ ಈಗಾಗಲೆ ಬೇರೂರಿದ ಸ್ವಾರ್ಥ, ಮಹತ್ವಾ ಕಾಂಕ್ಷೆ, ಸ್ವಾತಂತ್ರ್ಯಾಭಿಲಾಷೆ ಇವುಗಳು ದಿನದಿನಕ್ಕೆ ವೃದ್ಧಿಂಗತ ವಾದುವು.

ಅರ್ಪಡಿ ಚಾಮರಾಜನು ಈ ಆಳಿಕೆಯಲ್ಲಿಯೂ ಮೈಸೂರ ದೊರೆ ಯಾಗಿದ್ದನು. ಆತನಿಗೂ ಮದುರೆಯ ತಿರುಮಲನಾಯಕನಿಗೂ ರಾಜ್ಯ ವಿಸ್ತಾರದ ವಿಚಾರದಲ್ಲಿ ಸ್ಪರ್ಧೆಯುಂಟಾಯಿತು. ಇವರಿಬ್ಬರೂ ಒಬ್ಬ ರೊಬ್ಬರ ರಾಜ್ಯದಲ್ಲಿ ದಾಳಿಗಳನ್ನು ಮಾಡಿದರು; ಕೊಳ್ಳೆಯನ್ನು ಹೊಡೆ ದರು. ಇವರೀತಿಕ್ಕಾಟದತ್ತ ರಾಯನು ಗಮನವನ್ನು ಕೊಡಲಿಲ್ಲ. ಪ್ರಭುಶಕ್ತಿಯ ಸತ್ವಹೀನತೆಗೆ ಇದೊಂದು ಪ್ರತ್ಯಕ್ಷಪ್ರಮಾಣವು ಆಗಿರು ವುದಲ್ಲವೆ ?

ಈ ಸಮಯದಲ್ಲಿ ಇಂಗ್ಲಿಶ್—ಪೋರ್ತುಗೀಜರಲ್ಲಿಯ ವಾಣಿಜ್ಯ-ಸ್ಪರ್ಧೆಯು ಶಾಂತವಾಗಿ, ಈ ಎರಡು ಜನಾಂಗಗಳಲ್ಲಿ ಸೌಹಾರ್ದದ ಒಡಂಬಡಿಕೆಯಾಯಿತು (೧೬೩೫). ಏಳು ವರ್ಷಗಳಾದ ಬಳಿಕ (೧೬೪೨) ಮತ್ತೊಮ್ಮೆ ಆದ ಸಂಧಾನದಿಂದ ದೃಢಮೂಲವಾದ ಇದೇ ಒಡಂಬಡಿಕೆಯು ಇಂದಿನವರೆಗೆ ನಡೆಯುತ್ತ ಬಂದಿದೆ. ಇದರಿಂದ ಇಂಗ್ಲಿ ಶರಿಗೆ ಅನೇಕ ಸೌಕರ್ಯಗಳು ಉಂಟಾಗಿ ಅವರ ಮಾರ್ಗವು ಸುಗಮ ವಾಯಿತು. ಸಾಹಸೋತ್ಸಾಹವು ಹೆಚ್ಚಿತು. ಅವರು ಹೊಸ ಹೊಸ ವ್ಯಾಪಾರದ ಪಾಳ್ಯಗಳನ್ನು ಸ್ಥಾಪಿಸಲು ಮುಂದುವರಿದರು. ಅರ್ಮ ಗಾಂವದಲ್ಲಿಯ ತಮ್ಮ ಕಾರ್ಯಾಲಯವನ್ನು ಕಿತ್ತಿದ ಇಂಗ್ಲಿಶರು, ಈಕಾಲ ದಲ್ಲಿ ವಿಜಯನಗರದ ಮಹಾಸೇನಾಪತಿಯೂ ಮುಖ್ಯಮಂತ್ರಿಯೂ ಕರ್ನಾಟಕದ ಅಧಿಪತಿಯೂ (Lord General of Carnatica) ಆಗಿದ್ದ ದಾಮರ್ಲ ವೆಂಕಟಾದ್ರಿನಾಯಕನಿಂದ ಅಪ್ಪಣೆಯನ್ನು ಪಡೆದುಕೊಂಡು

(೧೬೩೯) ಮೂಡಣ ದಂಡೆಯ ಮೇಲೆ ಮದ್ರಾಸಪಟಂ ಎಂಬ ಹಳ್ಳಿಯಲ್ಲಿ ತಮ್ಮ ಪಾಳ್ಯವನ್ನು ಸ್ಥಾಪಿಸಿದರು (೧೬೪೦). ಥಾಮಸ ಡೆ ಎಂಬ ಇಂಗ್ಲಿಶ ಅಧಿಕಾರಿಯ ಪ್ರಯತ್ನದಿಂದ ಈ ಅಪ್ಪಣೆಯು ದೊರೆತಿತು. ವೆಂಕಟಪತಿರಾಯನೂ ಇದಕ್ಕೆ ತನ್ನ ಸಮ್ಮತಿಯನ್ನಿತ್ತನು.

ಇಂಗ್ಲಿಶರು ಹೊಸದಾಗಿ ಆರಿಸಿನ ಈ ನೆಲೆಯು ಬಹುಕಾಲದಿಂದ ಪೋರ್ತುಗೀಜರ ಪಾಳ್ಯವಾಗಿದ್ದ ಸೆಂಟ ಥೋಮದಿಂದ ಉತ್ತರಕ್ಕೆ ಮೂರು ಮೈಲು ಇದ್ದಿತು. ಬಳಿಕ ಸ್ವಲ್ಪ ದಿನಗಳಲ್ಲಿಯೆ ಇಂಗ್ಲಿಶರು ಈ ಊರ ನೆರೆಯಲ್ಲಿ ಭದ್ರವಾದ ಕೋಟೆಯನ್ನು ಕಟ್ಟಿ ಅದಕ್ಕೆ ಫೋರ್ಟ ಸೆಂಟ ಜಾರ್ಜ ಎಂಬ ಹೆಸರನ್ನಿಟ್ಟರು. ಅತ್ಯಲ್ಪ ಕಾಲದಲ್ಲಿ ಈ ಸ್ಥಳವು ಇಂಗ್ಲಿಶರ ಪೂರ್ವಭಾಗದ ಕಾರ್ಯಕಲಾಪಗಳ ಪ್ರಮುಖಕೇಂದ್ರವಾಗುವ ಘನತೆಯನ್ನು ಪಡೆಯಿತು. ಈ ಹೊಸ ಕೋಟೆಯ ಸುತ್ತಲು ಒಂದು ಪಟ್ಟಣವು ನಿರ್ಮಾಣವಾಯಿತು. ಈ ಮುಂದಿನ ರಾಯನಾದ ಶ್ರೀರಂಗರಾಯನು ಇಂಗ್ಲಿಶರು ಪಡೆದುಕೊಂಡ ಮದ್ರಾಸದ ಈ ದಾನಪತ್ರವನ್ನು ಸ್ಥಿರಗೊಳಿಸಿ, ಈ ಹೊಸ ಊರನ್ನು ತನ್ನ ಹೆಸರಿನಿಂದ ಶ್ರೀರಂಗರಾಯಪಟ್ಟಣವೆಂದು ಕರೆದನು (೧೬೪೫). ಈ ದಾನಪತ್ರವನ್ನು ಮೊದಲು ಕೊಡಿಸಲಿಕ್ಕೆ ಕಾರಣನಾದ ಮೇಲ್ಕಂಡ ವೆಂಕಟಾದ್ರಿ-ನಾಯಕನ ತಂದೆಯಾದ ಚೆನ್ನನಾಯಕನ ಸ್ಮಾರಕವಾಗಿ ಈ ಪಾಳ್ಯಕ್ಕೆ ಚೆನ್ನಪಟ್ಟಣ ಎಂಬ ಹೆಸರೂ ಕೆಲವೆಡೆ ಬಳಕೆಗೆ ಬಂದಿತು. ಹೀಗೆ ವಿಜಯನಗರದ ಇಳಿಗಾಲದಲ್ಲಿ ಉದಯವಾದ ಇಂಗ್ಲಿಶರ ಈ ಪಾಳ್ಯವೆ ಈಗಣ ಭಾರತೀಯ ಆಂಗ್ಲ ಸಾಮ್ರಾಜ್ಯದ ಪ್ರಮುಖ ಕೇಂದ್ರ ನಗರಗಳಲ್ಲಿ ಒಂದಾದ ಮದ್ರಾಸನಗರಿಯಾಗಿ ಪರಿಣಮಿಸಿದೆ.

ರಾಯನ ಆಳಿಕೆಯ ಕೊನೆಯಲ್ಲಿ ಗೋವಳಕೊಂಡದ ಅಬ್ದುಲ್ಲಾ ಕುತುಬಶಹನು ಉದಯಗಿರಿ ಪ್ರಾಂತದಲ್ಲಿ ದಂಡಯಾತ್ರೆಯನ್ನು ಮಾಡಿ ಉದಯಗಿರಿ ಕೋಟೆಯನ್ನು ಸೆಳೆದುಕೊಂಡನು. ಬಳಿಕ ಆತನು ಅಲ್ಲಿಯ ಹಿಂದು ದೇವಾಲಯಗಳನ್ನು ಉಧ್ವಸ್ತಮಾಡಿ ಮಸೂತಿಯನ್ನು ಕಟ್ಟಿಸಿದನು (೧೬೪೨-೪೩). ಸಾಮ್ರಾಜ್ಯದ ಸತ್ವಹೀನತೆಗೆ ಇದು ಇನ್ನೊಂದು

ನಿದರ್ಶನವಾಗಿದೆ. ಸಾಮ್ರಾಜ್ಯದ ಅಧಿಕೃತರಾಜಧಾನಿಯು ಪೆನು ಗೊಂಡವಾಗಿದ್ದರೂ ವೆಲ್ಲೂರು ರಾಯನ ನೆಲೆವೀಡಾಗಿತ್ತು. ರಾಯನು ೧೬೪೨ರಲ್ಲಿ ಮರಣ ಹೊಂದಿದನು.

---

## ಇಪ್ಪತ್ತೈದನೆಯ ವಿಲಾಸ

# ೭. ಆರ್ವಡಿ ಶ್ರೀರಂಗರಾಯ (೧೬೪೨-೫೬)

### ಸಾಮ್ರಾಜ್ಯಭಂಗ (೧೬೫೬)

ಇಮ್ಮಡಿ ವೆಂಕಟಪತಿರಾಯನ ತರುವಾಯ ಶ್ರೀರಂಗರಾಯನು ವಿಜಯನಗರಸಾಮ್ರಾಜ್ಯದ ಪಟ್ಟವೇರಿದನು. ಆರ್ವಡಿ ಶ್ರೀರಂಗರಾಯ ನೆಂದು ಚರಿತ್ರಕಾರರು ಈತನನ್ನು ಗುರುತಿಸುವರು. ಈತನು ಇಮ್ಮಡಿ ವೆಂಕಟಪತಿರಾಯನ ತಮ್ಮನ ಕಿರಿಯ ಮಗನೂ ಅಳಿಯ ರಾಮರಾಯನ ತಮ್ಮನಾದ ವೆಂಕಟಾದ್ರಿಯ ಮೊಮ್ಮಗನಾದ ಗೋಪಾಲನ ದತ್ತಕ ಪುತ್ರನೂ ಆಗಿದ್ದು, ಹಿಂದಿನ ಆಳಿಕೆಯಲ್ಲಿ ಯುವರಾಜನಾಗಿ ರಾಜ್ಯ-ಕಾರ್ಯದಲ್ಲಿ ಭಾಗಿಯಾಗಿದ್ದನು.

ರಾಯನ ಆಳಿಕೆಯು ಗಲಿಬಿಲಿಯಲ್ಲಿಯೆ ಪ್ರಾರಂಭವಾಯಿತು. ಈತನಿಗೆ ಪಟ್ಟವಾದುದು ಹಲವರಿಗೆ ಸಮ್ಮತವಿರಲಿಲ್ಲ. ಇಂತಹರಲ್ಲಿ ಹಿಂದಿನ ಆಳಿಕೆಯಲ್ಲಿ ಮಹಾಸೇನಾಪತಿಯೂ ಪ್ರಮುಖಮಂತ್ರಿಯೂ ಆಗಿದ್ದ ದಾಮರ್ಲ ವೆಂಕಟಾದ್ರಿನಾಯಕನು ಪ್ರಧಾನನಾಗಿದ್ದನು. ಈತನು ರಾಯನೊಡನೆ ಪ್ರಕಟವಾಗಿ ವಿರೋಧವನ್ನು ಹೂಡಿ ಗೋಲಕೊಂಡದ ಸಹಾಯವನ್ನು ಬರಮಾಡಿಕೊಂಡನು. ಈ ವರ್ತಮಾನವು ತಿಳಿ ದೊಡನೆ ರಾಯನು ಆತನ ಅಧಿಕಾರವನ್ನು ಕಸಿದು, ಆತನನ್ನು ಸೆರೆಯಲ್ಲಿ ಇರಿಸಿ, ಪೂರ್ವಪ್ರಾಂತದ ಆತನ ಅಧಿಕಾರವನ್ನು ಮಲ್ಲಯ್ಯನೆಂಬವನಿಗೆ

ಒಪ್ಪಿಸಿದನು. ಈ ಮಲ್ಲಯ್ಯನು ಮೊದಲು ವರ್ತಕನಾಗಿದ್ದು ಪುಲಿ ಕತದಲ್ಲಿ ಡಚರೊಡನೆ ಮಧ್ಯಸ್ಥಿಕೆಯನ್ನು ( ದಲಾಲಿ ) ಮಾಡಿಕೊಂಡು ಬಾಳುವವನಾಗಿದ್ದನು.

ಈ ಕಾಲದಲ್ಲಿ ಪೂರ್ವದಂಡೆಯ ಮೇಲೆ ಪುಲಿಕತದಲ್ಲಿ ಪ್ರತಿಷ್ಠಿತ ರಾದ ಡಚರು ಆದೀಗ ಮದ್ರಾಸ ಪಾಳ್ಯದಲ್ಲಿ ತಲೆಯೆತ್ತುತ್ತಲಿರುವ ಇಂಗ್ಲಿಶರೊಡನೆ ಅಸೂಯಾಪರರಾಗಿದ್ದರು. ಆ ನಾಡಿನಲ್ಲಿ ಹೊಸತಾಗಿ ವಿಜಯನಗರದ ಅಧಿಕಾರಿಯಾದ ಮಲ್ಲಯ್ಯನು ರಾಜದ್ರೋಹಿಯಾದ ವೆಂಕಟಾದ್ರಿಯ ಅಂಕಿತದಲ್ಲಿದ್ದ ಪ್ರಾಂತದ ಮೇಲೆ ಪೂರ್ಣವಾಗಿ ಅಧಿ ಕಾರವನ್ನು ಪಡೆಯಲೆಳಸಿ ಈ ಕಾರ್ಯದಲ್ಲಿ ಡಚರ ಸಹಾಯವನ್ನು ಕೋರಿದನು. ಆತನು ಮಿತ್ರರಿಗಳಾದ ಡಚರ ಪ್ರೇರಣೆಯಿಂದ ಇಂಗ್ಲಿ ಶರ ಮದ್ರಾಸಪಾಳ್ಯವನ್ನು ಕಸಿದುಕೊಳ್ಳುವ ಹವಣಿಕೆಯಲ್ಲಿದ್ದನು. ಅಷ್ಟರಲ್ಲಿ ವೆಂಕಟಾದ್ರಿನಾಯಕನು ಕರೆದಿದ್ದ ಗೋವಳಕೊಂಡದ ದಂಡು ಬಂದು, ಮಲ್ಲಯ್ಯನನ್ನು ಕೂಡಿದುದಕ್ಕಾಗಿ ಡಚರ ಪುಲಿಕತ ಬಂದರ ವನ್ನು ಮುತ್ತಲಣಿಯಾಯಿತು. ಮಲ್ಲಯ್ಯನು ಯೋಚನೆಗೆ ಒಳಗಾದನು. ಈ ಹೊತ್ತಿಗೆ ರಾಯನು ಕಳುಹಿದ ವಿಜಯನಗರದ ದಳವು ಆತನ ಸಹಾಯಕ್ಕೆ ಬಂದಿತು. ಗೋವಳಕೊಂಡದ ಸೇನೆಯು ಉದಯಗಿರಿಯ ಬಳಿಯಲ್ಲಿ ವಿಜಯನಗರದವರಿಂದ ಬಲವಾದ ಪೆಟ್ಟನ್ನು ತಿಂದು ಸೋತು ಬಹುದೂರ ಓಡಿಹೋಯಿತು (೧೬೪೪).

ಮುಂದೆ ಕೆಲದಿನಗಳಾಗುವಷ್ಟರಲ್ಲಿ ಮಲ್ಲಯ್ಯನಿಗೆ ಡಚರೊಡನೆ ವೈಮನಸ್ಯವು ಹುಟ್ಟಿತು. ಶ್ರೀರಂಗರಾಯನು ತನ್ನ ರಾಜ್ಯದಲ್ಲಿಯ ಡಚರ ಸರಕುಗಳನ್ನೆಲ್ಲ ಸ್ವಾಧೀನಪಡಿಸಿಕೊಂಡು ಮಾರಾಟಮಾಡಲು ಆಜ್ಞೆಯನ್ನು ವಿಧಿಸಿದನು. ಡಚರು ಇದಕ್ಕೆ ಪ್ರತಿಕಾರವನ್ನು ಹೂಡಿ ದರು. ಮಲ್ಲಯ್ಯನು ಪುಲಿಕತವನ್ನು ಮುತ್ತಿದನು. ಪುಲಿಕತವು ಬೇಗ ವಶವಾಗಲಿಲ್ಲ. ಮುತ್ತಿಗೆಯು ಲಂಬಿಸಿತು.

ಈ ಗಲಭೆಯಲ್ಲಿ ತಮ್ಮ ಸುರಕ್ಷಿತತೆಯ ಬಗೆಗೆ ಭಯಗ್ರಸ್ತರಾದ ಫೋರ್ಟ ಸೆಂಟ ಜಾರ್ಜದ (ಮದ್ರಾಸ) ಇಂಗ್ಲಿಶರು ರಾಯನಲ್ಲಿಗೆ

ರಾಯಭಾರಿಯನ್ನು ಕಳುಹಿ ತಮ್ಮ ಪಾಳ್ಯವನ್ನು ಕುರಿತು ಹಿಂದೆ ವೆಂಕಟಾದ್ರಿನಾಯಕನ ಮುಖಾಂತರ ಸಂಪಾದಿಸಿದ ಆಜ್ಞಾಪತ್ರವನ್ನು ಶ್ರೀರಂಗರಾಯನಿಂದ ಇನ್ನೊಮ್ಮೆ ದೃಢಪಡಿಸಿಕೊಳ್ಳಬೇಕೆಂದು ಬಗೆದರು. ರಾಯನು ಇವರ ಈ ಬೇಡಿಕೆಗಳನ್ನು ಮನ್ನಿಸಿದನು. ಇಂಗ್ಲಿಶರು ಈ ಪಾಳ್ಯದಲ್ಲಿ ತಂದು ಮಾರುವ ಸರಕುಗಳ ಮೇಲೆ ಎಲ್ಲ ಸುಂಕಗಳನ್ನು ಮುಕ್ತಾಯಮಾಡಿದನು. ಅಲ್ಲಿಯ ನ್ಯಾಯ ಮತ್ತು ಆಡಳಿತದ ಅಧಿಕಾರವನ್ನು ದಯಪಾಲಿಸಿದನು (೧೬೪೫).

ಆದರೆ ರಾಯನು ಇಂತಹ ಕಿರುಕುಳಗಳಲ್ಲಿ ಹೆಚ್ಚು ಹೊತ್ತು ತೊಡಗಿರದಂತೆ, ಬೆರೆಡೆಗೆ ಘಟನೆಗಳು ಉಂಟಾಗುತ್ತಿದ್ದುವು. ಭೀಕರವಾದ ಗಂಡಾಂತರದ ಕರಿಮೋಡಗಳು ಸಾಮ್ರಾಜ್ಯದ ಮೇಲೆ ಕವಿಯಲಾರಂಭಿಸಿದ್ದುವು. ಈ ಸಂನಿವೇಶಗಳನ್ನು ಇದಿರಿಸಬೇಕಾದ ರಾಯನು ಈ ಪುಲಿಕತದ ಮುತ್ತಿಗೆಯನ್ನು ಕಡೆಗಣಿಸಿ ತನ್ನ ಲಕ್ಷವನ್ನೆಲ್ಲ ಅತ್ತ ಹೊರಳಿಸಿದನು.

ಕಳೆದ ಮೂವತ್ತು ನಾಲ್ವತ್ತು ವರ್ಷಗಳಲ್ಲಿ ಉತ್ತರದ ಮುಹಮ್ಮದೀಯ ರಾಜ್ಯಗಳು ವಿಜಯನಗರದತ್ತ ಸುಳಿದಾಡಿರಲಿಲ್ಲ. ಇದಕ್ಕೆ ಅವುಗಳ ಅಸಮರ್ಥತೆಯಲ್ಲದೆ ಬೇರೆ ಸಂದರ್ಭಗಳೂ ನಿಮಿತ್ತವಾಗಿದ್ದುವು. ಈ ಸಮಯದಲ್ಲಿ ದಿಲ್ಲಿಯ ಮೊಗಲ ಸಮ್ರಾಜರು ದಕ್ಷಿಣ ಭಾರತವನ್ನು ಪಾದಾಕ್ರಾಂತಮಾಡುವ ಕಾರ್ಯಕ್ಕೆ ಕೈಹಾಕಿದ್ದರು. ಅವರು ತಮ್ಮ ಮಾರ್ಗದಲ್ಲಿ ಮೊದಲು ಅಡ್ಡಬರುವ ದಕ್ಷಿಣದ ಈ ಮುಹಮ್ಮದೀಯ ರಾಜ್ಯಗಳನ್ನು ಸ್ವಾಧೀನ ಪಡಿಸಿಕೊಳ್ಳುವ ಉದ್ಯೋಗದಲ್ಲಿ ನಿರತರಾಗಿದ್ದರು. ಅಕಬರ ಬಾದಶಹನಿಂದ ಪ್ರಾರಂಭವಾದ ಈ ದಕ್ಷಿಣ ದಿಗ್ವಿಜಯವು. ಆತನ ಮೊಮ್ಮಗನಾದ ಶಹಜಹಾನನ ಕಾಲದಲ್ಲಿ ಮುಂದುವರಿದು, ಮೊಗಲರು ದಕ್ಷಿಣದಲ್ಲಿ ತಮ್ಮ ವರ್ಚಸ್ಸನ್ನು ಹೆಚ್ಚು ಹೆಚ್ಚು ಬೀರುತ್ತ ಒಳಬಳಗೆ ನುಗ್ಗಲಾರಂಭಿಸಿದರು.

ಆಗ ದಕ್ಷಿಣಭಾರತದಲ್ಲಿ ಅಹಮುದನಗರ, ವಿಜಾಪುರ, ಗೋವಳಕೊಂಡ ಈ ಮೂರು ಮುಹಮ್ಮದೀಯ ರಾಜ್ಯಗಳು ಬಾಳಿದ್ದುವು.

ಇವುಗಳಲ್ಲಿ ಅಹಮುದನಗರವು ಮೊಗಲರ ಏರಾಟಕ್ಕೆ ಸೈಸೋತು ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು (೧೬೩೭). ಬಳಿಕ ಉಳಿದ ಎರಡು ರಾಜ್ಯಗಳ ಬಾರಿಯು ಬಂದಿತು. ಆದರೆ ಮೊಗಲಶಕ್ತಿಗೆ ತಲೆಬಾಗಿದುದರಿಂದ ಅವುಗಳ ಜೀವನರೇಷೆಯು ಮುಂದೆ ಅರ್ಧಶತಮಾನದ ವರೆಗೆ ಲಂಬಿಸಿತು. ವಿಜಾಪುರವು ಮೊಗಲರ ಅಧಿರಾಜ್ಯವನ್ನು ಒಪ್ಪಿಕೊಂಡು ನಿರ್ಭಯವಾಯಿತು (೧೬೩೪). ಬಳಿಕ ಬಲಗೊಂಡ ಆದಿಲಶಹನು ಈ ವರೆಗಿನ ಶಾಂತಿಯನ್ನು ಭಂಗಿಸಿ ವಿಜಯನಗರರಾಜ್ಯದಲ್ಲಿ ಏರಾಟವನ್ನು ಹೂಡಿದನು.

ವಿಜಾಪುರದ ಸೇನಾಪತಿಯಾದ ರಣದುಲ್ಲಾಖಾನನು ಶಹಜಿಯೊಂದಿಗೆ ವಿಜಯನಗರದ ಪಶ್ಚಿಮಭಾಗದ ಚಿಕ್ಕ ಚಿಕ್ಕ ಮಂಡಲಗಳ ಮೇಲೆ ದಾಳಿಮಾಡುತ್ತ, ಒಂದೊಂದಾಗಿ ಕೋಟೆಗಳನ್ನು ಕಸಿಯುತ್ತ ಮುಂದೆ ಸಾಗಿದನು. ಬಂಕಾಪುರ, ಹರಿಹರ, ತರಿಕೆರೆ ಮುಂತಾದ ಪ್ರದೇಶಗಳ ಮೇಲೆ ಆಕ್ರಮಣವಾಯಿತು. ವಿಜಾಪುರದ ದಂಡು ಮೈಸೂರ ರಾಜ್ಯದಲ್ಲಿ ನುಗ್ಗಿ ಶ್ರೀರಂಗಪಟ್ಟಣವನ್ನು ಮುತ್ತಿತು. ಆದರೆ ಮೈಸೂರವರ ಬಲವಾದ ಹೊಡೆತಕ್ಕೆ ಕಂಗೆಟ್ಟು ಹಿಂದೆಗೆಯಿತು. ಮುಂದೆ ಬೆಂಗಳೂರ ಮೇಲೆ ಏರಾಟವು ನಡೆದು ಅದು ವಿಜಾಪುರಕ್ಕೆ ಅಂಕಿತವಾಯಿತು (೧೬೩೮). ಬಳಿಕ ಈ ದಂಡಯಾತ್ರೆಯು ಮುಂದು ವರಿದು ಪೂರ್ವಕ್ಕೆ ಹೊರಳಿತು. ವೆಲ್ಲೂರು, ಜಿಂಜಿಯ ಕೋಟೆಗಳು ವಶವಾದುವು. ಈ ಮೇರೆಗೆ ಸ್ವಾಧೀನವಾದ ಕೋಲಾರ, ದೊಡ್ಡಬಳ್ಳಾಪುರ, ಸಿರಾ ಮುಂತಾದ ಘಟ್ಟದ ಮೇಲು-ಕೆಳಗಿನ ಪ್ರದೇಶಗಳ ಮೇಲೆ ಶಹಜಿಯು ಅಧಿಕಾರಿಯಾಗಿ ಸ್ಥಾಪಿತನಾದನು. ಮುಂದೆ ಈ ಪ್ರದೇಶವು ಆತನಿಗೆ ಉಂಬಳಿ (ಜಾಗೀರು) ಯಾಗಿ ದೊರೆತಿತು.

ಇದೊಂದೆ ವಿಪತ್ತು ಸಾಲದೆಂಬಂತೆ ಇನ್ನೊಂದು ಕಡೆಯಿಂದಲೂ ಕೋಲ್ಮಿಂಚು ಸೆಳೆಯಲಾರಂಭಿಸಿತು. ಇದೇ ಸುಮಾರಿಗೆ ಅತ್ತ ಗೋವಳಕೊಂಡವೂ ಇಷ್ಟುದಿನದ ಆಲಸ್ಯವನ್ನು ಕಿತ್ತೊಗೆದು ವಿಜಯನಗರ ರಾಜ್ಯದಲ್ಲಿ ದಾಳಿಯನ್ನಿಟ್ಟಿತು. ವಿಜಯನಗರದ ದೂರದ ಈಶಾನ್ಯದ

ಗಡಿಗಳು ಒಂದೊಂದಾಗಿ ಗೋವಳಕೊಂಡದ ಬಾಯಿಗೆ ತುತ್ತಾಗಲನು ವಾದುವು. ಮುಂದೆ ಸ್ವಲ್ಪ ಕಾಲದಲ್ಲಿ ಇಮ್ಮಡಿ ವೆಂಕಟಪತಿರಾಯನ ಕೊನೆಯ ಆಳಿಕೆಯಲ್ಲಿ ಉದಯಗಿರಿಯು ಕೈಬಿಟ್ಟು ಹೋದ ವರ್ತಮಾನವನ್ನು ಹಿಂದೆ ಹೇಳಿದೆ. ಪರಕೀಯರ ಈ ಆಕ್ರಮಣವನ್ನು ಇನ್ನಿಷ್ಟು ಸುಲಭಮಾಡುವುದಕ್ಕಾಗಿಯೊ, ಈ ಆಳಿಕೆಯ ಆರಂಭದಲ್ಲಿ ವೆಂಕಟಾದ್ರಿ ನಾಯಕನು ರಾಜ್ಯದ್ರೋಹವನ್ನು ಹೂಡಿ ಗೋವಳಕೊಂಡದವರಿಗೆ ಸ್ವಾಗತವನ್ನಿತ್ತನು.

ವೆಂಕಟಾದ್ರಿನಾಯಕನ ಈ ರಾಷ್ಟ್ರದ್ರೋಹದ ವರ್ತನೆಯಿಂದ ಪರಚಕ್ರಕ್ಕೆ ರಾಜಮಾರ್ಗವನ್ನು ಕಲ್ಪಿಸಿಕೊಟ್ಟಂತಾಯಿತು. ಅಲ್ಲದೆ, ಆತನ ಈ ಮೇಲ್ಪಂಕ್ತಿಯನ್ನು ಅನುಸರಿಸಲಿಕ್ಕೆ ವಿಜಯನಗರದ ಬೇರೆ ಮಂಡಲನಾಯಕರನ್ನು ಬಡಿದೆಬ್ಬಿಸಿದಂತೆ ಆಯಿತು. ಮೊದಲೇ ಸಾಮ್ರಾಜ್ಯಪ್ರಭುತ್ವವೆಂಬ ಆರಗಿನ ಮನೆಗೆ ಕೊಳ್ಳಿಯನ್ನು ಇಕ್ಕಲಿಕ್ಕೆ ಕಾದುಕೊಂಡು ಕುಳಿತಿದ್ದ ಮದುರೆಯ ನಾಯಕನು ಇದರಿಂದ ಎಚ್ಚತ್ತು ಮುಂದೆ ಅಲ್ಪಾವಧಿಯಲ್ಲಿ ಸಾಮ್ರಾಜ್ಯವಿನಾಶದ ಧ್ವಜವನ್ನು ಎತ್ತಿಹಿಡಿದನು. ಜಿಂಜಿಯ ಮೊದಲಾದ ಬೇರೆ ನಾಯಕರು ಆತನ ಧ್ವಜದ ಕೆಳಗೆ ಬಂದು ಸೇರಿದರು.

ವೆಂಕಟಾದ್ರಿನಾಯಕನ ಆವುತಣವನ್ನು ಅಂಗೀಕರಿಸಿ ಪುಲಿಕತದ ವರೆಗೆ ಬಂದ ಗೋವಳಕೊಂಡದ ದಂಡನ್ನು ರಾಯನು ಸ್ವಲ್ಪಕಾಲ ಹಿಂದೆ (೧೬೪೩) ಹಿಂದೂಡಿದ್ದನಷ್ಟೆ? ಆದರೆ ಅದರಿಂದ ಗೋವಳಕೊಂಡದ ಶಕ್ತಿಗೆ ತಡೆಯಾಗಿರಲಿಲ್ಲ. ಗೋವಳಕೊಂಡದ ಕೆಚ್ಚೆದೆಯ ಸೇನಾನಿಯಾದ ಮೀರಜುಮ್ಲನು ಮಹಾಸೇನೆಯನ್ನು ಸಜ್ಜುಗೊಳಿಸಿ ಅಧಿಕವಾದ ಆವೇಶದಿಂದ ವಿಜಯನಗರ ರಾಜ್ಯದಲ್ಲಿ ಧುಮುಕಿದನು (೧೬೪೫). ಆತನು ಒಂದರ ಮೇಲೊಂದು ಪ್ರದೇಶಗಳನ್ನು ಪಾದಾಕ್ರಾಂತ ಮಾಡುತ್ತ ರಾಯನ ನೆಲೆವೀಡಾದ ವೆಲ್ಲೂರನ್ನು ಸಮೀಪಿಸಿದನು. ಇದೇ ಸಮಯಕ್ಕೆ ವಿಜಾಪುರದ ಸೈನ್ಯವೂ ಘಟ್ಟವನ್ನಿಳಿದು ವೆಲ್ಲೂರತ್ತ ಸಾಗಿ ಬರುವಂತಹದಾಗಿತ್ತು. ಈ ಮೇರೆಗೆ ಇಬ್ಬದಿಯಿಂದ ಬಳಸಿಕೊಂಡು

ಬರುವ ಕ್ರೂರರಾದ ವಿಜಯನಗರದ ವೈರಿಗಳ ಇರುಕಿನಲ್ಲಿ ರಾಯನು ಸಿಕ್ಕುಬಿದ್ದನು.

ವಿಜಾಪೂರ—ಗೋವಳಕೊಂಡದ ದಂಡುಗಳು ಕೂಡಿಕೊಂಡು ರಾಯನ ಪ್ರೀತಿಯ ನೆಲೆವೀಡಾದ ವೆಲ್ಲೂರನ್ನು ಮುತ್ತಿದುವು. ಅವುಗಳನ್ನು ತಡೆಯಲು ಆಗಲಿ, ಇದಿರಿಸಲಾಗಲಿ, ರಾಯನು ಮಾಡಿದ ಪ್ರಯತ್ನಗಳೆಲ್ಲವು ನಿಷ್ಫಲವಾದುವು. ಆಗ ರಾಯನು ನಿರುಪಾಯನಾಗಿ, ಆ ಸ್ಥಳವನ್ನು ಕೊನೆಯವರೆಗೆ ಸಂರಕ್ಷಿಸುವ ಭಾರವನ್ನು ಮಲ್ಲಯ್ಯನಿಗೆ ಒಪ್ಪಿಸಿ ಹೊರಟು ಹೋದನು. ರಾಯನು ಹೋದ ಬಳಿಕ ಜಾತಿಯ ವರ್ತಕನಾದ ಮಲ್ಲಯ್ಯನು, ಒಡೆಯನು ತನ್ನಲ್ಲಿ ಇಟ್ಟ ವಿಶ್ವಾಸಕ್ಕೆ ವಂಚನೆಯನ್ನು ಬಗೆದು, ತನ್ನನ್ನೂ ತನ್ನ ಜನರನ್ನೂ ಜೀವದಿಂದ ಹೋಗಗೊಡಬೇಕು ಎಂಬ ಆಶ್ವಾಸನವನ್ನು ಪಡೆದು ಕೋಟೆಯನ್ನು ಮೀರ ಜುಮ್ಲನಿಗೆ ಒಪ್ಪಿಸಿ ಬಿಟ್ಟನು. ಈ ಮೇರೆಗೆ ಅತ್ಯಂತ ಬಲಿಷ್ಠವಾದ ವೆಲ್ಲೂರು ದುರ್ಗವು ಶತ್ರುಗಳ ಕೈಸೇರಿತು (೧೬೪೬).

ವೆಲ್ಲೂರಿಂದ ತೆರಳಿದ ರಾಯನು ಅಲ್ಲಲ್ಲಿ ಅಲೆಯುತ್ತ, ಸ್ವಾಮಿನಿಷ್ಠರಾದ ತನ್ನ ಸಾಮಂತರ ಸಹಾಯವನ್ನು ಕೋರುವ ಉದ್ಯೋಗವನ್ನು ನಡೆಸಿದನು. ಈಗ ಇಕ್ಕೇರಿಯಲ್ಲಿ ಶಿವಪ್ಪನಾಯಕನು ಆಳುತ್ತಿದ್ದನು (೧೬೪೫-೬೦). ಈತನು ಬಹು ಧನಾಢ್ಯನೂ ಬಲಿಷ್ಠನೂ ಆಗಿದ್ದು ಐವತ್ತು ಸಾವಿರ ಸೈನ್ಯವನ್ನು ಸಜ್ಜುಗೊಳಿಸಿದ್ದನು. ಅಸಹಾಯನಾದ ಈ ಸಮ್ರಾಜನ ಕೂಗನ್ನು ಈತನ ಕಿವಿಗಳು ಮೊದಲು ಕೇಳಿದುವು.

ಕೆಲಕಾಲ ಹಿಂದೆ ವಿಜಾಪುರದ ಸೇನಾನಿಯಾದ ರಣದುಲ್ಲಾಖಾನನು ದಕ್ಷಿಣದಲ್ಲಿ ದಂಡಯಾತ್ರೆಯನ್ನು ಮಾಡಿದಾಗ, ಈ ಇಕ್ಕೇರಿನಾಯಕನ ರಾಜ್ಯಕ್ಕೆ ಮುಹಮ್ಮದೀಯರಿಂದ ಬಾಧೆಯು ಉಂಟಾಗಿದ್ದಿತು. ಇದರ ಸೇಡನ್ನು ತೀರಿಸಲು ಕಾದುಕೊಂಡಿದ್ದ ನಾಯಕನಿಗೆ ಈ ನಿಮಿತ್ತದಿಂದ ಉತ್ತಮವಾದ ಸಂಧಿಯು ಒದಗಿ ಬಂದಿತು. ನಾಯಕನು ಕೂಡಲೆ ತನ್ನ ದಂಡನ್ನು ಓಡಿಸಿ ವೆಲ್ಲೂರನ್ನು ಬಿರುಸಾಗಿ ಮುತ್ತಿದನು. ಅಲ್ಪಾವಧಿಯಲ್ಲಿ ವೆಲ್ಲೂರು ಮತ್ತೆ

ವಿಜಯನಗರದ ಸ್ವಾಧೀನವಾಯಿತು. ರಾಯನು ಮರಳಿ ಬಂದು ವೆಲ್ಲೂ ರಲ್ಲಿ ವಾಸವಾದನು. ರಾಯನು ಹೀಗೆ ತನ್ನನ್ನು ಉಪಕರಿಸಿದ ನಾಯಕನನ್ನು ಉಚಿತವಾಗಿ ಸನ್ಮಾನಿಸಿ, ರಾಮಬಾಣ, ಪರವಾರಣ-ವಾರಣ ಮುಂತಾದ ಬಿರುದುಗಳನ್ನು ನೀಡಿದನು

ಇಂತು ರಾಯನ ಆಸನವು ಕೆಲಕಾಲ ಸ್ಥಿರವಾದರೂ ಸಾಮ್ರಾಜ್ಯಕ್ಕೆ ಸ್ವಾಸ್ಥ್ಯವು ಲಭಿಸಲಿಲ್ಲ. ದಿನದಿನಕ್ಕೆ ವಿಪತ್ತುಗಳು ಹೆಚ್ಚುತ್ತ ಸಾಮ್ರಾಜ್ಯದ ಸುರಕ್ಷಿತತೆಯು ನಷ್ಟವಾಯಿತು. ಸಾಮ್ರಾಜ್ಯದ ಹೊರ ಹಗೆಗಳ ಆಕ್ರಮಣವು ಮುಂದುವರಿಯಿತು. ಅವರಿಗೆ ನೆರವಾಗುವಂತೆ, ಸಾಮ್ರಾಜ್ಯದ ದೌರ್ಭಾಗ್ಯವೆ ತಮ್ಮ ಸೌಭಾಗ್ಯವು ಎಂದು ಬಗೆವ ಸಾಮ್ರಾಜ್ಯಕಂಟಕರಾದ ಸಾಮಂತರು ಇದೇ ಸಮಯಕ್ಕೆ ಸವಿಸ್ತರ ವಾಗಿ ಸಾಮ್ರಾಜ್ಯದ್ರೋಹದ ತಂತ್ರವನ್ನು ಹೂಡಿದರು. ಈ ವೇಳೆಯಲ್ಲಿ ದಾರುಣವಾದ ದುರ್ಭಿಕ್ಷವು ಎಲ್ಲೆಡೆಯಲ್ಲಿಯೂ ಹಬ್ಬಿ ಜನಾಂಗದಲ್ಲಿ ಹಾಹಾಕಾರವೆದ್ದಿತು (೧೬೪೭). ಹೀಗೆ ಸುತ್ತಲೂ ಪ್ರತಿಕೂಲವಾಗುತ್ತಿರುವ ಪರಿಸ್ಥಿತಿಯನ್ನು ಪ್ರತಿಭಟಿಸುತ್ತ, ಘೋರವಾದ ಸಂಕಟಗಳನ್ನು ಇದಿರಿಸುತ್ತ, ರಾಯನು ಸಾಮ್ರಾಜ್ಯಕ್ಕಾಗಿ ಹೋರಾಡಲಣಿಯಾದನು.

ವೆಲ್ಲೂರಿಂದ ಪರಾಜಿತರಾದ ವಿಜಾಪುರ–ಗೋವಳಕೊಂಡದ ದಳ ವಾಯಿಗಳು ಹಿಮ್ಮೆಟ್ಟಲಿಲ್ಲ. ಅವರು ಸಾಮ್ರಾಜ್ಯದ ಒಡಲಲ್ಲಿ ನುಗ್ಗಿ ಸಾಮ್ರಾಜ್ಯವನ್ನು ಹರಿದು ತಿನ್ನಲು ಹಾತೊರೆದರು. ಎಷ್ಟಾದರೂ ಆ ಕಾರ್ಯವು ಬರಿಯ ಅವರೊಬ್ಬರಿಂದಲೆ ಸಾಧ್ಯವಾಗದುದಾಗಿತ್ತು. ಅವರ ಕೆಲಸವನ್ನು ಹಗುರು ಮಾಡಲು ಮದುರೆಯ ತಿರುಮಲನಾಯಕನು ಮುಂಬರಿದನು. ಕೆಲಕಾಲದಿಂದ ಸ್ವಸಾಮರ್ಥ್ಯವನ್ನು ಬೆಳೆಸುತ್ತಿದ್ದ ಈತನು ಹೊರಹೊರಗೆ ಸ್ವಾಮಿನಿಷ್ಠನಂತೆ ನಟಿಸಿ, ವಿಜಯನಗರದ ಒಡೆತನವನ್ನು ಒಪ್ಪಿಕೊಳ್ಳುವವನಾಗಿದ್ದನು. ಈತನೀಗ ಸಮ್ರಾಜನಿಗೆ ತಾನು ಸಲ್ಲಿಸತಕ್ಕ ಕಪ್ಪವನ್ನು ನಿರಾಕರಿಸಿ ಸ್ವಾತಂತ್ರ್ಯವನ್ನು ಗಳಿಸುವ ಹೊಂಚನ್ನು ಹೂಡಿದನು. ಶ್ರೀರಂಗರಾಯನು ಇಬ್ಬದಿಯಿಂದ ಅಣಿಯಾದ ಅರಿಗಳ ಕತ್ತರಿಯಲ್ಲಿ ಸಿಲುಕಿದ ಈ ವಿಷಮ ವೇಳೆಯನ್ನರಿತು,

ಆತನ ವಿರುದ್ಧವಾಗಿ ವ್ಯೂಹವನ್ನು ರಚಿಸಿ ಅದರಲ್ಲಿ ತಂಜಾವೂರ ಮತ್ತು ಜಿಂಜಿಯ ನಾಯಕರನ್ನು ಸೇರಿಸಿಕೊಳ್ಳಲು ಹವಣಿಸಿದನು. ಜಿಂಜಿಯು ಮದುರೆಯನ್ನು ಹಿಂಬಾಲಿಸಿತು.

ಆದರೆ ಸ್ವಾಮಿನಿಷ್ಠನಾದ ತಂಜಾವೂರ ವಿಜಯರಾಘವ ನಾಯಕನು ಈ ಬಲೆಗೆ ಸಿಲುಕಲಿಲ್ಲ. ಆತನು ಒಳಗೊಳಗೆ ಈ ಕುತಂತ್ರದ ವರ್ತಮಾನವನ್ನೆಲ್ಲ ರಾಯನಿಗೆ ಅರುಹಿದನು. ಈ ರಾಜ್ಯದ್ರೋಹಿಗಳ ಶಾಸನ ಮಾಡಬೇಕೆಂದು ನಿಶ್ಚಯಿಸಿ, ರಾಯನು ಜಿಂಜಿಯ ಮೇಲೆ ದಂಡಯಾತ್ರೆಯನ್ನು ಹೊರಡಿಸಿದನು. ಇದರಿಂದ ತಿರುಮಲನಾಯಕನು ಇನ್ನಷ್ಟು ರೇಗಿದನು. ಆತನು ಗೋವಳಕೊಂಡದವರೊಡನೆ ಸಂಧಾನವನ್ನು ನಡೆಸಿ ಗೋವಳಕೊಂಡದ ದಂಡು ಹಿಂದಿನಿಂದ ರಾಯನ ಮೇಲೆ ಬರುವಂತೆ ಏರ್ಪಡಿಸಿದನು. ಕೂಡಲೆ ಗೋವಳಕೊಂಡದ ಸೈನ್ಯವು ದೇಶವನ್ನು ಉಧ್ವಸ್ತಮಾಡುತ್ತ ವೆಲ್ಲೂರನ್ನು ಬಳಿಸಾರಿತು. ಈ ಕುತ್ತನ್ನು ಇದಿರಿಸಲು ರಾಯನು ಹಿಂದಿರುಗಬೇಕಾಯಿತು. ರಾಯನ ಹೊಡೆತದಿಂದ ಗೋವಳಕೊಂಡದ ಸೇನೆಯು ಸೋತು ಹಿಂಜರಿಯಿತು.

ಒಡ್ಡಿಬಂದ ಪರಚಕ್ರಭಯವು ತಾತ್ಕಾಲಿಕವಾಗಿ ದೂರವಾಯಿತು. ಆದರೆ ಸಾಮ್ರಾಜ್ಯದ್ರೋಹಿಗಳಾದ ಮದುರೆ, ಜಿಂಜಿಯ ನಾಯಕರ ದಂಡನೆಯ ಕಾರ್ಯವು ಮಾತ್ರ ಕೈಗೂಡಲಿಲ್ಲ. ರಾಯನು ಮುಂದೇನು ಮಾಡಬೇಕು ಎಂಬ ಯೋಚನೆಗೆ ಒಳಗಾದನು. ಪರಿಸ್ಥಿತಿಯು ತನಗೆ ವಿಪರೀತವಾದುದನ್ನು ಮನಗಂಡನು. ತನ್ನ ನಾಯಕರ ಮೇಲೆ ಈಗ ಯುದ್ಧವನ್ನು ಹೂಡಿ ಪ್ರಯೋಜನವಿಲ್ಲ. ಈ ಅಂತಃಕಲಹದಿಂದ ತನ್ನ ಸಾಮ್ರಾಜ್ಯಕ್ಕೆ ಬಹಳ ಅಪಾಯವು ಆಗದಿರದು. ಎಂದು ರಾಯನು ನಿರ್ಧರಿಸಿ, ಮದುರೆಯ ಮೊದಲಾದ ನಾಯಕರೊಡನೆ ಸ್ನೇಹಾನುಬಂಧದ ಉಪಾಯಗಳನ್ನು ನಡೆಸಿದನು.

ಇದೀಗ ಒದಗಿದ ಪರಾಭವದ ಸೇಡನ್ನು ತೀರಿಸಿ ವಿಜಯನಗರದ ಮೇಲೆ ಏರಾಟಮಾಡಲು ಗೋವಳಕೊಂಡದ ಮಹಾಸೇನೆಯು ಸಿದ್ಧವಾಗುತ್ತಲಿತ್ತು. ರಾಯನು ನೂತನವಾದ ಈ ಆಕ್ರಮಣವನ್ನು

ಇದಿರಿಸಲು ಮದುರೆ,ಜಿಂಜಿ, ತಂಜಾವೂರ ನಾಯಕರೊಡನೆ ಬೆರೆತು ಬಲಿಷ್ಠವಾದ ರಾಜ್ಯಸಂಘವನ್ನು ನಿರ್ಮಾಣಮಾಡುವ ಉದ್ಯೋಗದಲ್ಲಿ ತೊಡಗಿದನು. ಈ ಸಂವಿಧಾನಕ್ಕಾಗಿ ಹೊರಟ ರಾಯನನ್ನು ಈ ನಾಯಕರು ಸತ್ಕಾರಪೂರ್ವಕವಾಗಿ ಬರಮಾಡಿಕೊಂಡರು. ಸಂಧಾನ-ಸಂಭಾಷಣೆಗಳಲ್ಲಿಯೂ ಮನೋರಥ-ಸಂಕಲ್ಪಗಳಲ್ಲಿಯೂ ಆತಿಥ್ಯ-ಸಂತೋಷ ಸಮಾರಂಭಗಳಲ್ಲಿಯೂ ಒಂದು ಒಂದೂವರೆವರ್ಷ ಕಾಲವು ಗತಿಸಿ ಹೋಯಿತು.

ಈ ಅವಧಿಯಲ್ಲಿ ಗೋವಳಕೊಂಡದ ದಳಗಳು ವಿಜಯನಗರರಾಜ್ಯದಲ್ಲಿ ಒಳಹೊಕ್ಕು ದೇಶವನ್ನು ಗೆಲ್ಲುತ್ತ ನಡೆದಿದ್ದುವು. ಇಷ್ಟಾಗುವಷ್ಟರಲ್ಲಿ ಇತ್ತ ನಾಯಕರ ಸ್ನೇಹಭಾವನೆಯೂ ಸಖ್ಯದ ವಿಚಾರಗಳೂ ಮಾಯವಾಗಿ ವೈಮನಸ್ಯವು ಮತ್ತೆ ತಲೆಯೆತ್ತಿ ನಿಂತಿತು.ಅವರ ಅಭಿವಚನಗಳೆಲ್ಲ ಹುಸಿಯಾದುವು. ರಾಯನು ಮತ್ತೆ ಏಕಾಕಿಯಾಗಿ ಶತ್ರುಗಳ ಹಿಂಸೆಗೆ ಗುರಿಯಾದನು. ಈ ವೇಳೆಗೆ ಅಸಹಾಯನಾದ ರಾಯನು ಕೊನೆಗೆ ನಿರುಪಾಯನಾಗಿ ವೆಲ್ಲೂರನ್ನು ಬಿಟ್ಟು ಪಲಾಯನಮಾಡಿದನು. ಇದು ಶ್ರೀರಂಗರಾಯನ ಎರಡನೆಯ ಪಲಾಯನವು; ಎರಡನೆಯ ರಾಜ್ಯಚ್ಯುತಿಯು (ಸು. ೧೬೫೬).

ವಿಜಯನಗರದ ರಾಜಧಾನಿಯನ್ನು ಕಿತ್ತುಕೊಂಡು ರಾಯನನ್ನು ಸ್ಥಾನಭ್ರಷ್ಟಮಾಡಿದ ಗೋವಳಕೊಂಡದ ಸೇನೆಯು ಹಾಗೆಯೆ ಮುಂದಕ್ಕೆ ಪ್ರಯಾಣಮಾಡಿ ತಂಜಾವೂರತ್ತ ಹೊರಳಿತು. ರಾಯನ ಪಕ್ಷಪಾತಿಯಾದ ತಂಜಾವೂರ ನಾಯಕನು 'ರಾಯನ ಗತಿಯಂತೂ ಹೀಗಾಯಿತು;ರಾಯನಿಗೆ ದ್ರೋಹಿಗಳೂ ತನಗೆ ದ್ವೇಷಿಗಳೂ ಆದ, ತನ್ನ ನೆರೆಯ ಈ ಮದುರೆ, ಜಿಂಜಿಯ ನಾಯಕರು ತನಗೆ ಎಷ್ಟೂ ಸಹಾಯವಾಗರು' ಎಂದು ಆಲೋಚಿಸಿ ಭಯಭೀತನಾಗಿ ಗೋವಳಕೊಂಡದ ಸುಲ್ತಾನನಿಗೆ ಶರಣಾಗತನಾದನು.

ಬಳಿಕ ಗೋವಳಕೊಂಡದ ದಂಡು ಜಿಂಜಿಯತ್ತ ಹೊರಳಿತು. ವಿವೇಕವಿಕಲನಾದ ಮದುರೆಯ ನಾಯಕನು, ಇದನ್ನು ಇದಿರಿಸಿ ತನಗೆ

ನೆರವಾಗಲು ವಿಜಾಪುರದಿಂದ ಹದಿನೇಳು ಸಾವಿರ ಸೇನೆಯನ್ನು ಬರ ಮಾಡಿಕೊಂಡನು. ಗೋವಳಕೊಂಡ-ವಿಜಾಪುರದ ಈ ದಳಗಳು ಜಿಂಜಿಯನ್ನು ಸಮೀಪಿಸಿದುವು. ಏಕಧರ್ಮೀಯರಾದ ಈ ದಳಗಳ ನಾಯಕರು ತಮ್ಮತಮ್ಮಲ್ಲಿ ಕಾದಲು ಒಪ್ಪದೆ ಒಡಂಬಡಿಕೆಯನ್ನು ಮಾಡಿಕೊಂಡರು. ಗೋವಳಕೊಂಡದ ದಂಡು ಹಿಂದಕ್ಕೆ ತಿರುಗಿತು.

ತನ್ನ ಸಹಾಯಕ್ಕೆಂದು ಕರೆಸಿದ ವಿಜಾಪುರದ ಸೈನ್ಯವು ಮದು ರೆಯ ನಾಯಕನ ಮೇಲೆಯೇ ಕತ್ತಿಯನ್ನು ಹಿರಿದಿತು. ಜಿಂಜಿಯ ಕೋಟೆಯನ್ನು ಮುತ್ತಿತು. ಜಿಂಜಿ–ಮದುರೆಯ ದಂಡುಗಳು ಕೋಟೆ ಯನ್ನು ಉಳುಹಲು ಅಣಿಯಾದುವು. ಆದರೆ ಕೆಲ ದಿನಗಳಾಗುವಷ್ಟರಲ್ಲಿ ಅವುಗಳಲ್ಲಿ ಒಡಕು-ಒಳಜಗಳಗಳು ಹುಟ್ಟಿ ಏಕೋಪಕ್ಕೆ ಹೋದುವು. ಇದರ ಫಲವಾಗಿ ದಂಡಾಳುಗಳು ದೊಂಬಿಯನ್ನು ಎಬ್ಬಿಸಿದರು. ಎಲ್ಲೆ ಲ್ಲಿಯೂ ಗೊಂದಲವಾಯಿತು. ಈ ಗಲಭೆಯಲ್ಲಿ ಕೋಟೆಯ ಬಾಗಿಲು ಗಳು ತೆರೆದು ನಿಂತುವು. ದಕ್ಷಿಣದೇಶದಲ್ಲಿ ಅತಿಬಲಿಷ್ಠವೂ ಧನಾಢ್ಯವೂ ಎಂದು ಹೆಸರಾದ ಜಿಂಜಿಪಟ್ಟಣವು ಶತ್ರುಗಳ ಕೈಸೇರಿತು.

ಜಿಂಜಿಯ ವಿಜಯದಿಂದ ಉತ್ತೇಜಿತರಾದ ವಿಜಾಪುರದ ಸೈನಿಕರು ತಂಜಾವೂರ, ಮದುರೆಯ ರಾಜ್ಯಗಳಲ್ಲಿ ಒಳನುಗ್ಗಿ ದೇಶವನ್ನು ಧ್ವಂಸ ಮಾಡುತ್ತ ಸಾಗಿದರು. ಖಾನ–ಇ–ಖಾನಾನನು ಈ ಸೇನೆಯ ನಾಯಕನಾಗಿದ್ದನು. ತಂಜಾವೂರ ನಾಯಕನು ಈ ಅನಾಹೂತವನ್ನು ತಡೆಯಲು ಎಷ್ಟೂ ಪ್ರಯತ್ನಮಾಡದೆ ಓಡಿ ಹೋಗಿ ಕಾಡಿನಲ್ಲಿ ಅಡಗಿ ಕೊಂಡನು. ಮದುರೆಯ ತಿರುಮಲನಾಯಕನು ಮಾತ್ರ ಶೂರರಾದ 'ಕಳ್ಳರ' (ಕನ್ನಡ) ಜನಾಂಗದ ಸಹಾಯದಿಂದ ಹಗೆಗಳಿಗೆ ಕೆಲಮಟ್ಟಿಗೆ ಪ್ರತಿಕಾರವನ್ನು ನೀಡಿದನು. ಆಗ ಖಾನ-ಇ–ಖಾನಾನನು ತಾನು ಇಲ್ಲಿಯ ವರೆಗೆ ಅನಾಯಾಸವಾಗಿ ಪಾದಾಕ್ರಾಂತ ಮಾಡಿದ ವಿಸ್ತಾರವಾದ ಪ್ರದೇಶವು, ಸುಲಿಗೆಯಲ್ಲಿ ಸಂಪಾದಿಸಿದ ಅಗಣಿತವಾದ ಧನವು, ಇವುಗಳೆ ಸಾಕು ಸಾಕಾಗಿವೆ ಎಂದು ಬಗೆದು ವಿಜಾಪುರದತ್ತ ಹಿಂದಿರುಗಿದನು.

ಆತನು ಹೋದ ಬಳಿಕ ಮದುರೆ, ತಂಜಾವೂರ ನಾಯಕರು

ತಮ್ಮ ತಮ್ಮ ಬೀಡುಗಳಿಗೆ ಬಂದು ಸೇರಿಕೊಂಡರು. ಮುಂದೆ ಅವರು ಅರಿಗಳ ಅತ್ಯಾಚಾರಗಳಿಗೆ ಆಹುತಿಯಾದ ತಮ್ಮ ಪ್ರಜಾಜನರ ಗಾಯಗಳನ್ನು ಮಾಯಿಸಿ, ಉಪಾಯದಿಂದ ಅವರನ್ನು ಸಂತಯಿಸಿ, ತಮ್ಮ ರಾಜ್ಯಗಳ ಶಕ್ತಿಯನ್ನು ಬೆಳೆಸಿಕೊಳ್ಳುವುದನ್ನು ಬಿಟ್ಟು, ತಮ್ಮ ಅಧಿಕಾರದ ಅಹಂಕಾರದಿಂದಲೂ ಸುರಕ್ಷಿತತೆಯ ಉನ್ಮಾದದಿಂದಲೂ ನಿರಾಧಾರರಾದ ತಮ್ಮ ಪ್ರಜೆಗಳ ಮೇಲೆಯೆ ಬಲುಮೆಯನ್ನು ಹೂಡಿದರು. ಅವರ ಮೇಲೆ ಕಾಳೆಗದ ಕಂದಾಯವನ್ನು ಹೇರಿದರು. ಈ ಮೊದಲಾದ ಹಿಂಸೆಗಳಿಂದ ಯುದ್ಧದಲ್ಲಿ ತಮ್ಮ ಬೊಕ್ಕಸಕ್ಕೆ ಉಂಟಾದ ಕೊರತೆಯನ್ನು ತುಂಬಿಕೊಳ್ಳುವುದರಲ್ಲಿ ಮಗ್ನರಾದರು !

ಈ ಮೇರೆಗೆ ರಾಯನು ರಾಷ್ಟ್ರಕಂಟಕರೂ ಸಾಮ್ರಾಜ್ಯದ್ರೋಹಿಗಳೂ ಆದ ತನ್ನ ಸಾಮಂತರ ಮೂಲಕ ವಂಚಿತನೂ ಹತಮನೋರಥನೂ ರಾಜ್ಯಚ್ಯುತನೂ ಆಗಿ ಅಂಡಲೆಯ ತೊಡಗಿದನು. ಈ ದುರ್ದೆಸೆಯಲ್ಲಿ ತೃಷಾರ್ತನಿಗೆ ಜಲಾಶಯವು ದೊರೆವಂತೆ ಸ್ವಾಮಿನಿಷ್ಠನಾದ ಒಬ್ಬ ಮಂಡಲಪತಿಯು ಆತನಿಗೆ ಸಹಾಯಕರ್ತನಾಗಿ ಮುಂದೆ ಬಂದನು. ಈ ಸಮಯದಲ್ಲಿ ಕಂಠೀರವ ನರಸರಾಜ ಒಡೆಯನು ಮೈಸೂರ ದೊರೆಯಾಗಿದ್ದನು (೧೬೩೮-೫೯). ಈತನು ರಾಯನು ತನ್ನ ರಾಜ್ಯದಲ್ಲಿ ಬಂದು ಸುರಕ್ಷಿತವಾಗಿ ನೆಲಸಬೇಕೆಂದು ಆದರಪೂರ್ವಕವಾಗಿ ಆತನಿಗೆ ಅರಿಕೆಯನ್ನು ಮಾಡಿಕೊಂಡನು. ರಾಯನು ಈತನ ಈ ಜನ್ನಹವನ್ನು ಮನ್ನಿಸಿ ಅನೇಕ ಕಾರಣಗಳಿಂದ ತನಗೆ ಪ್ರಿಯವಾದ ಬೇಲೂರ ಪ್ರದೇಶವನ್ನು ತನ್ನ ನೆಲೆಯಾಗಿ ಆರಿಸಿಕೊಂಡು ಅಲ್ಲಿಗೆ ಹೋಗಿ ವಾಸವಾದನು.

ರಾಯನ ಈ ಸ್ಥಾನಾಂತರವು ಕೆಲಕಾಲ ಬಹು ಆಶಾಜನಕವಾಗಿ ತೋರಿತು. ಈ ಪ್ರದೇಶವು ಸ್ವಾಮಿಭಕ್ತರಾದ ಸಾಮಂತರ ಕೇಂದ್ರವಾಗಿದ್ದಿತು. ಇದರ ನೆರೆಯಲ್ಲಿಯೆ ಕೆಳದಿಯ ರಾಜ್ಯವಿದ್ದಿತು. ಮೈಸೂರಂತೆ ಕೆಳದಿಯ ಅರಸರು ಸಾಮ್ರಾಜ್ಯನಿಷ್ಠರಾಗಿದ್ದರು. ಅವರ ಸಹಾಯವೂ ರಾಯನಿಗೆ ದೊರೆಯಬಹುದಾಗಿತ್ತು.

ರಾಯನಿಗೆ ಮೈಸೂರ ಅರಸರು ನೀಡಿದ ಈ ಆಶ್ರಯವು ಇಬ್ಬರಿಗೂ ಲಾಭದಾಯಕವಾಯಿತು. ಸಮ್ರಾಜನ ಈ ಸಂನಿಧಾನದಿಂದ ಅವರ ಬಲವು ವೃದ್ಧಿಂಗತವಾಯಿತು. ಅಲ್ಲದೆ ವಿಪತ್ಕಾಲದಲ್ಲಿ ಸಮ್ರಾಜನಿಗೆ ಸಹಾಯಮಾಡದರು ಎಂದು ಅವರ ಗೌರವವು ಹೆಚ್ಚಿತು. ಇದರಿಂದ ನೆರೆನಾಡುಗಳಲ್ಲಿ ಮೈಸೂರ ಪ್ರಭಾವವು ಹಬ್ಬಿತು. ನರಸರಾಜನು ರಾಯನ ಬಲಗೈ (ದಕ್ಷಿಣ ಭುಜ) ಯಾಗಿ ಶೋಭಿಸಿದನು.

ಕಂಠೀರವ ನರಸರಾಜನ ಬೆಂಬಲದಿಂದ ರಾಯನು ಕಳೆದುಕೊಂಡ ರಾಜ್ಯವನ್ನು ಮರಳಿ ಗಳಿಸುವ ಉದ್ಯೋಗಕ್ಕೆ ತೊಡಗಿದನು. ಈ ವೇಳೆಗೆ ವಿಜಾಪುರದ ದಂಡು ತಮ್ಮ ಪ್ರಾಂತಕ್ಕೆ ತೆರಳಿತ್ತು. ತನ್ನ ಕಾರ್ಯಕ್ಕೆ ಇದು ಒಳ್ಳೆಯ ಸಮಯವೆಂದು ರಾಯನು ತಿಳಿದನು. ಆತನು ಮೈಸೂರ ಸೈನ್ಯದ ಸಹಾಯದಿಂದ ದಂಡಯಾತ್ರೆಯನ್ನು ಕೈಕೊಂಡನು. ಅರಿಗಳಿಗೆ ವಶವಾಗಿದ್ದ ತನ್ನ ರಾಜ್ಯದ ಕೆಲವು ಪ್ರದೇಶಗಳನ್ನು ಕಸಿದುಕೊಂಡನು. ಅಷ್ಟರಲ್ಲಿ ಗೋವಳಕೊಂಡದ ದಂಡು ಆತನ ಮೇಲೆ ಏರಿ ಬಂದಿತು. ರಾಯನು ಅದನ್ನು ಸೋಲಿಸಿ ಹಿಂದಕ್ಕೆ ನೂಕಿದನು.

ಈ ಸಮಯದಲ್ಲಿಯಾದರೂ ಮದುರೆ, ಜಿಂಜಿ, ತಂಜಾವೂರುಗಳ ನಾಯಕರು ಒಟ್ಟುಗೂಡಿ ರಾಯನಿಗೆ ನೆರವಾಗಿದ್ದರೆ ಸಂಘಟಿತವಾದ ಇವರ ಬಲದ ಮುಂದೆ ಶತ್ರುಗಳು ಹತವೀರ್ಯರಾಗಿ ವಿಜಯನಗರದ ವಿಜಯಧ್ವಜವು ಮತ್ತೆ ಮೆರೆದಾಡಬಹುದಾಗಿತ್ತು. ಆದರೆ ಹಾಗಾಗಲಿಲ್ಲ ! ಇವರು ಒಟ್ಟುಗೂಡಲಿಲ್ಲ. ರಾಯನಿಗೆ ಯಾರೂ ನೆರವಾಗಲಿಲ್ಲ. ನೆರವಾಗುವ ಮಾತಂತಿರಲಿ, ಮದುರೆಯ ನಾಯಕನು ರಾಯನಿಗೆ ವೈರಿಯಾಗಿ ನಿಂತು, ವೈರಿಗಳೊಡನೆ ಮತ್ತೆ ಸಂಧಾನವನ್ನು ನಡೆಸಿದನು. ಘಟ್ಟದ ಮಾರ್ಗಗಳನ್ನು ತೆರೆದಿಟ್ಟನು. ವಿಜಾಪುರದ ಸೈನ್ಯವನ್ನು ಬರಮಾಡಿಕೊಂಡು ತನ್ನ ಪ್ರತಿಸ್ಪರ್ಧಿಯೂ ತನ್ನ ದೊರೆಯ ಪ್ರಮುಖ ಆಧಾರಸ್ತಂಭನೂ ಆಗಿದ್ದ ಮೈಸೂರ ರಾಜನ ಮೇಲೆ ದಾಳಿಮಾಡಲು ಆಗ್ರಹಪಟ್ಟನು.

ವಿಜಾಪುರದ ಸೈನ್ಯವು ಸಾಗಿಬಂದಿತು. ದೇಶವನ್ನು ಹಾಳು ಮಾಡಿತು. ಯಥೇಷ್ಟವಾದ ಸುಲಿಗೆಯಿಂದಲೂ ಮದುರೆ, ತಂಜಾವೂರ ರಾಜ್ಯಗಳಿಂದ ಸೆಳೆದುಕೊಂಡ ಕಪ್ಪಕಾಣಿಕೆಯಿಂದಲೂ ಧನಸಂಪನ್ನ ವಾಗಿ ಸ್ವಸ್ಥಾನಕ್ಕೆ ತೆರಳಿತು. ರಾಯನು ಎಣಿಕೆಹಾಕಿದ ಆಲೋಚನೆ ಗಳೆಲ್ಲ ಮಣ್ಣುಗೂಡಿದುವು. ಇಂತು ಎರಡನೆಯ ಸಲ ಮದುರೆಯ ನಾಯಕನ ಘೋರವಾದ ದ್ರೋಹದಿಂದ ಹತಪ್ರಭನಾದ ರಾಯನು ಮನದಲ್ಲಿ ಕುದಿಯುತ್ತ ಮರಳಿ ಬೇಲೂರಿಗೆ ಬಂದನು.

---

## ಇಪ್ಪತ್ತಾರನೆಯ ವಿಲಾಸ

# ಸಾಮ್ರಾಜ್ಯಚ್ಯುತನಾದ ಶ್ರೀರಂಗರಾಯ

## (೧೬೫೬-೮೧)

### ಕೊನೆಯ ಹೋರಾಟಗಳು

### ಸಾಮ್ರಾಜ್ಯಲಯ

ವಿಜಾಪುರದ ದಂಡು ದೇಶದಿಂದ ತೆರಳಿತು. ಬಹು ಕಾಲದಿಂದ ಮದುರೆಯ ಮೇಲಿನ ಸೇಡನ್ನು ತೀರಿಸಲು ಉತ್ಸುಕನಾಗಿದ್ದ ಸರಸ ರಾಜನಿಗೆ ತಿರುಮಲನಾಯಕನ ರಾಷ್ಟ್ರದ್ರೋಹ, ಸ್ವಾಮಿದ್ರೋಹ, ಸ್ವಜನದ್ರೋಹ ಇವುಗಳ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಉಣಿಸುವ ಸಂಧಿಯು ಪ್ರಾಪ್ತವಾಯಿತು. ಮೈಸೂರ ಸೈನ್ಯವು ರಭಸ ದಿಂದ ಮದುರೆಯ ರಾಜ್ಯದಲ್ಲಿ ಧುಮುಕಿ ರಾಜಧಾನಿಯನ್ನು ಸಮೀಪಿ ಸಿತು. ಆಕಸ್ಮಿಕವಾದ ಈ ಆಕ್ರಮಣವನ್ನು ಇದಿರಿಸಲಾರದೆ ನಾಯ ಕನು ಸಂಭ್ರಾಂತನಾದನು.

ನಾಯಕನ ಮೇಲಿನ ಈ ಸಂಕಟವನ್ನು ಕೇಳಿ, ಮರವ ಜನಾಂಗದ ಶೂರ ನಾಯಕನಾದ ರಘುನಾಥ ಸೇತುಪತಿಯು ಆತನ ಸಹಾಯಕ್ಕೆ ಓಡಿಬಂದನು. ತಿರುಮಲನಾಯಕನ ಬಾಹುಗಳಲ್ಲಿ ಶಕ್ತಿಸಂಚಾರವಾಯಿತು. ಆತನು ದಂಡನ್ನು ಕೂಡಿಸಿ ಮೈಸೂರನ್ನು ಇದಿರಿಸಿದನು. ದಿಂಡಿಗಲ್ಲ ಬಳಿಯಲ್ಲಿ ಅತಿಭೀಷಣವಾದ ಕದನವು ಎಸಗಿತು. ಒಂದೊಂದು ಪಕ್ಷದ ಹನ್ನೆರಡು ಸಾವಿರ ಜನರು ರಣಾಂಗಣದಲ್ಲಿ ಒರಗಿದರು. ಉಭಯಪಕ್ಷದವರು ಅತ್ಯಾಚಾರಗಳನ್ನು ನಡೆಸಿ ಮುಯ್ಯಕ್ಕೆ ಮುಯ್ಯವನ್ನು ತೀರಿಸಿದರು. ಕೈಸೆರೆಯಾದ ವಿರೋಧಿಪಕ್ಷದ ಮುಖಂಡರ ಮೂಗುಗಳು ಕೊಯ್ಯಲ್ಪಟ್ಟುವು. ಮೈಸೂರ ದಂಡು ಸೋತು ಹಿಂದಿರುಗಿತು.

ಈ ಪೆಟ್ಟು ಮೈಸೂರಿಗಿಂತಲೂ ಹೆಚ್ಚಾಗಿ ಶ್ರೀರಂಗರಾಯನ ಮರ್ಮವನ್ನು ಭೇದಿಸಿತು. ಈ ಯುದ್ಧದಲ್ಲಿ ಮೈಸೂರಿಗೆ ವಿಜಯವು ದೊರೆತಿದ್ದರೆ ಮರಳಿ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ರಾಯನ ಹಂಬಲವು ಕೊನರಬಹುದಾಗಿತ್ತು. ಈ ಪರಾಭವದಿಂದ ಆತನ ಇನ್ನೊಂದು ಬಲವಾದ ಆಶಾತಂತುವು ಹರಿದುಹೋಯಿತು. ಈ ಕಾಳಗವಾದ ಬಳಿಕ ಕೆಲದಿನಗಳಲ್ಲಿ ದಕ್ಷಿಣಭಾರತದ ಚರಿತ್ರೆಯಲ್ಲಿ ಅನೇಕ ರಾಜಕೀಯ ಸ್ಥಿತ್ಯಂತರಗಳು ಉಂಟಾದುವು. ಇವುಗಳ ಮೂಲಕ ರಾಯನ ಮನೋರಥಮಾರ್ಗವು ಅತಿದುರ್ಗಮವಾಯಿತು.

ದಿಲ್ಲಿಯ ಮೊಗಲ ಸಮ್ರಾಜನಾದ ಶಹಜಹಾನನು ಮರಣ ಹೊಂದಿ ಆತನ ಮಗನಾದ ಔರಂಗಜೇಬನು ಪಟ್ಟವೇರಿದನು (೧೬೫೮). ಈತನು ಸಾಹಸಿಯೂ ತಂತ್ರಗಾರನೂ ಆಗಿದ್ದನು. ದಕ್ಷಿಣಭಾರತದ ಮುಹಮ್ಮದೀಯ ರಾಜ್ಯಗಳನ್ನು ಮುಳುಗಿಸಿ ಅಲ್ಲಿ ಮೊಗಲ ಚಕ್ರಾಧಿಪತ್ಯವನ್ನು ಸ್ಥಾಪಿಸಿಬೇಕೆಂಬ ಬಹುಕಾಲದ ಮಹತ್ವಾಕಾಂಕ್ಷೆಯು ಈ ಕಾಲದಲ್ಲಿ ಫಲದ್ರೂಪವಾಗುವಂತೆ ಕಾರ್ಯಕ್ರಮಗಳು ಮುಂದುವರಿದುವು. ದಕ್ಷಿಣದಿಗ್ವಿಜಯಕ್ಕಾಗಿ ದಂಡಯಾತ್ರೆಗಳು ಹೊರಟುವು. ವಿಜಾಪುರದ ಆಕ್ರಮಣಾಭಿಲಾಷೆಗೂ ತಡೆಯಿರಲಿಲ್ಲ.

ಈ ಸಮಯದಲ್ಲಿ ಮರಾಟರದೊಂದು ಹೊಸದಾದ ರಾಜಕೀಯ ಶಕ್ತಿಯು ದಕ್ಷಿಣಭಾರತದ ಕ್ಷಿತಿಜದ ಮೇಲೆ ಉದಯಿಸಲಾರಂಭಿಸಿತು. ಈ ಶಕ್ತಿಯು ಮೊದಮೊದಲು ಕೆಲಕಾಲ ಮಹಮ್ಮದೀಯ ರಾಜ್ಯಗಳ ಆಶ್ರಯದಲ್ಲಿ ಪೋಷಿತವಾಯಿತು. ಇದರ ನೆರವಿನಿಂದ ವಿಜಾಪುರ ದವರು ದಕ್ಷಿಣದಲ್ಲಿ, ವಿಜಯನಗರ ಸಾಮ್ರಾಜ್ಯದ ಪ್ರಾಂತಗಳಲ್ಲಿ ವಿರಾಟ ಗಳನ್ನು ಹೂಡಿ ಗೆದ್ದ ಪ್ರದೇಶಗಳಲ್ಲಿ ತಮ್ಮ ಆಡಳಿತವನ್ನು ನೆಲೆಗೊಳಿ ಸಲು ಸಮರ್ಥರಾದರು. ಈ ರೀತಿಯಾಗಿ ಶಹಜಿಯು ವಿಜಯನಗರಕ್ಕೆ ವೈರಿಯಾಗಿ ವಿಜಾಪುರಕ್ಕೆ ಹೇಗೆ ಸಹಾಯವಾದನೆಂಬುದು ಈ ಮೊದಲೆ ವಿವರಿಸಲಾಗಿದೆ. ಮುಂದೆ ಕೆಲದಿನಗಳಲ್ಲಿ ಶಹಜಿಯ ಮಗನಾದ ಶಿವಾಜಿಯು ಬಲಗೊಂಡು, ಸ್ವತಂತ್ರವಾಗಿ ತನ್ನ ರಾಜ್ಯವನ್ನು ಸ್ಥಾಪಿ ಸುವ ಉದ್ಯೋಗವನ್ನು ಭರದಿಂದ ಸಾಗಿಸಿದನು.

ಈ ಮೊದಲಾದ ವಿವಿಧ ಸಂವಿಧಾನಗಳು ಒಂದೊಂದಾಗಿಯೂ ಒಟ್ಟಾಗಿಯೂ ರಾಯನ ಸಂಕಲ್ಪಕ್ಕೆ ವಿರೋಧಿಯಾಗಿ, ವಿಜಯನಗರ ಸಾಮ್ರಾಜ್ಯಕ್ಕೆ ವಿನಾಶಕವಾಗಿ ಪರಿಣಮಿಸಿದುವು. ದಿನದಿನಕ್ಕೆ ಪ್ರಬ ಲಿಸಿ ಪ್ರತಿಕೂಲವಾಗುತ್ತಲಿರುವ ಈ ಸಂನಿವೇಶಗಳ ಇದಿರಿನಲ್ಲಿ ಬಲ ವಿಲ್ಲದ ರಾಯನ ದುರ್ಬಲವಾದ ಹೋರಾಟಗಳು ಕೊನೆಗಾಣದಾದುವು. ಮೆಲ್ಲಮೆಲ್ಲನೆ ರೂಪುಗೊಳ್ಳುತ್ತಿರುವ ಈ ಎಲ್ಲ ಸಂದರ್ಭಗಳಿಗಿಂತ ಮಿಗಿಲಾಗಿ ತಾತ್ಕಾಲಿಕವಾದ ಒಂದು ಘಟನೆಯಿಂದ ರಾಯನ ಆಶಾ ಪಟವು ಶತಧಾ ವಿದೀರ್ಣವಾಗಿ ನೆಲಕ್ಕೆ ಅಪ್ಪಳಿಸಿತು. ರಾಯನ ಮುಂದಣ ಎಲ್ಲ ಆಕಾಂಕ್ಷೆಗಳಿಗೆ ಆಧಾರಸ್ತಂಭನಾಗಿದ್ದ ಕಂಠೀರವ ನರಸರಾಜನು ೧೬೫೯ರಲ್ಲಿ ಮರಣಹೊಂದಿದನು ! ರಾಯನ ಬಲವೆ ಕಡಿದು ಹೋಯಿತು. ವಿಜಯನಗರಸಾಮ್ರಾಜ್ಯವನ್ನು ಪುನರುಜ್ಜೀ ವನಗೊಳಿಸಬೇಕೆಂದು ರಾಯನು ಕಟ್ಟಿದ ಕಲ್ಪನಾಮಂದಿರವು ಚಿರಕಾಲ ಹುಡಿಗೂಡಿ ಹೋಯಿತು.

ಈ ಮುಂದಿನ ಶ್ರೀರಂಗರಾಯನ ಹಾಗೂ ವಿಜಯನಗರಸಾಮ್ರಾ ಜ್ಯದ ಚರಿತ್ರೆಯು ದುರಂತವಾದ ಈ ನಾಟಕದ ಕರುಣಾಜನಕವಾದ

ಕೊನೆಯ ದೃಶ್ಯವಾಗಿದೆ. ಮುನ್ನೂರು ವರ್ಷಗಳವರೆಗೆ ಅಮೋಘವಾದ ತನ್ನ ಸಾಮರ್ಥ್ಯದಿಂದ ದಕ್ಷಿಣ ಭಾರತೀಯ ಜನಾಂಗದಲ್ಲಿ ಶಕ್ತಿ-ಸ್ಫೂರ್ತಿಗಳನ್ನು ಸಂಚಾರಗೊಳಿಸಿ ಆತ್ಮೋದ್ಧಾರದ ಪಥವನ್ನು ತೋರಿದ ಭವ್ಯವೂ ದಿವ್ಯವೂ ಆದ ವಿಜಯನಗರಸಾಮ್ರಾಜ್ಯಜಾಹ್ನವಿಯು ಮುಂದಿನ ಅಲ್ಪಾವಧಿಯಲ್ಲಿ ಭರದಿಂದ ರಸಾತಲಕ್ಕಿಳಿದು ವಿಲಯದ ವಿವರದಲ್ಲಿ ವಿಲೀನವಾಗುವುದು. ಈ ಮುಂದಿನ ಸುಮಾರು ಇಪ್ಪತ್ತೆರಡು ವರ್ಷಗಳಲ್ಲಿಯ ರಾಯನ ಕಾರ್ಯಕಲಾಪಗಳ ಸವಿಸ್ತರವಾದ ವೃತ್ತಾಂತವು ವಿದಿತವಾಗುವುದಿಲ್ಲ. ಈ ಜೀವನಾವಧಿಯನ್ನು ಆತನು ದಾರುಣವಾದ ದುರ್ದೆಸೆಯಲ್ಲಿ ಕಳೆದನು. ಇಂತಹ ಸ್ಥಿತಿಯಲ್ಲಿಯೂ ಆತನು ಎದೆಗೆಟ್ಟು ಸುಮ್ಮನೆ ಕುಳ್ಳಿರಲಿಲ್ಲ. ಕೊನೆಯವರೆಗೆ ಎಡೆಬಿಡದೆ ಸಾಮ್ರಾಜ್ಯಕ್ಕಾಗಿ ಹೋರಾಡಿದನು.

ರಾಯನು ಮುಂದಿನ ನಾಲ್ಕೈದು ವರ್ಷಗಳನ್ನು ಬೇಲೂರಲ್ಲಿಯೆ ಕಳೆದನು. ಈ ನಡುವೆ ಗೋವಳಕೊಂಡದ ಸುಲ್ತಾನನಾದ ಅಬ್ದುಲ ಶಹನು ಮರಣಹೊಂದಿದನು (೧೬೭೨). ಬಳಿಕ ಆ ಅರಸೊತ್ತಿಗೆಯು ಬಲಗುಂದಲು, ರಾಯನು ಆತನು ಹಿಡಿದುಕೊಂಡ ತನ್ನ ಪ್ರಾಂತಗಳಲ್ಲಿ ದಾಳಿಯನ್ನು ಮಾಡಿದನು. ಚಂದ್ರಗಿರಿಯು ಆತನ ಕೈಸೇರಿತು (೧೬೭೩). ಆಮೇಲೆ ಆತನು ಪೆನುಗೊಂಡವನ್ನು ಕಿತ್ತುಕೊಂಡನು (೧೬೭೯). ಹೀಗೆ ಅಲ್ಲಲ್ಲಿಯ ಕೆಲವು ಪ್ರದೇಶಗಳು ಕೆಲಕಾಲ ರಾಯನ ಸ್ವಾಧೀನಕ್ಕೆ ಬಂದು ಉಳಿದುಕೊಂಡರೂ ಕಳೆದುಹೋದ ಸಾಮ್ರಾಜ್ಯಾಧಿಕಾರವು ಆತನಿಗೆ ಎಂದೂ ಪ್ರಾಪ್ತವಾಗಲಿಲ್ಲ.

ಇಂತು ವಿಜಯನಗರ ಸಾಮ್ರಾಜ್ಯವು ಜರ್ಜರಿತವಾಗಿ ನಶಿಸಿ ಹೋಗುತ್ತ, ಆ ಸಾಮ್ರಾಜ್ಯದ ಮೂರ್ಧಾಭಿಷಿಕ್ತ ಅಧಿಪತಿಯಾದ ಶ್ರೀರಂಗರಾಯನು ದೈನ್ಯ-ದುರವಸ್ಥೆಯನ್ನು ಅನುಭವಿಸುತ್ತಿದ್ದರೂ ಸಾಮ್ರಾಜ್ಯದ ಬಗೆಗಾಗಲಿ, ರಾಯನ ಬಗೆಗಾಗಲಿ ಜನತೆಯಲ್ಲಿಯೂ ನಾಯಕರಲ್ಲಿಯೂ ಗೌರವ, ಅಭಿಮಾನ, ಆದರಗಳು ಕೂಡಲೆ ಅಳಿದು ಹೋಗಲಿಲ್ಲವೆಂಬುದು ಅಭಿನಂದನೀಯವಾದ ಒಂದು ಸಂನಿವೇಶವಾಗಿದೆ.

ದೀರ್ಘಕಾಲದವರೆಗೆ ಅಖಿಲ ಲೋಕೋಪಕಾರಕನಾಗಿ ನಭೋಮಂಡಲ ದಲ್ಲಿ ರಾರಾಜಿಸಿದ ರವಿರಾಜನು ಅಸ್ತಾಚಲಕ್ಕಿಳಿದರೂ ಆತನ ಸಂಧ್ಯಾ ಪ್ರಭೆಯು ಕೆಲಕಾಲ ಸರ್ವಜನಾದರಣೀಯವಾಗಿ ಬೆಳಗುವಂತೆ, ವಿಜಯನಗರ ಸಾಮ್ರಾಜ್ಯವೂ ಶ್ರೀರಂಗರಾಯನೂ ಹೀಗೆ ಜನಾಂಗದ ಪ್ರೀತಿ-ವಿಶ್ವಾಸಗಳಿಗೆ ನೆಲೆಯಾದುದು ಯುಕ್ತವೆ ಆಗಿರುವುದಲ್ಲವೆ ? ಈ ಇಪ್ಪತ್ತೆರಡು ವರ್ಷಗಳ ವರೆಗೆ ರಾಯನ ದೊರೆತನವನ್ನು ನಿರ್ದೇಶಿಸಿ ವಿಜಯನಗರ ಸಾಮ್ರಾಜ್ಯದ ಗೌರವಯುಕ್ತವಾದ ಸ್ಮೃತಿಯನ್ನು ಪಾಲಿಸುವ ಹಲವು ಶಾಸನಗಳು ದೊರೆಯುತ್ತವೆ. ಹೀಗೆ ಸಾಮ್ರಾ ಜ್ಯದ ಬಗೆಗೆ ಸ್ವಾಮಿನಿಷ್ಠೆಯನ್ನೂ ಕೃತಜ್ಞತೆಯನ್ನೂ ಪ್ರಕಟಗೊಳಿಸಿದ ನಾಯಕರಲ್ಲಿ ಮೈಸೂರು, ತಂಜಾವೂರು ಮತ್ತು ಕೆಳದಿ ಇವುಗಳ ಅರ ಸರು ಪ್ರಮುಖರಾಗಿರುವರು.

ಈ ರೀತಿಯಾಗಿ ಮುರಿದು ಹೋದ ವಿಜಯನಗರಸಾಮ್ರಾಜ್ಯವು ಭಾವಲೋಕದಲ್ಲಿ ಗೌರವದ ಸ್ಥಾನವನ್ನು ಇನ್ನೂ ಹೊಂದಿಕೊಂಡಿರು ವಾಗ, ಭೂಲೋಕದ ಮೇಲಿನ ಅದರ ಜೀವನವನ್ನು ಶತಶಃ ವಿದೀರ್ಣ ಮಾಡಿ ಅದರ ಅಸ್ತಿತ್ವವನ್ನು ಸಂಪೂರ್ಣವಾಗಿ ಅಳಿದು ಬಿಡುವ ಸಂನಿ ವೇಶಗಳು ಭರದಿಂದ ಚಾಲನೆಗೊಂಡುವು.

ಕಂಠೀರವ ನರಸರಾಜನ ತರುವಾಯ ದೊಡ್ಡದೇವರಾಜನು (೧೬೫೯-೭೨), ಬಳಿಕ ಚಿಕ್ಕದೇವರಾಜನು (೧೬೭೨-೧೭೦೪) ಮೈಸೂ ರಿಗೆ ದೊರೆಗಳಾದರು. ಇವರು ನರಸರಾಜನ ಸಾಮ್ರಾಜ್ಯನಿಷ್ಠೆಯ ಪರಂಪರೆಯನ್ನು ಮುಂದುವರಿಸಿ ವಿಜಯನಗರದ ಕೀರ್ತಿಯನ್ನೂ ರಾಯನ ಗೌರವವನ್ನೂ ಉಳುಹಲು ಯಥಾಶಕ್ತಿ ಹೆಣಗಾಡಿದರು. ಕೆಳದಿಯ ಶಿವಪ್ಪನಾಯಕನು (೧೬೪೫-೬೦) ಆಮರಣ ಸ್ವಾಮಿನಿಷ್ಠ ನಾಗಿದ್ದನು. ಆತನು ಹಿಂದೆ ವಿವರಿಸಿದ ರೀತಿಯಿಂದ ಶ್ರೀರಂಗರಾಯನ ಮೊದಲನೆಯ ವಿಪತ್ತಿನಲ್ಲಿ ಆತನಿಗೆ ಸಹಾಯನಾದಂತೆ, ಮುಂದೆಯೂ ಆತನ ಕಾರ್ಯಕ್ಕೆ ಆದಷ್ಟುಮಟ್ಟಿಗೆ ನೆರವಾಗುತ್ತಲೆ ಇದ್ದನು. ಆದರೆ ಆತನ ಅನಂತರ ಅರಸೊತ್ತಿಗೆಯ ಅಸ್ಥಿರತೆಯ ಮೂಲಕವೊ,ವಿಜಾಪುರದ

ಸಂತತವಾದ ದಾಳಿಗಳ ಮೂಲಕವೂ, ಕೆಳದಿಯ ಅರಸರಲ್ಲಿಯ ಸಾಮ್ರಾಜ್ಯನಿಷ್ಠೆಯು ಕಳೆಗುಂದಿತು. ಮೈಸೂರು ಮತ್ತು ಕೆಳದಿಯ ರಾಜ್ಯಗಳಲ್ಲಿ ಪರಸ್ಪರ ಸ್ಪರ್ಧೆಯೂ ವೈಮನಸ್ಯವೂ ಬೆಳೆದು ಅನೇಕ ಕಲಹಪ್ರಸಂಗಗಳು ಉಂಟಾದುವು.

ಸಾಮ್ರಾಜ್ಯಕಂಟಕನಾದ ತಿರುಮಲ ನಾಯಕನು ಮರಣಹೊಂದಿ (೧೬೫೯),ಕೆಲದಿನಗಳಾದ ಬಳಿಕ ಚೊಕ್ಕನಾಥನು ಮದುರೆಯ ನಾಯಕ ನಾಗಿ ಆಳತೊಡಗಿದನು (೧೬೫೯-೮೨). ಈತನು ತಿರುಮಲನಾಯಕನ ನೀತಿಯನ್ನೇ ಮೇಲ್ಪಂಕ್ತಿಯಾಗಿ ಇಟ್ಟುಕೊಂಡು ಆತನ ಸಾಮ್ರಾಜ್ಯ ದ್ರೋಹದ ಪಂಥವನ್ನು ಮುಂದೂಡಿದನು. ಈತನು ಶ್ರೀರಂಗರಾಯನು ಹಾಗೂ ಆತನ ಹಿತಚಿಂತಕರಾದ ಮೈಸೂರ ಅರಸರೊಡನೆ ದ್ವೇಷವನ್ನೆ ಸಾಧಿಸಿ ವಿಜಾಪುರದೊಡನೆ ಹೆಚ್ಚು ಹೆಚ್ಚು ಸ್ನೇಹವನ್ನು ಬೆಳೆಸಿದನು. ಮೈಸೂರ ಅರಸರು ರಾಯನ ಬೆನ್ನುಕಟ್ಟಿದುದು ಈತನಿಗೆ ಸರಿದೋರ ಲಿಲ್ಲ. ಮೈಸೂರವರ ಬೆಳೆವ ಪ್ರಭಾವವನ್ನು ಈತನು ಸಹಿಸದಾದನು. ವಿಜಾಪುರದವರು ಮೈಸೂರ ಪ್ರಾಂತಗಳಲ್ಲಿ ಆಗಾಗ ಮಾಡುವ ದಾಳಿ ಗಳನ್ನೂ ವಿಜಯನಗರದ ಅಳಿದುಳಿದ ಪ್ರದೇಶಗಳಲ್ಲಿ ಹೂಡಿದ ಆಕ್ರಮಣ ವನ್ನೂ ಈತನು ಅಭಿನಂದಿಸಿದನು.

ಇದಕ್ಕೆ ಪ್ರತಿಯಾಗಿ ಮೈಸೂರ ಅರಸರು ನಾಯಕನ ರಾಷ್ಟ್ರ ವಿಘಾತಕವಾದ ಈ ದುಷ್ಟನೀತಿಯನ್ನು ಖಂಡಿಸಿ ಆತನ ತೇಜೋಭಂಗ ವನ್ನು ಮಾಡುವುದು ತಮ್ಮ ಕರ್ತವ್ಯವಾಗಿ ಎಣಿಸಿದರು. ಇದರಿಂದ ನಾಯಕನೂ ಆತನ ಒಡನಾಡಿಗಳೂ ಮತ್ತು ಮೈಸೂರ ದೊರೆಗಳೂ ಇವರ ನಡುವೆ ಆಗಾಗ ಕಲಹದ ಕಿಡಿಗಳು ಹಾರಿದುವು. ಒಬ್ಬರೊಬ್ಬರ ಪ್ರಾಂತಗಳಲ್ಲಿ ದಾಳಿಗಳೂ ಆಕ್ರಮಣಗಳೂ ನಡೆದುವು.

ಬರುಬರುತ್ತ ವಿಜಯನಗರದ ಶತ್ರುಗಳು ಹೆಚ್ಚಿದರು. ಮೈಸೂರ ಹೊರತು ರಾಯನ ಪಕ್ಷವನ್ನು ಪುರಕಸ್ಕರಿಸಲು ಯಾರೂ ಉಳಿಯಲಿಲ್ಲ. ಈ ಸಂನಿವೇಶವು ಶ್ರೀರಂಗರಾಯ ಮತ್ತು ಮೈಸೂರ ಒಡೆಯರು ಇವರ ಋಣಾನುಬಂಧಪ್ರಪಂಚದಲ್ಲಿ ಅತ್ಯಂತ ಸಂಸ್ಮರಣೀಯವಾಗಿದೆ.

ರಾಯನ ಮತ್ತು ಮೈಸೂರ ಅರಸರ ಅರಿಗಳ ಹಾವಳಿಯು ಹೆಚ್ಚಿತು. ಮದುರೆಯು, ಕೆಳದಿಯು, ವಿಜಾಪುರವು, ಮರಾಟರು, ಮೊಗಲರು, ಇವರೆಲ್ಲರು ಈ ಸ್ವಾಮಿ-ಸೇವಕರ ಮೇಲೆ ಕೈಯೆತ್ತುವವರೆ. ಆದರೂ ಮೈಸೂರ ನರಪತಿಗಳ ಧೈರ್ಯವು ಕುಂದಲಿಲ್ಲ. ಶಕ್ತಿಯು ಕುಗ್ಗಲಿಲ್ಲ. ದೊಡ್ಡ ದೇವರಾಜನೂ ಬಳಿಕ ಚಿಕ್ಕದೇವರಾಜನೂ ಹೆಚ್ಚಿನ ಪ್ರತಾಪ ದಿಂದ ಹಗೆಗಳ ವ್ಯೂಹವನ್ನು ಪ್ರತಿಭಟಿಸಿ, ಅವರ ಕುತಂತ್ರಗಳನ್ನು ಮುರಿ ದೊತ್ತಿದರು. ಚೊಕ್ಕನಾಥನು ಹತಬಲನಾದನು. ಮೈಸೂರ ಶಕ್ತಿಯೂ ಪ್ರಭಾವವೂ ದಿನದಿನಕ್ಕೆ ಉತ್ಕರ್ಷ ಹೊಂದಿದುವು.

ಈ ನಡುವೆ ಚೊಕ್ಕನಾಥನು ಇನ್ನೊಂದು ಹೇಯವಾದ ಕೃತ್ಯ ವನ್ನು ಆಚರಿಸಿ ವಿಜಯನಗರಸಾಮ್ರಾಜ್ಯದ ಬೇರುಗಳನ್ನು ಕತ್ತರಿಸಿ ಅದಕ್ಕೆ ಪೂರ್ಣವಾಗಿ ಜಲಸಮಾಧಿಯನ್ನು ಕೊಟ್ಟನು. ಆದು ಈ ಪರಿಯಾಗಿ :

ತಂಜಾವೂರು ಸಾಮ್ರಾಜ್ಯದ ಈ ದುರ್ಗತಿಯಲ್ಲಿಯೂ ಎಂದಿನಂತೆ ಅತಿಶಯವಾದ ಸ್ವಾಮಿನಿಷ್ಠೆಯಿಂದ ವರ್ತಿಸಿತು. ಈ ಸಮಯದಲ್ಲಿ ವಿಜಯರಾಘವನು ತಂಜಾವೂರ ನಾಯಕನಾಗಿದ್ದನು. ವಿಜಾಪುರದ ಮತ್ತು ಮರಾಟರ ಆಕ್ರಮಣಗಳಿಂದ ಈ ರಾಜ್ಯವು ದುರ್ಬಲವಾಗಿ ದ್ದಿತು. ಪರರ ಸಹಾಯದಿಂದ ಬಲಗೊಂಡು ಉನ್ಮತ್ತನಾದ ಚೊಕ್ಕ ನಾಥನಿಗೆ ತನ್ನ ನೆರೆಯಲ್ಲಿ ನೆಲೆಸಿದ ವಿಜಯರಾಘವನ ಈ ಸಾಮ್ರಾಜ್ಯ-ನಿಷ್ಠೆಯನ್ನು ಸೈರಿಸುವುದಾಗಲಿಲ್ಲ. ಆತನು ತಂಜಾವೂರ ಮೇಲೆ ಘೋರ ವಾದ ಏರಾಟವನ್ನು ಮಾಡಿದನು. ವಿಜಯರಾಘವನು ಸಾಮ್ರಾಜ್ಯದ ಬಿರುದನ್ನು ಎತ್ತಿ, ಕೆಚ್ಚೆದೆಯಿಂದ ಕೊನೆಯವರೆಗೆ ಕಾದುತ್ತ ಕೊಳಗುಳ ದಲ್ಲಿ ಮಡಿದನು. ಆತನ ಮಗನು ಆತನನ್ನು ಹಿಂಬಾಲಿಸಿದನು. ರಾಣೀ ವಾಸದವರು ಹಗೆಯ ಕೈಗೆ ಸಿಕ್ಕಲಾರದೆ ಒಬ್ಬರನ್ನೊಬ್ಬರು ಇರಿದು ಕೊಂಡು ಪ್ರಾಣಬಿಟ್ಟರು. ಚೆಂಗಮಲದಾಸನೆಂಬ ವಿಜಯರಾಘವನ ನಾಲ್ಕುವರ್ಷದ ಮಗುವು ಈ ಬಲಿದಾನದಿಂದ ಉಳುಹಲ್ಪಟ್ಟು ಬದುಕಿ ಕೊಂಡಿತು.

ಬಳಿಕ ಚೊಕ್ಕನಾಥನು ತಂಜಾಪೂರ ರಾಜ್ಯವನ್ನು ಸೆಳೆದು ಕೊಂಡು ಅಲ್ಲಿ ಅಳಗಿರಿ ಎಂಬ ತನ್ನ ಮಲತಮ್ಮನನ್ನು ಸ್ಥಾಪಿಸಿದನು. ಅತ್ತ ಚೆಂಗಮಲದಾಸನು ನೆಗಾಪಟ್ಟಣದ ಅಜ್ಞಾತವಾಸದಲ್ಲಿ ಸುರಕ್ಷಿತ ವಾಗಿ ಬೆಳೆಯುತೊಡಗಿದ್ದನು. ರಾಯಸ ವೆಂಕಣ್ಣನು ಮೊದಲಾದ ರಾಜ ನಿಷ್ಠರು ಆತನನ್ನು ಕೂಡಿ ಆತನ ಪಕ್ಷವನ್ನು ಎತ್ತಿಹಿಡಿದರು. ವಿಜಾಪು ರದ ಸಹಾಯದಿಂದ ಆತನಿಗೆ ತಂಜಾವೂರ ಪಟ್ಟವು ದೊರೆಯಬೇ ಕೆಂದು ಪ್ರಯತ್ನಗಳು ನಡೆದುವು. ಶಹಜಿಯ ಮಗನಾದ ವೆಂಕೋ ಜಿಯು ಚೆಂಗಮಲದಾಸನಿಗೆ ಪಟ್ಟವನ್ನು ಕೊಡಿಸಲು ವಿಜಾಪುರದ ದಂಡಿನೊಡನೆ ತಂಜಾವೂರಿಗೆ ಬಂದನು. ಅಷ್ಟರಲ್ಲಿ ಅಳಗಿರಿಯು ತನ್ನ ಅವಿಚಾರದ ಆಳಿಕೆಯಿಂದ ಬಹುಜನರಿಗೆ ಬೇಡಾಗಿದ್ದನು. ಆತನು ವೆಂಕೋಜಿಯ ಹೊಡೆತವನ್ನು ತಿಂದು ತಂಜಾವೂರನ್ನು ಬಿಟ್ಟು ಓಡಿ ಹೋದನು. ಚೆಂಗಮಲದಾಸನು ವೆಂಕೋಜಿಯ ಮತ್ತು ರಾಯಸ ವೆಂಕಣ್ಣನ ಸಹಾಯದಿಂದ ತಂಜಾವೂರ ರಾಜ್ಯಕ್ಕೆ ಸ್ಥಾಪಿತನಾದನು. ವೆಂಕೋಜಿಯು ಕುಂಭಕೋಣಕ್ಕೆ ತೆರಳಿದನು.

ಮುಂದೆ ಸ್ವಲ್ಪ ದಿನಗಳಲ್ಲಿ ಸ್ವಾರ್ಥಪರನೂ ಅಧಿಕಾರಲೋಲು ಪನೂ ಆದ ವೆಂಕಣ್ಣನು ಮಂತ್ರಿಪದವು ತನಗಾಗದಿರಲು ಚೆಂಗಮಲ ದಾಸನ ಮೇಲೆ ಮುನಿದನು. ಆತನು ವೆಂಕೋಜಿಯನ್ನು ಹುರಿದುಂಬಿಸಿ ತಂಜಾವೂರ ಮೇಲೆ ದಂಡನ್ನು ಹೊರಡಿಸಿದನು. ವೆಂಕೋಜಿಯು ತಂಜಾವೂರನ್ನು ಕಿತ್ತುಕೊಂಡನು. ರಾಜಕುಮಾರ ಚೆಂಗಮಲದಾಸ ನನ್ನು ಮೂಲೆಗೊತ್ತಿ ಆತನ ರಾಜ್ಯವನ್ನು ಆಕ್ರಮಿಸಿ ಆಳತೊಡಗಿದನು (ಸು. ೧೬೭೭). ಇಂತು ಸ್ವಾಮಿನಿಷ್ಠವಾದ ವಿಜಯನಗರದ ಈ ಸಾಮಂತ ರಾಜ್ಯವು ವೈರಿಗಳ ಬಾಯಿಗೆ ತುತ್ತಾಯಿತು.

ಈ ನಡುವೆ ಮಹಾರಾಷ್ಟ್ರದಲ್ಲಿ ನೂತನವಾದ ಒಂದು ಸ್ವಾತಂತ್ರ್ಯಜ್ಯೋತಿಯು ಉದಯವಾಗಿತ್ತು. ಶಹಜಿಯ ಮಗನಾದ ಶಿವಾಜಿಯು ಅನ್ಯಾಕ್ರಾಂತವಾದ ಸ್ವದೇಶದಲ್ಲಿ ಮತ್ತೆ ಸ್ವರಾಜ್ಯವನ್ನು ಸ್ಥಾಪಿಸುವ ಸಂಕಲ್ಪವನ್ನು ಹೂಡಿದ್ದನು. ವಿಜಯನಗರ ಸಾಮ್ರಾಜ್ಯ-

ಸ್ಥಾಪನೆಯ ಪೂರ್ವದಲ್ಲಿ, ಸುತ್ತಲೂ ಕವಿದ ವಿಷಮವಾದ ಕಾಳರಾತ್ರಿಯಲ್ಲಿ ಹರಿಹರ ಬಂಧುಗಳಲ್ಲಿ ಯಾವ ವಿಧದ ಸ್ವಾತಂತ್ರ್ಯಸ್ಫೂರ್ತಿಯೂ ಯಾವ ಬಗೆಯ ಸ್ವರಾಜ್ಯಪ್ರೇರಣೆಯೂ ಹೊರಹೊಮ್ಮಿತೋ, ಅದೆ ವಿಧದ ಸ್ವಾತಂತ್ರ್ಯಸ್ಫೂರ್ತಿಯೂ ಮತ್ತು ಅದೆ ಬಗೆಯ ಸ್ವರಾಜ್ಯಪ್ರೇರಣೆಯೂ ಇವುಗಳಿಂದ ಚೈತನ್ಯಗೊಂಡ ಈ ಮಹಾವೀರನು ತನ್ನ ಕಾರ್ಯಕ್ಕೆ ಉದ್ಯುಕ್ತನಾಗಿದ್ದನು. ಈ ಎರಡು ಸಂವಿಧಾನಗಳಲ್ಲಿ ದೇಶ ಮತ್ತು ಕಾಲಗಳ ಭಿನ್ನತೆಯಲ್ಲದೆ ಕಾರ್ಯಕ್ಷೇತ್ರದ ಪರಿಮಿತತೆಯೂ ಬೇರೊಂದು ವ್ಯತ್ಯಾಸವಾಗಿದೆ.

ಬಾಲ್ಯದಲ್ಲಿ ತಂದೆ ಶಹಜಿಯೊಡನೆ ಮೈಸೂರ ಪ್ರಾಂತದಲ್ಲಿ ಕೆಲ ಕಾಲ ಸಂಚಾರಮಾಡಿದ ಶಿವಾಜಿಯು, ಅಳಿದು ಹೋಗುತ್ತಿರುವ ವಿಜಯನಗರ ಸಾಮ್ರಾಜ್ಯದ ದಿವ್ಯವಾದ ಚರಿತ್ರೆಯ ಕಥೆಗಳನ್ನು ಕೇಳಿ ಕೇಳಿ ತನ್ನ ಮುಂದಣ ಜೀವನಕಾರ್ಯದ ಸ್ಫೂರ್ತಿಯನ್ನು ಪಡೆದುಕೊಂಡಿರುವುದು ಸಂಭವನೀಯವಾಗಿದೆ. ಅದೇನೆ ಇರಲಿ. ವಿಜಯನಗರದ ಧ್ಯೇಯವನ್ನು ಅನುಸರಿಸಿ ವಿಜಯನಗರವು ಮಾಡಿದಂತಹ ಉದಾತ್ತವಾದ ಕಾರ್ಯವನ್ನು ಮಾಡಿ ತನ್ನ ಜನಾಂಗಕ್ಕೆ ಮಹೋಪಕಾರವನ್ನು ಎಸಗಿದ ಈ ಮಹಾನುಭಾವನಿಂದ ಕುಸಿಯುತ್ತಿರುವ ವಿಜಯನಗರ ಸಾಮ್ರಾಜ್ಯಕ್ಕೆ ಮಾತ್ರ ಯಾವ ಉಪಕಾರವೂ ಆಗಲಿಲ್ಲವೆಂಬುದು ವಿಧಿವಿಲಾಸವಲ್ಲವೆ ? ಇಷ್ಟೆ ಅಲ್ಲ, ಈತನಿಂದ ವಿಜಯನಗರ ಸಾಮ್ರಾಜ್ಯಕ್ಕೆ ಕೆಲಮಟ್ಟಿಗೆ ಅಪಾಯವೆ ಆಯಿತು ಎಂದು ಹೇಳಬೇಕಾಗಿದೆ !

ಈ ಸಮಯದಲ್ಲಿ ಶಿವಾಜಿಯು ವಿಜಾಪುರ ಮತ್ತು ಮೊಗಲ ಶಕ್ತಿಗಳೊಡನೆ ಪ್ರತಿಭಟಿಸುತ್ತ ತನ್ನ ಬಲವನ್ನು ಸಂವರ್ಧಿಸಿಕೊಂಡಿದ್ದನು. ಆತನು ವಿಜಯನಗರ ಸಾಮ್ರಾಜ್ಯವು ಹೀಗೆ ಮೂಲೆಗುಂಪಾಗಿ, ಪರಕೀಯರೂ ಮಂಡಲಪತಿಗಳೂ ಪ್ರಬಲಿಸಿ ಮನಬಂದಂತೆ ಕೈಸಾಧಿಸುತ್ತಿರುವುದನ್ನು ಅವಲೋಕಿಸಿದನು. ಎಲ್ಲೆಲ್ಲಿಯೂ ಗಲಭೆಯೂ ಗೊಂದಲವೂ ಎದ್ದ ಈ ಪರಿಸ್ಥಿತಿಯಲ್ಲಿ ತಾನಾದರೂ ಮುಂದೆ ನುಗ್ಗಿ ತನ್ನ

ಸಾಹಸವನ್ನು ಬೀರಿ ತನ್ನ ಸ್ವರಾಜ್ಯದ ಕಿಡಿಗಳನ್ನು ಹಬ್ಬಿಸಲು ಇದೀಗ ಸುಸಮಯವೆಂದು ಬಗೆದನು. ಇದಲ್ಲದೆ ಈ ದಕ್ಷಿಣಪ್ರಾಂತದಲ್ಲಿ, ಮೈಸೂರು ಮತ್ತು ತಂಜಾವೂರು ಪ್ರದೇಶಗಳಲ್ಲಿ ತನ್ನ ತಂದೆಯ ಸಂಪಾದನೆಯಿಂದ ತನ್ನ ಮನೆತನಕ್ಕೆ ಪ್ರಾಪ್ತವಾದ ಜಾಗೀರುಗಳ ಸಮಾಚಾರವನ್ನು ತಿಳಿದುಕೊಳ್ಳಲು ಆತನು ಎಳಸಿದನು. ಈಗಾಗಲೆ ಆತನ ತಮ್ಮನಾದ ವೆಂಕೋಜಿಯು ಇದೀಗ ನೋಡಿದಂತೆ ತಂಜಾವೂರಲ್ಲಿ ಸ್ಥಾಪಿತನಾಗಿದ್ದನು.

ಈ ಉದ್ದೇಶಗಳಿಂದ ಪ್ರೇರಿತನಾದ ಶಿವಾಜಿಯು ದೊಡ್ಡ ಸೈನ್ಯದೊಂದಿಗೆ ಕರ್ನಾಟಕದ ದಂಡಯಾತ್ರೆಗೆ ಹೊರಟನು (೧೬೭೭-೭೮). ಶೀಘ್ರಗತಿಯಿಂದ ಸಾಗಿದ ಆತನ ಈ ದಿಗ್ವಿಜಯವು ಬಹುಮಟ್ಟಿಗೆ ಯಶಸ್ವಿಯಾಗಿ ಪರಿಣಮಿಸಿತು. ಒಂದೇ ಪೆಟ್ಟಿಗೆ ಜಿಂಜಿಯು ಆತನ ವಶವಾಯಿತು. ಆತನು ನೆರೆಯ ನಾಡುಗಳನ್ನು ಕಿತ್ತುಕೊಂಡು ತಂಜಾವೂರಿಗೆ ಪ್ರಯಾಣ ಬೆಳೆಸಿದನು. ವೆಂಕೋಜಿಯೊಡನೆ ಎಳೆದಾಡಿ ಪಾಲನ್ನು ಬೇಡಿ ಒಡಂಬಡಿಕೆ ಮಾಡಿಕೊಂಡನು. ಹದಿನಾಲ್ಕು ತಿಂಗಳುಗಳವರೆಗೆ ಮುತ್ತಿಗೆಯು ನಡೆದು ವೆಲ್ಲೂರು ಆತನ ಕೈಸೇರಿತು(೧೬೭೮). ಮಾರ್ಗದಲ್ಲಿ ಆತನು ಶ್ರೀರಂಗಪಟ್ಟಣಕ್ಕೆ ಕೈಚಾಚಿ ಮೈಸೂರನ್ನು ಕೆಣಕಿದನು. ಆದರೆ ಮೈಸೂರವರ ಪ್ರಬಲವಾದ ಪ್ರತಿಕಾರದ ಮೂಲಕ ಆತನು ಅವರ ಗೊಡವೆಯನ್ನು ಬಿಡಬೇಕಾಯಿತು. ಇಷ್ಟರಲ್ಲಿ ಔರಂಗಜೇಬನು ದಕ್ಷಿಣ ಭಾರತವನ್ನು ಪಾದಾಕ್ರಾಂತ ಮಾಡಲು ತಾನೇ ಹೊರಡಲಿರುವನು ಎಂಬ ವರ್ತಮಾನವು ಬಂದಿತು. ಆದುದರಿಂದ ಶಿವಾಜಿಯು ಬೇಗನೆ ತನ್ನ ರಾಜ್ಯಕ್ಕೆ ತೆರಳಿದನು. ಮುಂದೆ ಅಲ್ಪಾವಧಿಯಲ್ಲಿ ಕಾಲವಶನಾದನು (೧೬೮೦).

ಈ ಮೇರೆಗೆ ತನ್ನ ಕೈಯಿಂದ ತನ್ನ ರಾಜ್ಯವನ್ನು ಕಳೆದುಕೊಂಡು, ಪದಭ್ರಷ್ಟನಾಗಿ, ಮುನ್ನೂರು ವರ್ಷಗಳವರೆಗೆ ಅತುಲ ವೈಭವದಿಂದ ಬಾಳಿ ಬೆಳಗಿದ ವಿಜಯನಗರಸಾಮ್ರಾಜ್ಯವು ತನ್ನ ಕಣ್ಣೆದಿರಿನಲ್ಲಿ ವಾತಾಹತವಾದ ಮೋಡದಂತೆ ಅನೇಕ ಆಘಾತಗಳಿಂದ ಚೂರುಚೂರಾಗಿ ಹರಿದು ಹಂಚಿ ಹೋಗುತ್ತಿರುವುದನ್ನು ನೋಡುತ್ತ ವನವಾಸ-ಅಜ್ಞಾತ

ವಾಸಗಳಲ್ಲಿ ಕಾಲಕಳೆದ, ಮಹಸೀಯನೂ ನಿರ್ಭಾಗ್ಯನೂ ಶಾಪದಗ್ಧನೂ ಆದ ಈ ಸಮ್ರಾಜನು ತನ್ನ ಜೀವನಯಾತ್ರೆಯನ್ನು ಮುಗಿಸಿದನು (ಸು.೧೬೪೧).

ವಿಜಯನಗರ ಸಾಮ್ರಾಜ್ಯವು ಭೂಲೋಕದಿಂದ ಮಾಯ ವಾಯಿತು !

ಭಾರತೀಯರ ಕೊನೆಯ ಸಾಮ್ರಾಜ್ಯವು ನಾಮಶೇಷವಾಯಿತು!

ಕರ್ನಾಟಕದ ಕೊನೆಯ ಭಾಗ್ಯರೇಷೆಯು ಅಳಿಸಿ ಹೋಯಿತು !

ಶ್ರೀರಂಗರಾಯನು ವಿಜಯನಗರದ ಕೊನೆಯ ಸಮ್ರಾಜನು. ಒಳ್ಳೆಯ ರಾಜನಲ್ಲಿರಬೇಕಾದ ಅನೇಕ ಸದ್ಗುಣಗಳು ಈತನಲ್ಲಿ ವಾಸಿಸು ತ್ತಿದ್ದುವು. ಈತನು ಶೂರನೂ ಧೀರನೂ ಕರ್ತವ್ಯನಿರತನೂ ಆಗಿದ್ದನು. ಆದರೆ ಈತನ ಗುಣಗಳಿಗಿಂತ ವಿನಾಶೋನ್ಮುಖವಾದ ವಿಜಯನಗರದ ವಿರೋಧಕ ಶಕ್ತಿಗಳು ಮಿಗಿಲಾಗಿ ಮೇರೆವರಿದುವು. ಈತನಲ್ಲಿಯ ಕೆಲವು ವೈಯುಕ್ತಿಕ ದೋಷಗಳು ಸಾಮ್ರಾಜ್ಯದ ವಿನಾಶಕ್ಕೆ ಅಂಶತಃ ನಿಮಿತ್ತ ವಾಗಿರಬಹುದು. ಆದರೆ ಅದಕ್ಕೆ ಪರಿಸ್ಥಿತಿಯೇ ಪ್ರಧಾನಕಾರಣವಾಗಿದೆ ಎಂಬುದು ಮೇಲೆ ವಿವರಿಸಿದ ಚರಿತ್ರೆಯನ್ನು ಪರೀಕ್ಷಿಸಿದರೆ ಮನವರಿಕೆ ಯಾಗುವುದು. ಅಥವಾ ಈ ದೈವ-ಪರಿಸ್ಥಿತಿವಾದನ್ನು ಬದಿಗಿರಿಸಿ ಹೆಚ್ಚು ವ್ಯಾವಹಾರಿಕವಾದ ಭಾಷೆಯಲ್ಲಿ ಮಾತನಾಡುವುದಾದರೆ, ಶ್ರೀರಂಗರಾಯನ ಮಾಂಡಲಿಕರು, ಆತನ ಅಧಿಕಾರಿಗಳು, ಆತನ ನಾಯ ಕರು, ಆತನ ನಂಬುಗೆಯವರು ಆತನನ್ನೂ ವಿಜಯನಗರ ಸಾಮ್ರಾಜ್ಯ ವನ್ನೂ ಹಾಳುಮಾಡಿದರು ಎಂದು ಧಾರಾಳವಾಗಿ ಹೇಳಬೇಕಾಗುತ್ತದೆ. ಈ ಜನರು ಈ ರೀತಿಯಾಗಿ ಈತನನ್ನು ವಂಚಿಸದೆ ಇದ್ದರೆ, ಇಷ್ಟು ಬೇಗ ಅಳಿದುಹೋಗುವ ದುಃಸ್ಥಿತಿಯು ವಿಜಯನಗರ ಸಾಮ್ರಾಜ್ಯಕ್ಕೆ ಒದಗಿರಲಿಲ್ಲ.

ರಾಯನಿಗೆ ಶ್ರೀವೈಷ್ಣವಮತದಲ್ಲಿ ವಿಶ್ವಾಸವಿದ್ದಿತು. ಆತನು ರಾಮ ಭಕ್ತನಾಗಿದ್ದನು. 'ಶ್ರೀರಾಮ' ಎಂಬುದು ಆತನ ಶಾಸನಗಳ ಅಂಕಿತವಾ ಗಿದೆ. ಬೇಲೂರ ಕೇಶವನಲ್ಲಿಯೂ ಆತನಿಗೆ ನಿಷ್ಠೆಯಿದ್ದಿತು.

ಈ ಆಳಿಗಾಲದಲ್ಲಿಯೂ ರಾಯನು ವಿಜಯನಗರದ ವಿಶಾಲ ಪರಂಪರೆಯನ್ನು ಅನುಸರಿಸಿ ಕವಿಗಳಿಗೆ, ಗ್ರಂಥಕಾರರಿಗೆ, ವಿದ್ಯಾವಂತರಿಗೆ ಆಶ್ರಯವನ್ನಿತ್ತನು; ಅವರನ್ನು ಪೋಷಿಸಿದನು. ಆತನು ಅನೇಕ ಧರ್ಮಸ್ಥಾನಗಳಿಗೂ ಮಠ-ದೇವಾಲಯಗಳಿಗೂ ದಾನಗಳನ್ನು ನೀಡಿದನು. ರಾಯನಿಗೆ ಮೂವರು ಹೆಂಡಂದಿರೂ ಇಬ್ಬರು ಗಂಡುಮಕ್ಕಳೂ ಇದ್ದರು.

---

## ಇಪ್ಪತ್ತೇಳನೆಯ ವಿಲಾಸ

# ಅರವೀಡು ಆಳಿಕೆಯ ಸಿಂಹಾವಲೋಕನ

ಅರವೀಡು ಮನೆತನಕ್ಕೆ ಕರ್ನಾಟಕ ಮನೆತನವೆಂದೂ ಕರೆವುದುಂಟು. ಈ ಮನೆತನವು ಸುಮಾರು ೧೧೨ ವರ್ಷ ವಿಜಯನಗರದ ಸಾಮ್ರಾಜ್ಯಾಧಿಕಾರಿಯಾಗಿ ಬಾಳಿತು. ಈ ಮನೆತನದಲ್ಲಿ ಅರಸರಾದವರು ಏಳ್ವರು.

ಈ ಮನೆತನದಲ್ಲಿ ಪಟ್ಟಾಧಿಕಾರಿಗಳಾದ ಅರಸರ ವಂಶಕ್ರಮವನ್ನು ಕುರಿತು ಒಂದು ಮಾತನ್ನು ಹೇಳಬೇಕಾಗಿದೆ. ಇಲ್ಲಿ ಅನುಸರಿಸಿದ ನಿಯಮವು ಸಂತಾನಪರಂಪರೆಯಾಗಿರದೆ ವಂಶಜ್ಯೇಷ್ಠಪರಂಪರೆಯಾಗಿದೆ. ಈ ನಿಯಮದಂತೆ ಒಬ್ಬ ಅರಸನು ಮೃತನಾದ ಬಳಿಕ ಆ ಮನೆತನದಲ್ಲಿ ಹಿರಿಯನಾದವನಿಗೆ ಪಟ್ಟವು ದೊರೆವುದು. ಮೃತರಾಜನ ಮಗನೆಂದು ಆತನು ಕಿರಿಯನಾಗಿದ್ದರೂ ಪಟ್ಟವು ದೊರೆಯಲಾರದು. ಹೀಗೆ ರಾಜಕುಮಾರರಲ್ಲಿ ಹಿರಿಯನಾದವನೆ ಹಿಂದಿನ ಆಳಿಕೆಯಲ್ಲಿ ಯುವರಾಜನಾಗಿ ಆರಿಸಲ್ಪಡುತ್ತಿದ್ದನು. ಈ ನಿಯಮಾನುಸಾರವಾಗಿ ಆಳಿಯ ರಾಮರಾಯ, ತಿರುಮಲ, ವೆಂಕಟಾದ್ರಿ ಈ ಮೂವರು ಬಂಧುಗಳ

ಸಂತತಿಯಲ್ಲಿ ಆಗಾಗ ಪಟ್ಟವು ತಿರುಗಾಡಿತು. ಈ ತತ್ವವನ್ನು ನೆನೆದು ವಿಚಾರಿಸಿದರೆ, ಈ ಪಟ್ಟಾಧಿಕಾರದ ಬಗೆಗೆ ಸ್ಥೂಲದೃಷ್ಟಿಗೆ ತೋರಿಬರುವ ವೈಷಮ್ಯಶಂಕೆಯು ದೂರವಾಗುತ್ತದೆ.

ವಿಜಯನಗರಸಾಮ್ರಾಜ್ಯವನ್ನು ಕೊನೆಯದಾಗಿ ಆಳಿದ ಅರವೀಡು ಮನೆತನವು ಕರ್ನಾಟಕ ಸಾಮ್ರಾಜ್ಯಕ್ಕೂ ಕೊನೆಯದಾದ ಅರಸುಮನೆತನವಾಗಿದೆ. ಅಂದು ಆರನೆಯ ಶತಮಾನದಲ್ಲಿ ಬಾದಾಮಿಯ ಚಾಲುಕ್ಯರಿಂದ ಸಾಮ್ರಾಜ್ಯವನ್ನು ಆಳಲು ಆರಂಭಿಸಿದ ಕರ್ನಾಟಕವು ಇಂದು ೧೭ನೆಯ ಶತಮಾನದಲ್ಲಿ ಅರವೀಡು ಮನೆತನದ ಸಮಾಪ್ತಿಯೊಂದಿಗೆ ಸಾಮ್ರಾಜ್ಯಾಧಿಕಾರವನ್ನು ಕಳೆದುಕೊಂಡಿತು. ಇದರ ಮುಂದೆ ಕರ್ನಾಟಕವು ಬಲಿಷ್ಠವಾಗಿ ಸಾಮ್ರಾಜ್ಯವೆಂದು ಎಂದೂ ತಲೆಯೆತ್ತಲಿಲ್ಲ. ಕರ್ನಾಟಕ ಸಮ್ರಾಜರ ನೀಳವಾದ ಮಾಲಿಕೆಯ ಒಂದು ತುದಿಗೆ ಒಂದನೆಯ ಪುಲಕೇಶಿಯು ಇದ್ದರೆ, ಇನ್ನೊಂದು ತುದಿಗೆ ಆರ್ವಡಿ ಶ್ರೀರಂಗರಾಯನು ಇದ್ದಾನೆ.

ಈ ಮನೆತನದ ಅರಸರಲ್ಲಿ ಸಾಮಾನ್ಯವಾಗಿ ಬಲ, ತೇಜಸ್ಸು, ಮಹತ್ವಾಕಾಂಕ್ಷೆ ಕಡಿಮೆಯೆನಿಸು ಕಾಣಬರುತ್ತದೆ. ಆದರೂ ಎಲಕ್ಷಣವಾದ ತನ್ನ ಶಕ್ತಿ–ಸಾಹಸಗಳಿಂದ ಈ ಮನೆತನದ ಕೀರ್ತಿಪತಾಕೆಯನ್ನು ಉನ್ನತಗೊಳಿಸಿದ (ಒಂದನೆಯ) ವೆಂಕಟಪತಿರಾಯನು ಸಂಸ್ಮರಣೀಯನಾಗಿದ್ದಾನೆ. ಅನೇಕ ರೀತಿಯಿಂದ ಅಸಾಮಾನ್ಯವಾದ ಆತನ ಆಳಿಕೆಯು ವಿಜಯನಗರದ ಆಳಿಗಾಲದ ಚರಿತ್ರೆಗೆ ಒಂದು ಬಗೆಯ ಕಾಂತಿಯನ್ನು ನೀಡುವಂತಹದಾಗಿದೆ.

ಒಟ್ಟಿನಲ್ಲಿ ನೋಡಿದರೆ ಈ ಮನೆತನದ ಆಳಿಕೆಯು ಸಾಮ್ರಾಜ್ಯಕ್ಕೆ ಹಿತಕರವಾಗಲಿಲ್ಲ. ಮೊದಲು, ತುಳು ಮನೆತನವನ್ನು ಹಿಂದಕ್ಕೆ ಒತ್ತಿ ಈ ಮನೆತನವು ಮುಂದಕ್ಕೆ ಬಂದುದೆ ಸಮರ್ಥನೀಯವಾಗಿರಲಿಲ್ಲ. ಇದರಿಂದ ಈ ಮನೆತನದ ಬಗೆಗೆ ಜನತೆಯಲ್ಲಿ ಒಂದು ಬಗೆಯ ಅನಾದರವು ಹುಟ್ಟಿತು. ಇದರೊಡನೆ ಇನ್ನೂ ಅನೇಕ ರಾಜಕೀಯ ದುರ್ಘಟನೆಗಳು ಕೂಡಿ ಬೆರೆತು ಸಾಮ್ರಾಜ್ಯವನ್ನು ರಸಾತಳಕ್ಕೊಯ್ದುವು.

ಹಿಂದಿನ ಮೂರು ಮನೆತನಗಳು ಮತ್ತು ಈ ಮನೆತನವು ಇವುಗಳಲ್ಲಿ ಹಲವು ಲಕ್ಷಣೀಯವಾದ ವ್ಯತ್ಯಾಸಗಳು ಇರುವುವು. ಈ ಕಾಲದಲ್ಲಿ ಸಾಮ್ರಾಜ್ಯದ ವಿಸ್ತಾರವು ಸಂಕೋಚಪಟ್ಟಿತು. ರಾಜಧಾನಿಯ ಸ್ಥಳಗಳು ಬೇರೆಯಾಗಿ ರಾಜಕೀಯ ಪ್ರದೇಶವೂ ಅದರ ಕೇಂದ್ರಗಳೂ ಸರಿಸಾರ್ಪಟ್ಟುವು. ಹಿಂದಿನ ಕನ್ನಡ ಜನಾಂಗದ ಮತ್ತು ನಾಯಕರ ಪ್ರಾಧಾನ್ಯವು ಅಳಿದು, ಹೊಸ ಜನಾಂಗಗಳ (ತೆಲುಗು, ತಮಿಳು) ಮತ್ತು ನಾಯಕರ ಪ್ರಾಬಲ್ಯವು ಹೆಚ್ಚಿತು. ಹೀಗಿದ್ದರೂ ವಿಜಯನಗರದ ಆ ಹಿಂದಿನ ಪರಂಪರೆಯ ಅಭಿಮಾನವೂ ಅದನ್ನು ಮುಂದುವರಿಸಬೇಕೆಂಬ ಹಂಬಲವೂ ಈ ಮನೆತನದಲ್ಲಿ ಎಷ್ಟೂ ಕಡಿಮೆಯಾಗಲಿಲ್ಲ.

ಆ ಹಿಂದಿನ ವಿಜಯನಗರಸಾಮ್ರಾಜ್ಯವನ್ನೇ ತಾವು ನಡೆಸುತ್ತಿರುವೆವು ಎಂಬುದು ಈ ಮನೆತನದ ಅರಸರ ದೃಢವಾದ ನಂಬುಗೆಯಿದ್ದಿತು. ಆ ವಿಜಯನಗರದ ಜೀವನಪ್ರವಾಹವೇ ತಮ್ಮಲ್ಲಿಯೂ ಹರಿಯುತ್ತಲಿದೆ ಎಂಬುದು ಅವರ ಪರಿಶುದ್ಧವಾದ ಭಾವನೆಯು. ಹಿಂದಿನ ವಿಜಯನಗರದೊಂದಿಗೆ ತಮ್ಮ ಜೀವನವು ಸಂಲಗ್ನವಾಗಿದೆ ಎಂದು ಬೀರುವುದಕ್ಕಾಗಿ ತಮ್ಮ ನಿಜವಾದ ರಾಜಧಾನಿಯು ಪೆನುಗೊಂಡವಾಗಿರಲಿ, ಚಂದ್ರಗಿರಿಯಾಗಿರಲಿ, ವೆಲ್ಲೂರು ಆಗಿರಲಿ; ಅದನ್ನು ರಾಜಶಾಸನಗಳಲ್ಲಿ ಅಧಿಕೃತವಾಗಿ ಆಗಾಗ ನಿರ್ದೇಶಿಸುವುದು ಮಾತ್ರ 'ಹಂಪೆ–ಹಸ್ತಿನಾವತಿ,' 'ವಿಜಯನಗರ' ಮುಂತಾದ ಪೂರ್ವ ಸಂಕೇತದಿಂತೆಯೆ. ವೆಂಕಟಪತಿರಾಯನ ವರೆಗಿನ ಅರಸರಿಗೆ ತಮ್ಮ ಆರಾಧ್ಯದೈವತವು ಯಾವುದೆ ಇರಲಿ, ಸಾಮ್ರಾಜ್ಯದ ಅಧಿಷ್ಠಾಯಕ ದೈವತವು ಮಾತ್ರ ಎಂದಿನಂತೆ 'ವಿರೂಪಾಕ್ಷ'ನೇ. ರಾಜ್ಯಕರ್ತರ ಸಂಪ್ರದಾಯವೆ ಈ ತೆರನಾಗಿರಲು ಈ ಕಾಲದ ಗ್ರಂಥಕಾರರು, ಪರಕೀಯ ಲೇಖಕರು ಮುಂತಾದವರಿಗೆ ಈ ಸಾಮ್ರಾಜ್ಯವು ವಿಜಯನಗರಸಾಮ್ರಾಜ್ಯವೆಂದೂ ಇಲ್ಲಿಯ ಅರಸರು ವಿಜಯನಗರದ ಅರಸರೆಂದೂ ತೋರಿ, ಹಾಗೆ ಅವರಿಂದ ನಿರ್ದಿಷ್ಟವಾಗಿರುವಲ್ಲಿ ಸೋಜಿಗವೇನು ?

ಸ್ವರಾಜ್ಯಪರಿಪಾಲನೆ ಮತ್ತು ಸ್ವಸಂಸ್ಕೃತಿಯ ಸಂವರ್ಧನೆ ಈ ವಿಜಯನಗರದ ಉಜ್ವಲವಾದ ಧ್ಯೇಯ-ಪರಂಪರೆಗಳು

ಈ ಮನೆತನಕ್ಕೂ ಆದರ್ಶಗಳಾಗಿದ್ದುವು. ಈ ಮೊದಲಾದ ಪೂರ್ವ ಮರ್ಯಾದೆಗಳನ್ನು ಪಾಲಿಸಿ ಅವುಗಳಂತೆ ವರ್ತಿಸಲು ಈ ಮನೆತನದ ಅರಸರು ಪ್ರಯತ್ನಿಸಿದರು. ಆದರೆ ಅನೇಕ ಸಂಕಟಗಳ ಮೂಲಕ ಅವರೀ ಆಚರಣೆಯು ಯಶಸ್ವಿಯಾಗಲಿಲ್ಲ. ಸಾಮ್ರಾಜ್ಯದ ಅಪಕರ್ಷ ದೊಂದಿಗೆ ಅವರೀ ಸಾಧನೆಗೆ ಚ್ಯುತಿಯುಂಟಾಯಿತು. ಕೊನೆಗೆ ಮುನ್ನೂರು ವರ್ಷಗಳವರೆಗೆ ಯಾವ ಪರಕೀಯರ ಆಕ್ರಮಣವನ್ನು ತಡೆದು ನಿಲ್ಲಿಸಿ ಅದರ ವಿರುದ್ಧವಾಗಿ ಈ ಸಾಮ್ರಾಜ್ಯವು ಕೊನೆಯವರೆಗೆ ಕಡುತರವಾಗಿ ಕಾದಾಡಿತೊ, ಅದರ ಬಾಯಿಗೇ ಇದು ತುತ್ತಾಗಿ ಅದರ ಉದರದಲ್ಲಿ ಜೀರ್ಣವಾಗಿ ಹೋಯಿತು.

ಮೂಲ ಸಾಮ್ರಾಜ್ಯವು ಈ ಪರಿಯಾಗಿ ತನ್ನ ಧ್ಯೇಯಸಾಧನೆಗೆ ಅಸಮರ್ಥವಾಗುತ್ತಿರುವಾಗ, ಅದರ ನೆರಳಲ್ಲಿ ಹುಟ್ಟಿ ಬೆಳೆದು ಕೆಲವಂಶ ದಿಂದ ಅದರ ಬಿರುದನ್ನು ತೊಟ್ಟು, ಅದರ ಧ್ಯೇಯವನ್ನು ಅನುಸರಿಸಲನು ವಾದ ಮಂಡಲರಾಜ್ಯಗಳಲ್ಲಿ ಸ್ವರಾಜ್ಯಪರಿಪಾಲನೆ ಮತ್ತು ಸ್ವಸಂಸ್ಕೃತಿ-ಸಂವರ್ಧನೆಯ ಕಾರ್ಯವು ಯಥಾಶಕ್ತಿ ಮುಂದುವರಿಯಿತು ಎಂಬುದು ಈ ಕಾಲದಲ್ಲಿ ದುಃಖದಲ್ಲಿಯೂ ಸ್ವಲ್ಪ ಸಮಾಧಾನಪಡುವಂತಹ ಸಂನಿವೇಶವಾಗಿದೆ. ಸಾಮ್ರಾಜ್ಯದ ಅಳಿಗಾಲದಲ್ಲಿ ಅಭ್ಯುದಯವನ್ನು ಹೊಂದಿದ ಮದುರೆ, ತಂಜಾವೂರು, ಮೈಸೂರು, ಕೆಳದಿ ಮೊದಲಾದ ರಾಜ್ಯಗಳು ಕೆಲಕಾಲ ಹಿಂದು ಸಂಸ್ಕೃತಿಗೆ ಆಧಾರ-ಆಶ್ರಯಗಳಾಗಿ ಬಾಳಿದುವು.

ವಿಜಯನಗರದ ಸಮಕಾಲೀನರಾದ ಪರದೇಶದ ಮತ್ತು ಈ ದೇಶದ ಅನೇಕ ಲೇಖಕರು, ಗ್ರಂಥಕರ್ತರು ಈ ಸಾಮ್ರಾಜ್ಯವು ಕರ್ನಾಟಕ ಸಾಮ್ರಾಜ್ಯವೆಂದೂ ಇಲ್ಲಿಯ ಅರಸರು ಕರ್ನಾಟಕ ಅರಸರೆಂದೂ ಅನೇಕ ಕಡೆಯಲ್ಲಿ ಸಂಬೋಧಿಸಿರುವರು. ಈ ಪರಂಪರೆಯು ಈ ಮನೆತನದ ವಿಷಯದಲ್ಲಿಯೂ ಮುಂದುವರಿಯಿತು. ಅಲ್ಲದೆ ಈ ಮನೆತನಕ್ಕೆ ಕರ್ನಾಟಕ ಮನೆತನವೆಂಬ ಹೆಸರೂ ಇದ್ದಿತು. ಆದರೂ ಕರ್ನಾಟಕದ ದೃಷ್ಟಿಯಿಂದ ವಿಚಾರ ಮಾಡಿದರೆ ಈ ಮನೆತನದ ಆಳಿಕೆಯಲ್ಲಿ

ಕರ್ನಾಟಕವು ಬಹಳ ಸ್ವಲ್ಪ ಲಾಭವನ್ನು ಹೊಂದಿತು ಎಂದು ಕಾಣಬರು ತ್ತದೆ. ರಾಜಕೀಯ ಕೇಂದ್ರವು ಕರ್ನಾಟಕವನ್ನು ಬಿಟ್ಟು ದೂರದ ಅನ್ಯ ಪ್ರದೇಶದಲ್ಲಿ ಹೋದುದು ಇದಕ್ಕೆ ಪ್ರಧಾನಕಾರಣವಾಗಿದೆ. ಇದಲ್ಲದೆ ಕರ್ನಾಟಕೇತರ ಮನೆತನಗಳೊಡನೆ ಉಂಟಾದ ಆಪ್ತತ್ವದ ಮತ್ತು ಬೇರೆ ಸಂಬಂಧಗಳು, ಕರ್ನಾಟಕೇತರ ಸಂಸ್ಕೃತಿಗೆ ಒಳಪಟ್ಟ ರಾಮಾ ನುಜ ಮತ, ರಾಮಾನುಜ ಆಚಾರ್ಯರು ಮತ್ತು ಗುರುಪರಂಪರೆಯ ಪ್ರಾಬಲ್ಯ ಮುಂತಾದುವು ಇತರ ಕಾರಣಗಳೂ ಇವೆ. ಇದೆಲ್ಲವು ಬುದ್ಧಿ ಪುರಸ್ಸರವಾಯಿತೆನ್ನುವ ಹಾಗಿಲ್ಲ. ಪರಿಸ್ಥಿತಿಯೆ ಹಾಗೆ ನಿರ್ಮಾಣವಾಗಿ ಕರ್ನಾಟಕವು ರಾಜಾಸ್ಥಾನದಲ್ಲಿ ಹಿಂದುಳಿಯಿತು.

ಈ ಮೇರೆಗೆ ಸಾಮ್ರಾಜ್ಯದ ಪುರಸ್ಕಾರ-ಸತ್ಕಾರಗಳಿಗೆ ಎರವಾದ ಕನ್ನಡಕ್ಕೆ ಬೇರೆ ಆಶ್ರಯಸ್ಥಾನಗಳು ನಿರ್ಮಾಣವಾದುವು. ಸಾಮ್ರಾಜ್ಯದ ಪಶ್ಚಿಮಭಾಗದಲ್ಲಿ ಕೆಲವು ಕನ್ನಡ ಅರಸೊತ್ತಿಗೆಗಳು ಪ್ರಬಲವಾಗಿ ಅವು ಕನ್ನಡವನ್ನು ಆಲಿಸಿ ಲಾಲಿಸಿ ಪಾಲಿಸಿದುವು. ಇಂತಹವುಗಳಲ್ಲಿ ಮೈಸೂರು ಮೊದಲನೆಯದು. ಇದಲ್ಲದೆ ಕೆಳದಿ ಮೊದಲಾದ ಚಿಕ್ಕ ದೊಡ್ಡ ಅರಸರ, ಪ್ರಭುಗಳ, ನಾಯಕರ ಪೋಷಣೆಯು ದೊರೆತು, ಈ ಹೊಸ ಮನೆಗಳಲ್ಲಿ ಕನ್ನಡವು ಹೊಸಪರಿಯಿಂದ ಬೆಳೆಯಲಾರಂಭಿಸಿತು.

ಈ ಕಾಲದ ಕನ್ನಡ ಸಾಹಿತ್ಯಪ್ರಪಂಚವು ಈ ರೀತಿಯಾಗಿ ವಿಕ ಸಿತವಾಯಿತು. ಎಂದಿನಂತೆ ವೀರಶೈವ, ಜೈನ, ಬ್ರಾಹ್ಮಣರಾದ ಅನೇಕ ಕವಿಗಳು ಅಲ್ಲಲ್ಲಿ ಬೆಳಗಿ ಕನ್ನಡ ಶಾರದೆಯನ್ನು ಶೃಂಗಾರಗೊಳಿಸಿದರು. ಚಂಪೂ, ಷಟ್ಪದಿ, ವಚನ, ಸಾಂಗತ್ಯ ಮುಂತಾದ ವಿವಿಧ ಶೈಲಿಗಳು ಬಳ ಕೆಗೆ ಬಂದುವು. ಕೆಲಕಾಲದಿಂದ ಮಾಧ್ವರು ಮುಂದೆ ಬಂದು ಕನ್ನಡ ಸಾಹಿತ್ಯದಲ್ಲಿ ಹೊಸತಾದ ಒಂದು ಸಂಪ್ರದಾಯವನ್ನು ಬೆಳೆಸಿದುದನ್ನು ಹಿಂದೆ ನೋಡಿದುದಾಗಿದೆ. ಈ ಮಾಧ್ವಸಾಹಿತ್ಯವು ಈ ಕಾಲದಲ್ಲಿ ಮುಂದು ವರಿಯಿತು. ದಾಸಕೂಟವು ಹೆಚ್ಚು ವಿಸ್ತಾರಗೊಂಡಿತು. ಕೀರ್ತನೆ ಗಳು, ಪದಗಳು, ಸುಳಾದಿಗಳು ಮೊದಲಾದ ವಾಙ್ಮಯವು ಹೆಚ್ಚು ಜನಪ್ರಿಯವಾಗಿ ಪ್ರಸಾರಹೊಂದಿತು. ಕನ್ನಡ ನಾಡಿನಲ್ಲಿ ಕಾಲೂರಿದ

ರಾಮಾನುಜರು ಇತರರಂತೆ ತಮ್ಮ ಮತಪ್ರಸಾರಕ್ಕೆ ದೇಶಭಾಷೆಯ ಸಹಾಯವು ಬೇಕೆಂದು ಮನಗಂಡು ಹೊಸತಾಗಿ ಕನ್ನಡದಲ್ಲಿ ಗ್ರಂಥ ರಚನೆಯನ್ನು ಆರಂಭಿಸಿದರು.

ಪುರಾಣ, ಚರಿತೆ, ವ್ಯಾಕರಣ, ನಿಘಂಟು, ಅಲಂಕಾರ ಮೊದಲಾದ ವಿಷಯಗಳನ್ನು ಕುರಿತು ಅನೇಕ ಕನ್ನಡ ಗ್ರಂಥಗಳು ಈ ಕಾಲದಲ್ಲಿ ಹುಟ್ಟಿದುವು. ವೆಂಕಟಪತಿರಾಯನ ಆಳಿಕೆಯಲ್ಲಿ ವಿರೂಪಾಕ್ಷ ಪಂಡಿತ ಮತ್ತು ಭಟ್ಟಾಕಳಂಕ ಇವರ ವಿಷಯವು ಪ್ರಸ್ತಾವಿಸಲಾಗಿದೆ. ಉಳಿದ ಕವಿಗಳು ಮತ್ತು ಅವರ ಕೃತಿಗಳು ಇವುಗಳಲ್ಲಿ ನಾಮಾಂಕಿತವಾದ ಕೆಲವನ್ನು ಸೂಚನಾರ್ಥವಾಗಿ ಇಲ್ಲಿ ಕಾಣಿಸಬಹುದು: ರಂಗಾಚಾರ್ಯ (ರಾಮಾನುಜ): ಶ್ರೀರಂಗಮಾಹಾತ್ಮ್ಯ; ತಿರುಮಲಭಟ್ಟ: ಶಿವಗೀತೆ; ಸಿದ್ಧಲಿಂಗಶಿವಯೋಗಿ (ವೀರಶೈವ): ಭೈರವೇಶ್ವರ ಪುರಾಣ; ಪಂಚಬಾಣ (ಜೈನ): ಭುಜಬಲಿಚರಿತೆ; ರಾಮಚಂದ್ರ: ಅಶ್ವಶಾಸ್ತ್ರ; ಸಿದ್ಧನಂಜೇಶ (ವೀ.): ರಾಘವಾಂಕಚಾರಿತ್ರ; ನಾಗರಸ: ಭಗವದ್ಗೀತೆ; ಧರಣಿಪಂಡಿತ (ಜೈ.): ಬಿಜ್ಜಳರಾಯಚರಿತೆ, ಇ. ಷಡಕ್ಷರದೇವ (ವೀ.): ಬಸವರಾಜವಿಜಯ, ರಾಜಶೇಖರವಿಲಾಸ, ಶಬರಶಂಕರವಿಲಾಸ; ರಂಗನಾಥ: ಅನುಭವಾಮೃತ; ತಿರುಮಲಾರ್ಯ (ರಾ.): ಅಪ್ರತಿಮವೀರ ಚರಿತ, ಇ.

---

## ಇಪ್ಪತ್ತೆಂಟನೆಯ ವಿಲಾಸ

# ಅಳಿದುಳಿದ ವಿಜಯನಗರ (೧೬೮೧-೧೯೩೬)

"ವಿಜಯನಗರವು ಅಳಿಯಿತು. ವಿಜಯನಗರಸಾಮ್ರಾಜ್ಯವು ನಷ್ಟವಾಯಿತು. ಸಾಮ್ರಾಜ್ಯದ ಈ ವಿಲಯದೊಂದಿಗೆ ಎಲ್ಲವೂ ಲಯವಾಯಿತೆ? ಮುನ್ನೂರು ವರ್ಷಗಳ ವರೆಗೆ ವಿಜಯನಗರವು ಕಟ್ಟಿದ

ರಾಜಕೀಯ ಜೀವನವು, ಮೂರು ನೂರು ವರ್ಷಗಳವರೆಗೆ ವಿಜಯನಗವು ನಿಲ್ಲಿಸಿದ ಸಾಮಾಜಿಕ ಜೀವನವು, ಸ್ಥಿರಗೊಳಿಸಿದ ಧಾರ್ಮಿಕ ಜೀವನವು, ವಿಕಾಸಗೊಳಿಸಿದ ವಿದ್ಯೆಗಳು, ಕಳೆಗೊಳಿಸಿದ ಕಲೆಗಳು, ಬೆಳಗಿಸಿದ ಸಂಸ್ಕೃತಿಯು, ಎಲ್ಲವು, ಇವೆಲ್ಲವು ಸಾಮ್ರಾಜ್ಯವು ಉರುಳಿದ ಮರುದಿನ ಕ್ಷಣದಲ್ಲಿ ಉರುಳಿ ಮರೆಯಾದುವೆ? ಮಾಯವಾದುವೆ?

ಇಂತಹ ಸಾಮ್ರಾಜ್ಯಗಳೂ ಈ ಜಗತೀತಲದಲ್ಲಿ ತಲೆಯೆತ್ತದೆ ಇಲ್ಲ. ಇವುಗಳ ಬರವು ಬರಸಿಡಿಲಂತೆ. ಇವುಗಳ ಇರವು ನಡುಬೇಸಗೆಯಲ್ಲಿಯ ಅಕಾಲವೃಷ್ಟಿಯಂತೆ. ಜನಹಿತವಿದೂರವಾದ ಇಂತಹ ಸಾಮ್ರಾಜ್ಯಗಳಿಂದ ಯಾವ ಜನಾಂಗವು ಧನ್ಯವಾಗಿದೆ? ಸಂಸ್ಕೃತಿವಿಹೀನವಾದ ಇಂತಹ ಆಳಿಕೆಗಳಿಂದ ಯಾವ ರಾಷ್ಟ್ರವು ಕೃತಾರ್ಥವಾಗಿದೆ? ಇಂತಹ ದಾಳಿಗಾರರ ಗುಂಪಿಗೆ ಸೇರಿದ ಸಾಮ್ರಾಜ್ಯವು ವಿಜಯನಗರವು ಆಗಿರಲಿಲ್ಲ.

ಚರಿತ್ರೆಯ ಪರಿಶೀಲನದಿಂದ ವಿಶದವಾಗುವಂತೆ ಸ್ವರಾಜ್ಯಪರಿಪಾಲನೆ ಮತ್ತು ಸ್ವಸಂಸ್ಕೃತಿಯ ಸಂವರ್ಧನೆಯು ವಿಜಯನಗರದ ಜೀವನದ ಸೂತ್ರವಾಗಿದ್ದಿತು. ಭಾರತೀಯ ಸಂಸ್ಕೃತಿಯನ್ನು ಉದ್ಧರಿಸುವುದಕ್ಕಾಗಿ ವಿಜಯನಗರವು ಅವತರಿಸಿತು. ಭಾರತೀಯ ಸಂಸ್ಕೃತಿಯನ್ನು ಸಂವರ್ಧಿಸುತ್ತ ವಿಜಯನಗರವು ಬಾಳಿತು. ಇಂತು ಬಲವಾಗಿ ಉದ್ಧರಿಸಿದ ಭಾರತೀಯ ಸಂಸ್ಕೃತಿಯು, ಇಂತು ದೀರ್ಘವಾಗಿ ಸಂವರ್ಧಿಸಿದ ಹಿಂದು ನಾಗರಿಕತೆಯು ವಿಜಯನಗರಸಾಮ್ರಾಜ್ಯವು ಅಳಿದರೂ ಅಳಿಯದೆ ಇದ್ದರೆ ಸೋಜಿಗವೆ?

ವಿಜಯನಗರಸಾಮ್ರಾಜ್ಯವು ಅಳಿದರೂ ವಿಜಯನಗರವು ಸಂವರ್ಧಿಸಿದ ಸಂಸ್ಕೃತಿಯು ಅಳಿಯಲಿಲ್ಲ. ಅಳಿವಂತೆ ಇಲ್ಲ. ಭಾರತೀಯ ಜನಾಂಗವು ಉಳಿದಿರುವ ವರೆಗೆ ಆಳಿವಂತೆ ಇಲ್ಲ. ವಿಜಯನಗರಸಾಮ್ರಾಜ್ಯವು ಭಾರತೀಯ ಜನಾಂಗದ ಮೇಲೆ ಮಾಡಿದ ಉಪಕೃತಿಯು ಅಪಾರವಾಗಿದೆ; ಅನಂತವಾಗಿದೆ. ವಿಜಯನಗರವು ಮೃತವಾದರೂ ವಿಜಯನಗರವು ನಿರ್ಮಿಸಿದ ಸಂಸ್ಕೃತಿಯು ಚಿರಜೀವಿಯಾಗಿದೆ; ಅಮರ–

ವಾಗಿದೆ. ಈಗಣವರಾದ ನಾವು ವಿಜಯನಗರದ ಋಣಭಾರದಿಂದ ವಿನಮ್ರರಾಗಿ ಅದನ್ನು ಕೊಂಡಾಡುವಂತೆ, ಮುಂದೆ ಶತಕಾನುಶತಕಗಳು ಕಳೆದುಹೋಗುತ್ತಿರಲು ಹುಟ್ಟಿಬರುವ ಮುಂದಣ ಸಂತತಿಯವರೂ ವಿಜಯನಗರದ ಪುಣ್ಯಸ್ಮರಣೆಯಿಂದ ಪುನೀತರಾಗುವರು ಎಂಬುದರಲ್ಲಿ ಸಂದೇಹವಿಲ್ಲ.

ವಿಜಯನಗರದ ಪರಿಪಾಲನೆಯಲ್ಲಿ ಭಾರತೀಯ ಸಂಸ್ಕೃತಿಯು ಶತಮುಖವಾಗಿ ವಿಕಾಸಹೊಂದಿತು. ವಿಜಯನಗರದ ಲಾಲನೆಯಲ್ಲಿ ಕರ್ನಾಟಕ ಸಂಸ್ಕೃತಿಯು ಸಹಸ್ರಮುಖವಾಗಿ ಪರಿಪಾಕಗೊಂಡಿತು. ವಿದ್ಯೆಗಳು ಬೆಳೆದುವು. ಕಲೆಗಳು ಅರಳಿಸುವು. ಸಾಹಿತ್ಯವು ವಿಸ್ತಾರವಾಯಿತು. ಶಾಸ್ತ್ರಗಳು ಸ್ಥಿರಗೊಂಡುವು. ರೀತಿ ನೀತಿಗಳು ಸ್ಥಾಪಿತವಾದುವು. ಆಚಾರವಿಚಾರಗಳು ಪ್ರಚುರವಾದುವು. ರಾಷ್ಟ್ರವು ಊರ್ಜಿತವಾಯಿತು. ಜನಾಂಗವು ಸಮೃದ್ಧವಾಯಿತು.

ಇಂತು ಜನಜೀವನವು ಹಲವು ವಿಧದ ಸಂಸ್ಕಾರಗಳನ್ನು ಪಡೆಯಿತು. ಸಮಾಜದ ರಕ್ತದಲ್ಲಿ ಬೆರೆತು ಜನಾಂಗದ ಜೀವನಪ್ರವಾಹದಲ್ಲಿ ಉಂಟಾದ ಈ ಸಾಂಸ್ಕೃತಿಕ ಸಂವಿಧಾನಗಳು ವಿಜಯನಗರವು ನಷ್ಟವಾದರೂ ಕಾಲಗತಿಯಿಂದ ಮುಂದು ಮುಂದುವರಿಯುತ್ತ ಇಂದಿನ ಯುಗದ ವರೆಗೆ ನಡೆದು ಬಂದಿರುವುವು. ಅಂದು ರೂಪುಗೊಂಡ ಈ ಸಂವಿಧಾನಗಳಲ್ಲಿ ಕೆಲವು ಕಾಲಚಕ್ರದಲ್ಲಿ ಸಿಲುಕಿ ವಿಕಾರಹೊಂದಿರಬಹುದು. ಕೆಲವು ಅಳಿದು ಹೋಗಿರಬಹುದು. ಆದರೆ ಹೀಗಾಗಿಯೂ ಉಳಿದಿರುವುವು ಸ್ವಲ್ಪವಾಗಿಲ್ಲ, ಕ್ಷುದ್ರವಾಗಿಲ್ಲ, ಅಲಕ್ಷಣೀಯವಾಗಿಲ್ಲ.

ಈಗಣ ನಮ್ಮ ಜನಾಂಗದಲ್ಲಿ ನೆಲೆಗೊಂಡ ಜಾತಿ-ಪಂಗಡಗಳು, ಮತಪಂಥಗಳು ವಿಜಯನಗರದ ಜಾಗರೂಕವಾದ ಜೋಪಾನದಿಂದ ಬಲಗೊಂಡುವುಗಳಾಗಿವೆ. ಈಗಣ ನಮ್ಮ ಸಮಾಜದ ಸಂಪ್ರದಾಯಗಳು ವಿಜಯನಗರದ ವಾತ್ಸಲ್ಯದ ಲಾಲನೆಯಿಂದ ಪುಷ್ಟಿಗೊಂಡುವುಗಳಾಗಿವೆ. ಈಗಣ ನಮ್ಮ ಧಾರ್ಮಿಕ ಪರಂಪರೆಗಳು, ಸಾಂಸ್ಕೃತಿಕ ಮೂಲಾಧಾರಗಳು ವಿಜಯನಗರದ ಆಸ್ಥೆಯ ಪೋಷಣೆಯಿಂದ ಸ್ಫೂರ್ತಿ-

ಗೊಂಡುವುಗಳಾಗಿವೆ. ಈಗಣ ನಮ್ಮ ಸಂಸ್ಕೃತಿಯ ವೈವಿಧ್ಯಕ್ಕೆ ವಿಜಯನಗರಕಾಲದಲ್ಲಿಯೆ ಬಲವಾದ ಪ್ರೇರಣೆಯು ದೊರೆತಿತು. ಈಗಣ ನಮ್ಮ ಜನಾಂಗದ ವೈಚಿತ್ರ್ಯಗಳಿಗೆ ವಿಜಯನಗರದಲ್ಲಿಯೆ ಚಾಲನೆಯು ಉಂಟಾಯಿತು.

ಈಗಣ ದಕ್ಷಿಣ ಭಾರತದ, ಅದರಲ್ಲಿಯೂ ವಿಶೇಷವಾಗಿ ಕರ್ನಾಟಕದ ಯಾವುದೆ ಜಾತಿ, ಪಂಗಡ, ಧರ್ಮ, ಮತ, ಸಂಪ್ರದಾಯದವರು ಸಂಸ್ಕೃತಿಯ ವಿಚಾರದಿಂದ ತಮ್ಮ ಇರುವಿಕೆಯನ್ನು ಕುರಿತು ಹೇಳುವಾಗ ಕ್ಷಣಕಾಲವಾದರೂ ವಿಜಯನಗರದ ಉಪಕಾರವನ್ನು ಮರೆತು ನಡೆವಂತೆ ಇಲ್ಲ. ಈಗಿನ ಬ್ರಾಹ್ಮಣರು ವಿಜಯನಗರವನ್ನು ಮರೆತು ಇರಲಾರರು. ಈಗಿನ ವೀರಶೈವರು ವಿಜಯನಗರವನ್ನು ಅಗಲಿ ಬಾಳಲಾರರು. ಈಗಿನ ಜೈನರು ವಿಜಯನಗರವನ್ನು ತೊಲಗಿ ಜೀವಿಸಲಾರರು. ಹೆಚ್ಚೇನು ! ಉಳಿದ ಯಾವ ಜಾತಿ–ಧರ್ಮದವರೂ ಕ್ರೈಸ್ತ-ಮಹಮ್ಮದೀಯರೂ ಕೂಡ ವಿಜಯನಗರವನ್ನು ಅಲಕ್ಷಿಸಿ ನಡೆವಂತೆ ಇಲ್ಲ. ಇದೇ ಮಾತು ಶಾಂಕರ, ಶೈವ, ರಾಮಾನುಜ, ಮಾಧ್ವ ಮುಂತಾದ ವಿವಿಧ ಮತಗಳಿಗೂ ಮತೀಯರಿಗೂ ಅನ್ವಯಿಸುತ್ತದೆ.

ಇಷ್ಟಕ್ಕೆ ವಿಜಯನಗರದ ಮಹೋಪಕಾರವು ಮುಗಿದು ಹೋಗಲಿಲ್ಲ. ಈ ಈ ಜಾತಿ ಮತಗಳಿಗೆ ವಿಜಯನಗರವು ಬರಿಯ ಸಾಂಸ್ಕೃತಿಕವಾದ ಪ್ರೋತ್ಸಾಹನವನ್ನಷ್ಟೇ ನೀಡಿದುದಾಗಿಲ್ಲ. ಪರಿಪರಿಯಿಂದ ಅದು ಇವುಗಳಿಗೆ ಭೌತಿಕವಾದ ಜೀವನಾಧಾರವನ್ನೂ ಕಲ್ಪಿಸಿಕೊಟ್ಟಿದೆ. ಈಗ ನಮ್ಮಲ್ಲಿ ಬಾಳಿದ ಅನೇಕ ಧರ್ಮಸಂಸ್ಥೆಗಳು, ವಿದ್ಯಾಸಂಸ್ಥೆಗಳು ಮಠಗಳು, ಪೀಠಗಳು, ದೇವಾಲಯಗಳು, ಪುಣ್ಯನಿಲಯಗಳು, ತೀರ್ಥಗಳು, ಕ್ಷೇತ್ರಗಳು ಇವುಗಳಿಗೆ ಉಪಜೀವನವಾಗಿರುವ ಅಸಂಖ್ಯ ವೃತ್ತಿಗಳು, ಉಂಬಳಿಗಳು, ದಾನಗಳು ಪ್ರಾಮುಖ್ಯವಾಗಿ ವಿಜಯನಗರ ಕಾಲದಲ್ಲಿಯೂ ವಿಜಯನಗರ ಪರಂಪರೆಯಲ್ಲಿಯೂ ನಿರ್ಮಾಣವಾದುವುಗಳೆ ಆಗಿರುವುವು. ಸ್ವಲ್ಪದರಲ್ಲಿ, ವಿಜಯನಗರದ ಪರಾಮರ್ಶೆಯನ್ನು ಪಡೆಯದ ವರ್ಣವಿಲ್ಲ, ಜಾತಿಯಿಲ್ಲ, ಧರ್ಮವಿಲ್ಲ, ಮತವಿಲ್ಲ, ಸಂಸ್ಥೆ-

ಯಿಲ್ಲ, ವಿದ್ಯೆಯಿಲ್ಲ, ಕಲೆಯಿಲ್ಲ ಎಂದರೆ ಅತಿಶಯೋಕ್ತಿಯಾಗದು. ಈಗಿನ ಈ ಹೀನಕಾಲದಲ್ಲಿಯೂ ಇವುಗಳಲ್ಲಿ ಏನಾದರೂ ಚೈತನ್ಯವು ಬೆಳಗುತ್ತಿದ್ದರೆ, ಅದರ ಶ್ರೇಯಸ್ಸಿಗೆ ವಿಜಯನಗರದ ಪುಣ್ಯಪ್ರಭಾವವೆ ಪೂರ್ಣಭಾಗಿಯಾಗಿದೆ.

ವಿಜಯನಗರದ ಈ ರಾಷ್ಟ್ರೀಯ ಋಣವನ್ನು ನಾವು ಮರೆಯ ಬಹುದೆ? ವಿಜಯನಗರದ ಈ ಸಾಂಸ್ಕೃತಿಕ ಉಪಕಾರವನ್ನು ನಾವು ಕಡೆಗಣಿಸಬಹುದೆ? ಇಂತು ಪರಿಭಾವಿಸಿದರೆ ಸಾಂಸ್ಕೃತಿಕ ವಿಚಾರದಲ್ಲಿ ನಾವಿನ್ನೂ ವಿಜಯನಗರದ ಯುಗವನ್ನು ದಾಟಿ ಹೋಗಿಲ್ಲವೆಂದು ಹೇಳಬಹುದು. ನಾವೆಲ್ಲರೂ ಇಂದು ವಿಜಯನಗರ ಯುಗದ ಸಂತಾ ನವೆ ಆಗಿರುವೆವು.

ಸೂಕ್ಷ್ಮವಾದ,ಆಂತರಿಕವಾದ,ಅಪರಿಮೇಯವಾದ ಈ ಸಾಂಸ್ಕೃ ತಿಕ ಸಂವಿಧಾನಗಳಲ್ಲದೆ ಬೇರೆ ಹಲವು ಸ್ಥೂಲವೂ ವಿಸ್ತೃತವೂ ಹೆಚ್ಚು ದರ್ಶನೀಯವೂ ಆದ ಸಂನಿವೇಶಗಳ ರೂಪದಿಂದ ಇಂದಿಗೂ ವಿಜಯ ನಗರವು ಅಳಿದು ಉಳಿದಿದೆ, ಬಾಳಿ ಬೆಳಗುತ್ತಲಿದೆ. ನಾನು ಹೇಳುತ್ತಿರು ವುದು ವಿಜಯನಗರದ ರಾಜಕೀಯ ಅವಶೇಷಗಳನ್ನು ಕುರಿತು. ಇಲ್ಲಿ ಅವುಗಳ ವಿಷಯವೆ ಪ್ರಸ್ತುತವೂ ಹೆಚ್ಚು ಪ್ರಧಾನವೂ ಆಗಿರುವುದರಿಂದ ಅವುಗಳನ್ನು ಪರಾಮರಿಸುವ.

ಬಲುಹಿನಿಂದ ಬೆಳೆದು ಬಹುಕಾಲ ಬಾಳಿದ ಒಂದು ಮಹಾವಟ ವೃಕ್ಷವು ಕಾಲಾನುಸಾರವಾಗಿ ಮುರಿದು ಬಿದ್ದರೂ ಅದರ ಸೆರೆಯಲ್ಲಿ ಅದರ ಆಸರದಿಂದ ಅದರ ಸತ್ವವನ್ನು ಎತ್ತಿಕೊಂಡು ಹಲವು ಸಣ್ಣ ದೊಡ್ಡ ಮರಗಳು ಹುಟ್ಟಿ ಶಾಖೋಪಶಾಖೆಯಾಗಿ ಅತಿವಿಸ್ತಾರ ಹೊಂದಿ ಆ ಮೂಲವೃಕ್ಷದ ಪರಂಪರೆಯನ್ನು ಪ್ರಸಾರಗೊಳಿಸುವಂತೆ, ವಿಜಯನಗರಸಾಮ್ರಾಜ್ಯದ ಮೂಲ ಚೈತನ್ಯವು ಬಿದ್ದು ಹೋದರೂ ಆ ಸಾಮ್ರಾಜ್ಯದ ಮುಂದಿನ ಸಂತತಿಯವರೂ ಸಾಮಂತರ,ಮಂಡಲಪತಿ ಗಳ, ಮನ್ನೆಯರ, ನಾಯಕರ ವಂಶದವರೂ ಹಲವೆಡೆಗಳಲ್ಲಿ ಹಲವು ರೀತಿಯಿಂದ ಅಧಿಕಾರವನ್ನು ಬೀರುತ್ತ,ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷ-

ವಾಗಿಯೂ ವಿಜಯನಗರದ ಸಾಂಸ್ಕೃತಿಕ ಪರಂಪರೆಯನ್ನು ಮುಂದು ವರಿಸಿದರು. ಇಂತಹರಲ್ಲಿ ಕೆಲರ ಪರಂಪರೆಗಳು ಅಲ್ಪಜೀವಿಗಳಾದುವು. ಕೆಲರವು ದೀರ್ಘಜೀವಿಗಳಾದುವು. ಇವುಗಳಲ್ಲಿ ಮುಖ್ಯವಾದ ಕೆಲವು ಗಳ ವೃತ್ತಾಂತವನ್ನು ಕೇವಲ ಸೂಚನಾತ್ಮಕವಾಗಿ ಅತಿಸಂಕ್ಷೇಪ ದಿಂದ ಇಲ್ಲಿ ಕಾಣಿಸಲಾಗುವುದು.

## ಅರವೀಡು ಮನೆತನದ ಮುಂದಣ ಪರಂಪರೆ

ಅರವೀಡು ಮನೆತನದ ಆರ್ವಡಿ ಶ್ರೀರಂಗರಾಯನು ವಿಜಯನಗರ ಸಾಮ್ರಾಜ್ಯದ ಕೊನೆಯ ರಾಜನಷ್ಟೆ? ಈತನ ತರುವಾಯ ವಿಜಯ ನಗರದ ಸಾಮ್ರಾಜ್ಯಜೀವನದ ಕುರುಹುಗಳು ಅಳಿದು ಹೋದುವು. ಹೀಗೆ ವಿಜಯನಗರದ ಸಾಮ್ರಾಜ್ಯಜೀವನದ ಪರಂಪರೆಯು ನಷ್ಟ ವಾದರೂ ಈ ಮನೆತನದ ರಾಜಕೀಯ ಜೀವನವು ನಿಂತು ಹೋಗಲಿಲ್ಲ. ಈ ಮನೆತನವು ಮುಂದೆ ಸಾಗಿತು. ಅಲ್ಲಲ್ಲಿ ಅರಸೊತ್ತಿಗೆಯನ್ನು ನಡೆ ಸಿತು. ಆದರೆ ಅದರ ಅಧಿಕಾರದ ವ್ಯಾಪ್ತಿಯು ಚಿಕ್ಕದಾದ ಪ್ರದೇಶ ಕ್ಕಿಂತ ಮಿಕ್ಕಲಿಲ್ಲ. ಅದರ ಸಾಮರ್ಥ್ಯವು ಸಾಮಾನ್ಯನಾದ ಒಬ್ಬ ಅಂಕಿತ ರಾಜನಿಗಿಂತ ಹಿರಿದಾಗಿರಲಿಲ್ಲ. ದಾರುಣವಾದ ಆ ವಿಪ್ಲವಕ್ಕೆ ಈಡಾದ ಈ ಮನೆತನವು ಚದರಿ ಹೋಗಿ, ಅದರ ಶಾಖೆಗಳು ಬೇರೆ ಬೇರೆಡೆ ಯಲ್ಲಿ ನೆಲೆಸಿದುವು.

ಶ್ರೀರಂಗರಾಯನ ತರುವಾಯ ಆತನ ಅಣ್ಣನ ಮಗನಾದ ಕೋದಂಡರಾಮನು ಅರಸಾದನು (೧೬೮೧–೧೭೦೪). ಈತನು ಪೆನು ಗೊಂಡದಲ್ಲಿ ಇದ್ದುಕೊಂಡು ನೆರೆಯ ನಾಡಿನಲ್ಲಿ ಆಳಿದನಾಗಿ ತೋರು ತ್ತದೆ. ಈ ಪ್ರದೇಶವನ್ನುಳಿದು ದಕ್ಷಿಣ ಭಾರತದ ಮಿಕ್ಕ ಭೂಭಾಗ ವೆಲ್ಲವು ಮೊಗಲರಿಂದಲೂ ಮರಾಟರಿಂದಲೂ ಮೈಸೂರರವರಿಂದಲೂ ಆಕ್ರಮಣವಾಗಿ ಹೋಯಿತು. ವಿಜಾಪುರ–ಗೋವಳಕೊಂಡದ ರಾಜ್ಯ ಗಳು ಮೊಗಲರಿಗೆ ಆಹುತಿಯಾದುವು (೧೬೮೬ ಮತ್ತು ೧೬೮೮). ಕೋದಂಡರಾಮನ ಪ್ರೇರಣೆಯಿಂದ ವೆಂಕಯ್ಯನು ನರಪತಿವಿಜಯವು

ಅಥವಾ ರಾಮರಾಜೀಯವು ಎಂಬ ಐತಿಹಾಸಿಕ ಕಾವ್ಯವನ್ನು ರಚಿಸಿದನು. ಇದರಲ್ಲಿ ಅರವೀಡು ವಂಶದ ಚರಿತ್ರೆಯು ವಿವರಿಸಲಾಗಿದೆ.

ಕೋದಂಡರಾಮನ ತರುವಾಯ ಆತನ ಮಗನಾದ ಪೆದ್ದ ವೆಂಕಟನು (ಅರ್ವಡಿ ವೆಂಕಟನು) ಆಳಿದನು (೧೭೦೪-೧೭೧೭). ಈತನ ತರುವಾಯ ಈತನ ಚಿಕ್ಕಪ್ಪನ ಮಗನಾದ (ಏಳ್ವಡಿ) ಶ್ರೀರಂಗನು ಅರಸುಗೆಯ್ದನು (೧೭೧೭-೫೯). ಈಗ ತಿಳಿದಮಟ್ಟಿಗೆ ಈತನೆ ಈ ಮನೆತನದ ಕೊನೆಯ ರಾಜನು.

## ಮದುರೆಯ ನಾಯಕರು

ವಿಜಯನಗರ ಸಾಮ್ರಾಜ್ಯವು ಹಾಳಾದ ಬಳಿಕ ಈ ಮಂಡಲ ರಾಜ್ಯವು ಮುಂದೆ ಬಹುಕಾಲ ಬಾಳಲಿಲ್ಲ. ಒಡೆಯನಾದ ಶ್ರೀರಂಗನನ್ನು ಹೊಡೆದು ಕೆಡಹಿದ ತಿರುಮಲನಾಯಕನ ಬಿರುದನ್ನು ಮುಂದುವರಿಸಿದ ಚೊಕ್ಕನಾಥನ ಆಳಿಕೆಯು (೧೬೫೯-೮೨) ಸುಖಮಯವಾಗಲಿಲ್ಲ. ಆತನು ದಾರುಣವಾದ ತನ್ನ ದ್ರೋಹನೀತಿಯಿಂದಲೆ ದಗ್ಧನಾದನು. ಮಹಮ್ಮದೀಯರು ಆತನ ರಾಜ್ಯವನ್ನು ಉಧ್ವಸ್ತ ಮಾಡಿದರು. ಮರಾಟರು ಆತನ ಪ್ರಾಂತದಲ್ಲಿ ನುಗ್ಗಿದರು. ಮೈಸೂರಿಗರು ಆತನ ಮೇಲೆ ಏರಾಟ ಮಾಡಿದರು. ಆತನ ಅಂಕಿತರಾದ ನಾಯಕರು ಆತನಿಗೆ ದ್ರೋಹಿಗಳಾದರು. ಆತನ ಪ್ರಜಾಜನರು ದೊಂಬಿಯನ್ನೆಬ್ಬಿಸಿ ಆತನನ್ನು ಪದಚ್ಯುತ ಮಾಡಿದರು. ಈ ಮೊದಲಾದ ವಿಪತ್ಪರಂಪರೆಯಿಂದ ಎದೆಯೊಡೆದುಕೊಂಡು ಆತನು ಮರಣ ಹೊಂದಿದನು.

ಇಂತು ಜರ್ಜರಿತವಾದ ಮದುರೆಯ ಅರಸೊತ್ತಿಗೆಯು ಚೊಕ್ಕನಾಥನ ಮಗನಾದ (ಮುಮ್ಮಡಿ) ಮುತ್ತು ವೀರಪ್ಪನ ಆಳಿಕೆಯಲ್ಲಿಯೂ (೧೬೮೨-೮೯) ಬಳಿಕ, ರಾಜಮಾತೆ ಮಂಗಮ್ಮಾಳಳ ಪ್ರತಿನಿಧಿಯಾಳಿಕೆಯಲ್ಲಿಯೂ (೧೬೮೯-೧೭೦೬) ಮೊಗಲ ಅಧಿರಾಜ್ಯಕ್ಕೆ ಅಂಕಿತವಾಗಿ ಕೆಲಮಟ್ಟಿಗೆ ಸ್ವಾಸ್ಥ್ಯವನ್ನು ಅನುಭವಿಸುತ್ತ ಬಾಳಿತು. ಮುಂದೆ ತತ್ತರಿಸುವ ಈ ರಾಜ್ಯದ ಸೂತ್ರಗಳು ಮುತ್ತುವೀರಪ್ಪನ ಮಗನಾದ

ವಿಜಯರಂಗನ ಕೈಯಲ್ಲಿ ಹೋದುವು (೧೭೦೬–೩೨). ಈತನ ತರುವಾಯ ಈತನ ಹೆಂಡತಿಯಾದ ಮೀನಾಕ್ಷಿಯು ಅಧಿಕಾರವನ್ನು ನಡೆಸಿದಳು. ಈಕೆಗೆ ವಿರೋಧವಾಗಿ ರಾಜ್ಯದಲ್ಲಿ ಬಣಗಳು ಹುಟ್ಟಿದುವು. ಅಂತಃಕಲಹವು ಎದ್ದಿತು. ಈ ಸಂಧಿಯನ್ನು ನೋಡಿ ಅರ್ಕಾಟದ ನವಾಬನ ಅಳಿಯನಾದ ಚಂದಾಸಾಹೇಬನು ಒಳನುಗ್ಗಿ ಮದುರೆಯ ರಾಜ್ಯವನ್ನೆಲ್ಲ ಅಪಹಾರ ಮಾಡಿದನು (೧೭೩೬).

## ಕೆಳದಿಯ ಅರಸರು

ಈ ರಾಜವಂಶವು ವಿಜಯನಗರ ಸಾಮ್ರಾಜ್ಯವು ನಷ್ಟವಾದ ಬಳಿಕ ಸುಮಾರು ನೂರು ವರ್ಷಗಳ ವರೆಗೆ ಬಾಳಿತು. ಶ್ರೀರಂಗರಾಯನ ವಿಪತ್ಕಾಲದಲ್ಲಿ ಸಹಾಯವನ್ನು ನೀಡಿದ ಶಿವಪ್ಪ ನಾಯಕನು ೧೬೬೦ ರಲ್ಲಿ ಮರಣ ಹೊಂದಿದನು. ಆತನ ತರುವಾಯ ಈ ರಾಜ್ಯವು ಒಲಗುಂದಿತು. ಮೈಸೂರವರೊಡನೆ ಮೇಲಿಂದ ಮೇಲೆ ಕದನಗಳು ಉಪಸ್ಥಿತವಾದುವು. ವಿಜಾಪುರದವರು, ಮರಾಟರು ಆಗಾಗ ದಾಳಿಗಳನ್ನು ಮಾಡಿದರು. ಶಿವಪ್ಪ ನಾಯಕನ ತರುವಾಯ ಆಳಿದವರಲ್ಲಿ ಮೂರನೆಯವನಾದ ಸೋಮಶೇಖರನು (೧೬೬೩–೭೧) ಗಣ್ಯನಾಗಿರುವನು. ಅಂತಃಕಲಹಗಳ ಗಲಭೆಯಲ್ಲಿ ಈತನ ಕೊಲೆಯಾಯಿತು. ಮುಂದೆ ಈತನ ಹೆಂಡತಿಯಾದ ಚೆನ್ನಮ್ಮಾಜಿಯು ಬಲವಾಗಿ ರಾಜ್ಯವಾಳಿದಳು (೧೬೭೧–೯೭). ಮೊಗಲ ಆಕ್ರಮಣದಿಂದ ದೇಶಭ್ರಷ್ಟನಾದ ಶಿವಾಜಿಯ ಮಗ ರಾಮರಾಜನು (ರಾಜಾರಾಮ) ಈಕೆಯ ಆಶ್ರಯವನ್ನು ಪಡೆದನು.

ಚೆನ್ನಮ್ಮಾಜಿಯ ತರುವಾಯ ಸಂಕಟಗಳು ಹೆಚ್ಚಿದುವು. ಬಸಪ್ಪ ನಾಯಕ (೧೬೯೭–೧೭೧೪),(ಇಮ್ಮಡಿ) ಸೋಮಶೇಖರ (೧೭೧೪-೩೯), (ಇಮ್ಮಡಿ) ಬಸಪ್ಪ ನಾಯಕ (೧೭೩೯–೫೪) ಮೊದಲಾದವರು ಅರಸರಾದರು. ಆದರೆ ಆಡಳಿತದ ದುರ್ಬಲತೆಯಿಂದಲೂ ಅಂತಃಸ್ಥ ಕಲಹಗಳಿಂದಲೂ ರಾಜ್ಯವು ಹೆಚ್ಚು ಹೆಚ್ಚು ನಿಸ್ಸತ್ವವಾಯಿತು. ಮುಂದೆ ಮೈಸೂರ ಪ್ರದೇಶದಲ್ಲಿ ಉದಯವಾದ ಹೈದರ ಅಲಿಯು ಕೊನೆಯ

ಅರಸಿಯಾದ ವೀರಮ್ಮಾಜಿಯ ಕೈಯಿಂದ ಬಿದನೂರು ರಾಜಧಾನಿಯನ್ನು ಕಿತ್ತುಕೊಂಡು ಈ ಅರಸೊತ್ತಿಗೆಯನ್ನು ಮುಳುಗಿಸಿಬಿಟ್ಟನು (೧೭೬೩). ಈ ವಿಜಯವು ಹೈದರ ಆಲಿಯ ಮುಂದಣ ಅಭ್ಯುದಯದ ತಳಹದಿಯಾಯಿತು.

## ಸುರಪುರದ ನಾಯಕರು

ರಾಕ್ಷಸತಂಗಡಿಯ ತರುವಾಯ ಉಂಟಾದ ಗಲಭೆಯಲ್ಲಿ ಶೂರರಾದ ಕೆಲವು ಬೇಡ ನಾಯಕರು ನಡುನಾಡಿನಲ್ಲಿ ಅಲ್ಲಲ್ಲಿ ನುಗ್ಗಾಡಿ ಚಿಕ್ಕ ಚಿಕ್ಕ ಪ್ರದೇಶಗಳನ್ನು ಹಿಡಿದುಕೊಂಡರು. ಈ ನಾಯಕರು ಹೆಚ್ಚು ಕಡಿಮೆ ಸ್ವತಂತ್ರರಾಗಿ ವರ್ತಿಸುತ್ತ ಉತ್ತರದ ಮುಹಮ್ಮದೀಯ ರಾಜ್ಯಗಳಿಗೂ ದಕ್ಷಿಣದ ವಿಜಯನಗರ ಸಾಮ್ರಾಜ್ಯಕ್ಕೂ ಮಧ್ಯವರ್ತಿಯಾಗಿ ನಿಂತುಕೊಂಡರು. ಇಂತಹರಲ್ಲಿ ಸುರಪುರದ ನಾಯಕರು ಪ್ರಮುಖರಾಗಿರುವರು. ಈ ರಾಜ್ಯವು ಉತ್ತರ ಕರ್ನಾಟಕದ ಉತ್ತರ ಭಾಗದಲ್ಲಿ ಈಗಿನ ನಿಜಾಮು ರಾಜ್ಯದಲ್ಲಿ ಬಾಳಿ ಬೆಳೆಯಿತು.

ವಿಜಾಪುರ ರಾಜ್ಯವು ಬಲಗೆಡುವ ಸಮಯದಲ್ಲಿ ಈ ಬೇಡ ನಾಯಕರು ನೆರೆಯ ಪ್ರಾಂತಗಳಲ್ಲಿ ದಾಳಿಗಳನ್ನು ಮಾಡಿ ಕಪ್ಪವನ್ನು ಕಸಿದುಕೊಳ್ಳುತ್ತ ತಮ್ಮ ರಾಜ್ಯವನ್ನೂ ಪ್ರಭಾವವನ್ನೂ ವಿಸ್ತಾರಗೊಳಿಸಿದರು. ಉದಯವಾಗುತ್ತಿರುವ ಮರಾಟರೊಡನೆಯೂ ಇವರು ಕಲಹವನ್ನು ಮಾಡಿದರು. ದಕ್ಷಿಣ ದಿಗ್ವಿಜಯಕ್ಕಾಗಿ ಹೊರಟ ಔರಂಜೇಬನ ದಂಡನ್ನು ಕೆಲಕಾಲ ತಡೆಗಟ್ಟಿ ವಾಗಿನಗೇರಿಯ ಕಾಳಗದಲ್ಲಿ ಅದನ್ನು ಸೋಲಿಸಿದರು. ಪಾಮನಾಯಕ ಮತ್ತು ಪಿಡ್ಡ ನಾಯಕ ಇವರು ಈ ಅರಸರಲ್ಲಿ ನಾಮಾಂಕಿತರಾದರು. ಈ ಅರಸೊತ್ತಿಗೆಯು ನಿಜಾಮುರಾಜ್ಯದ ಪಕ್ಕದಲ್ಲಿ ಸುಮಾರು ೧೮೬೦ರ ವರೆಗೆ ಜೀವಿಸಿತು. ಈ ಕಾಲಕ್ಕೆ ಭರತಭೂಮಿಯಲ್ಲೆಲ್ಲ ವ್ಯಾಪಿಸಿದ ಸುಪ್ರಸಿದ್ಧ ದಂಡಾಳುಗಳ ಬಂಡಾಯ (೧೮೫೭) ವನ್ನು ಅನುಸರಿಸಿದುದರ ಪ್ರಾಯಶ್ಚಿತ್ತವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು.

ಈ ಅರಸರು ಅತ್ಯಂತ ಶೂರರಾಗಿದ್ದರು. ಹಿಂದು ಸಂಸ್ಕೃತಿಯು ಉಜ್ವಲ ಅಭಿಮಾನಿಗಳಾಗಿದ್ದು, ವಿಜಯನಗರದ ಸಾಮಂತರಂತೆ ವಿಜಯ ನಗರದ ಪರಂಪರೆಯನ್ನು ಮುಂದುವರಿಸಿದರು. ವಿದ್ಯೆಗಳನ್ನು ಪ್ರೋತ್ಸಾಹಿಸಿದರು, ಕಲೆಗಳನ್ನು ಪೋಷಿಸಿದರು. ಕನ್ನಡಕ್ಕೆ ಉತ್ತೇಜನವನ್ನಿತ್ತರು. ಮುಂದೆ ಕಾಣಿಸಲಿರುವ, ವಿಜಯನಗರದ ಅವಶೇಷವಾಗಿರುವ ಆನೇಗುಂದಿಯ ಅರಸರನ್ನು ಅತ್ಯಂತ ಗೌರವದಿಂದ ಮನ್ನಿಸುತ್ತಿದ್ದರು.

## ಸ್ವಾದಿಯ ಅರಸರು

ಕೃಷ್ಣದೇವರಾಯನ ತಂದೆಗೆ ಬಹುಕಾಲ ಸಂತಾನವಿರಲಿಲ್ಲ. ಆದುದರಿಂದ ಆತನು (ನರಸನಾಯಕ ?) ತನ್ನ ತರುವಾಯ ತನ್ನ ತಂಗಿಯ ಮಗನಾದ ಅರಸಪ್ಪ ರಾಜೇಂದ್ರನಿಗೆ ತನ್ನ ರಾಜ್ಯವು ಆಗಬೇಕೆಂದು ಯೋಜಿಸಿದನು. ಆದರೆ ಮುಂದೆ ಆತನಿಗೆ ಕೃಷ್ಣದೇವರಾಯನು ಹುಟ್ಟಿ ರಾಜ್ಯಕ್ಕೆ ಒಡೆಯನಾದನು. ಬಳಿಕ ಈ ರಾಯನು ಅರಸಪ್ಪ ರಾಜೇಂದ್ರನಿಗೆ ಸ್ವಾದಿಯ ರಾಜ್ಯವನ್ನು ದಯಪಾಲಿಸಿದನು. ಈತನೆ ಈ ಅರಸೊತ್ತಿಗೆಯ ಮೂಲ ಪುರುಷನು. ಹೀಗೆ ಈ ಅರಸರ ವಂಶವೃತ್ತಾಂತದಲ್ಲಿ ಹೇಳಲಾಗಿದೆ.*

ಈ ರಾಜ್ಯವು ವಿಜಯನಗರಕ್ಕೆ ಅಂಕಿತವಾಗಿ ಕೆಲಕಾಲ ಬಾಳಿತು. ಮುಂದೆ ವಿಜಯನಗರದ ಬೀಳುಗಾಲದಲ್ಲಿ ಮರಾಟರು ಮುಂತಾದ ಶತ್ರುಗಳೊಡನೆ ಪ್ರತಿಭಟಿಸುತ್ತ ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಂಡಿತು. ಗೋವೆಯ ಪೋರ್ತುಗೀಜರೊಡನೆ ಈ ಅರಸರಿಗೆ ವಿಶೇಷವಾದ ಸ್ನೇಹಸಂಬಂಧವಿದ್ದಿತು. ೧೭ನೆಯ ಶತಮಾನದ ಆರಂಭದಲ್ಲಿ ಅಂಕೋಲಾ ಮೊದಲಾದ ಮೂರು ಒಳ್ಳೆಯ ಬಂದರಗಳು ಈ ರಾಜ್ಯಕ್ಕೆ ಒಳಪಟ್ಟಿದ್ದುವು. ಮುಂದೆ ಈ ರಾಜ್ಯವು ದುರ್ಬಲತೆಗೀಡಾಗಿ ಮರಾಟರಿಂದಲೂ ಪೋರ್ತುಗೀಜರಿಂದಲೂ ಆಕ್ರಾಂತವಾಯಿತು.

ಈಗಲೂ ಈ ರಾಜ್ಯವು ಪೋರ್ತುಗೀಜ ಪ್ರದೇಶದಲ್ಲಿ ಒಂದು ಚಿಕ್ಕ ಸಂಸ್ಥಾನವಾಗಿ ತಕ್ಕುದಾದ ಮನ್ನಣೆಯೊಂದಿಗೆ ಬಾಳಿದೆ. ಈ ಅರಸರ ವೀರಶೈವ ಮತೀಯರಾಗಿರುವರು.

* ಇದಕ್ಕೆ ಉಪೋದ್ಬಲಕವಾದ ಪ್ರಮಾಣಗಳು ಚರಿತ್ರೆಯಲ್ಲಿ ದೊರೆವುದಿಲ್ಲ !

## ಆನೇಗುಂದಿಯ ಅರಸರು

ರಾಕ್ಷಸತಂಗಡಿಯ ತರುವಾಯ ಅರವೀಡು ಮನೆತನದ ಒಂದು ಶಾಖೆಯು ಆನೇಗುಂದಿಯಲ್ಲಿ ಹೋಗಿ ನೆಲಸಿತು. ಹಿಂದೆ ಹೇಳಿದ ಅರವೀಡು ಕೋದಂಡರಾಮನ ಮಗ ಇಮ್ಮಡಿ ಕೋದಂಡ ರಾಮ ಅಥವಾ ಅರ್ಕ್ಯಡಿ ರಾಮರಾಜನು ಆನೇಗುಂದಿಯಲ್ಲಿ ಆಳಿದನು (೧೭೩೩-೫೫) ಈತನ ತರುವಾಯ ತಿರುಮಲರಾಯನು ಆನೇಗುಂದಿಯ ರಾಜನಾದನು (೧೭೫೬). ಈತನ ರಾಜ್ಯವೂ ರಾಜಧಾನಿಯಾದ ಆನೇಗುಂದಿಯೂ ಟೀಪು ಸುಲ್ತಾನನ ಆಕ್ರಮಣ ನೀತಿಗೆ ಆಹುತಿಯಾಗಿ (೧೭೭೬) ಕೈಬಿಟ್ಟು ಹೋದುವು. ಬಳಿಕ ಇಂಗ್ಲಿಶರು, ನಿಜಾಮನು, ಮತ್ತು ಮರಾಟರು ಕೂಡಿ ಟೀಪುವನ್ನು ಪೂರ್ಣವಾಗಿ ಪರಾಭವಗೊಳಿಸಿದರು. ಮುಂದೆ ಆತನ ಪ್ರಾಂತಗಳನ್ನು ಹಂಚಿಕೊಳ್ಳುವ ಒಡಂಬಡಿಕೆಯಂತೆ ಆನೇಗುಂದಿಯ ಪ್ರದೇಶವು ಮೈಸೂರವರ ವಶದಿಂದ ನಿಜಾಮರ ವಶಕ್ಕೆ ಹೋಯಿತು (೧೭೯೯). ಅಂದಿನಿಂದ ಆನೇಗುಂದಿಯ ರಾಜ್ಯವು ನಿಜಾಮರ ವಶದಲ್ಲಿಯೆ ಉಳಿದಿದೆ. ಈ ತಿರುಮಲರಾಯನಿಂದಲೆ ಆನೇಗುಂದಿಯ ಅರಸರ ವಂಶಾವಳಿಯು ಆರಂಭವಾಗುತ್ತದೆ.

ಆನೇಗುಂದಿಯ ಅರಸರ ವಂಶವು ಈಗಲೂ ಬಾಳಿದೆ. ಪಂಪಾಪತಿಯೆಂಬುದು ಈ ಮನೆತನದ ಸಂಕೇತವಾಗಿದೆ. ಇವರು ಈಗಿನ ನಿಜಾಮ ದೊರೆಗಳ ಅಂಕಿತದಲ್ಲಿ 'ನರಪತಿ ಸಂಸ್ಥಾನ' ಎಂಬ ಹೆಸರಿನ ಒಂದು ಚಿಕ್ಕ ಸಂಸ್ಥಾನ ಅಥವಾ ಜಾಗೀರಿನ ಒಡೆಯರಾಗಿದ್ದಾರೆ.

## ಮೈಸೂರ ಒಡೆಯರು

ವಿಜಯನಗರಸಾಮ್ರಾಜ್ಯವು ಘೋರವಾದ ವಿಪತ್ತುಗಳಿಗೆ ತುತ್ತಾಗಿ, ಆಸನ್ನಮರಣಸ್ಥಿತಿಯಲ್ಲಿ ವಿಲಯದ ವೇದನೆಯನ್ನು ಅನುಭವಿಸುತ್ತಿರುವಾಗ, ಅದರ ಅತ್ಯಂತ ಸ್ವಾಮಿನಿಷ್ಠ ಸಾಮಂತರಾದ ಮೈಸೂರ ಅರಸರು ತಾವೊಬ್ಬರೆ ಒಬ್ಬರು ಅದಕ್ಕೆ ಆಸರವಾಗಿ ನಿಂತುಕೊಂಡು, ಯಾವ ಬಗೆಯ ರಾಷ್ಟ್ರೀಯ ಮಹಾಸೇವೆಯನ್ನು

ಸಲ್ಲಿಸಿದರೆಂಬುದು ಹಿಂದೆ ವಿವರಿಸಲಾಗಿದೆ. ಇವರ ಪ್ರಯತ್ನಗಳೆಲ್ಲವು ವ್ಯರ್ಥವಾಗಿ ಈ ಕರ್ನಾಟಕ ಸಾಮ್ರಾಜ್ಯವು ಮುಳುಗಿಹೋಯಿತು. ಕನ್ನಡ ರಾಜ್ಯಲಕ್ಷ್ಮಿಯು ಅನಾಥೆಯಾದಳು.

ವಿಜಯನಗರಸಾಮ್ರಾಜ್ಯವು ಮುಳುಗಿದರೂ ಸ್ವಾಮಿಕಾರ್ಯಕ್ಕಾಗಿ ಮೈಸೂರ ಅರಸರು ನೀಡಿದ ಶೌರ್ಯ-ಧೈರ್ಯ-ಸಾಹಸಗಳು ನಿಷ್ಫಲವಾಗಲಿಲ್ಲ. ಆದರಿಂದ ಇವರ ಸಾಮರ್ಥ್ಯವೂ ಪ್ರಭಾವವೂ ಬೆಳೆಯಿತು. ಕರ್ನಾಟಕ ಸಾಮ್ರಾಜ್ಯವು ಹೋದರೂ ಕರ್ನಾಟಕ ರಾಜ್ಯವು ಪ್ರಸ್ಥಾಪಿತವಾಗಿ, ಉತ್ತರೋತ್ತರಾಭಿವೃದ್ಧಿಯಿಂದ ಪ್ರವರ್ಧಮಾನವಾಗಿ ಬಾಳಿತು. ಕನ್ನಡ ರಾಜ್ಯಲಕ್ಷ್ಮಿಯು ಸನಾಥೆಯಾದಳು. ನಿರಾಧಾರವಾದ ಕನಾಟಕಸಂಸ್ಕೃತಿಗೆ ಸ್ಥಿರವಾದ ಆಧಾರವು ಲಭಿಸಿತು. ಕನ್ನಡ ಶಾರದೆಯ ದೈನ್ಯವು ದೂರವಾಯಿತು. ಕನ್ನಡ ರಾಷ್ಟ್ರದೇವಿಯು ತನ್ನ ಸಕಲ ಪರಿವಾರದೊಂದಿಗೆ ಕರ್ನಾಟಕದ ನಂದನವನವಾದ ಮೈಸೂರು ರಾಜ್ಯದಲ್ಲಿ ಬಂದು ನೆಲೆಸಿದಳು.

ಕಂಠೀರವ ನರಸರಾಜನ ತರುವಾಯ, ದೊಡ್ಡದೇವರಾಜ ಚಿಕ್ಕದೇವರಾಜರು ಮೈಸೂರ ಪ್ರಭುಗಳಾದ ಸಂದರ್ಭವು ಹಿಂದಿನ ಚರಿತ್ರೆಯಲ್ಲಿ ಪ್ರಸ್ತಾವಿಸಲಾಗಿದೆ. ದೊಡ್ಡದೇವರಾಜನಿಗೆ ಮೂರು ರಾಯರ ಗಂಡ, ಪರರಾಯ ಭಯಂಕರ, ಹಿಂದುರಾಯಸುರತ್ರಾಣ ಮೊದಲಾದ ಬಿರುದುಗಳು ಇದ್ದುವು.

ಬಳಿಕ, ಚಿಕ್ಕದೇವರಾಜನ ಆಳಿಕೆಯು ( ೧೬೭೨-೧೭೦೪ ) ಬಹಳ ಪ್ರಭಾವಶಾಲಿಯಾಯಿತು. ಈತನು ಮದುರೆಯ ನಾಯಕನನ್ನೂ ಕೆಳದಿಯ ಅರಸರನ್ನೂ ವಿಜಾಪುರದವರನ್ನೂ ಮರಾಟರನ್ನೂ ಸೋಲಿಸಿ ತನ್ನರಾಜ್ಯವನ್ನು ವಿಸ್ತಾರಗೊಳಿಸಿದನು. ವೆಂಕೋಜಿಯಿಂದ ಮೂರು ಲಕ್ಷ ರೂಪಾಯಿಗಳಿಗೆ ಬೆಂಗಳೂರನ್ನು ಕೊಂಡುಕೊಂಡನು (೧೬೮೭). ಔರಂಗಜೇಬ ಬಾದಶಹನ ಕಡೆಗೆ ರಾಯಭಾರಿಯನ್ನು ಕಳುಹಿ ತಾನು ಗೆದ್ದುಕೊಂಡ ಪ್ರದೇಶಗಳ ಅಧಿಕಾರವನ್ನು ಸ್ಥಿರಪಡಿಸಿಕೊಂಡು

**ಜಗದ್ದೇವರಾಯ**ನೆಂಬ ಪದವಿಯನ್ನು ಸಂಪಾದಿಸಿದನು (೧೬೨೦). ಈ ಕಾಲದಲ್ಲಿ ಶ್ರೀರಂಗಪಟ್ಟಣದ ವೈಭವವು ಹೆಚ್ಚಿತು.

ಕನ್ನಡ ಸಾಹಿತ್ಯದ ವಿಚಾರದಿಂದ ರಾಯನ ಆಳಿಕೆಯು ಅಪೂರ್ವವಾಗಿದೆ. ರಾಯನು ಸ್ವತಃ ಕನ್ನಡ, ಸಂಸ್ಕೃತ ಸಾಹಿತ್ಯಗಳಲ್ಲಿ ವಿಶಾರದನಾಗಿದ್ದನು. ಹಲವು ಸಂಸ್ಕೃತ, ಕನ್ನಡ ಗ್ರಂಥಗಳನ್ನು ಬರೆದನು. ಅನೇಕ ಪಂಡಿತರಿಗೆ, ಕವಿಗಳಿಗೆ ಪೋಷಣೆ-ಪ್ರೋತ್ಸಾಹಗಳನ್ನು ನೀಡಿದನು. ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ಶೃಂಗಾರಮ್ಮ, ಹೊನ್ನಮ್ಮ, ತಿಮ್ಮ, ಚಿದಾನಂದ ಮೊದಲಾದ ಅನೇಕ ಕವಿಗಳು ಈ ಕಾಲದಲ್ಲಿ ಉದಯಿಸಿ ಕನ್ನಡ ಸಾರಸ್ವತವನ್ನು ಸಮೃದ್ಧಗೊಳಿಸಿದರು. ಚಂಪೂ, ಷಟ್ಪದಿ, ಸಾಂಗತ್ಯ, ಹಾಡು ಮೊದಲಾದ ವಿವಿಧ ಜಾತಿಯ ಮತ್ತು ಚರಿತೆ, ಟೀಕೆ, ಪುರಾಣ, ಶಾಸ್ತ್ರೀಯ ಮೊದಲಾದ ವಿವಿಧ ರೀತಿಯ ಸಾಹಿತ್ಯವು ಹುಟ್ಟಿತು. ಕನ್ನಡ ಗದ್ಯಗ್ರಂಥಗಳು ಗದ್ಯಲೇಖನಶೈಲಿಯು ಇದೇಕಾಲದಲ್ಲಿ ವಿಶೇಷವಾಗಿ ಪ್ರಚುರಗೊಂಡುವು. ಮೊದಲನೆಯ ಕನ್ನಡ ನಾಟಕವು ಇದೇ ಕಾಲದಲ್ಲಿ ಹುಟ್ಟಿತು.

**ಅಪ್ರತಿಮವೀರ** ಎಂಬುದು ರಾಯನ ವಿಶಿಷ್ಟ ಬಿರುದಾಗಿದ್ದಿತು. ಇದಲ್ಲದೆ ವಿಜಯನಗರಸಾಮ್ರಾಜ್ಯದ ಉತ್ತರಾಧಿಕಾರತ್ವವನ್ನು ಸೂಚಿಸುವ **ಮಹಾರಾಜ, ಮಹಾರಾಜಾಧಿರಾಜ, ರಾಜಪರಮೇಶ್ವರ** ಮುಂತಾದ ಬಿರುದುಗಳನ್ನು ರಾಯನು ಧರಿಸಿದನು.

ಚಿಕ್ಕದೇವರಾಯನ ತರುವಾಯ ಇಮ್ಮಡಿಕಂಠೀರವ ನರಸರಾಜ, ಕೃಷ್ಣರಾಜ, ಏಳ್ಗಡಿ ಚಾಮರಾಜ, ಇಮ್ಮಡಿ ಕೃಷ್ಣರಾಜ ಇವರು ಅರಸರಾದರು. ಇಮ್ಮಡಿ ಕೃಷ್ಣರಾಜನ ಆಳಿಕೆಯಲ್ಲಿ ಹೈದರಅಲಿಯು ಅಭ್ಯುದಯವನ್ನು ಹೊಂದಿದನು (೧೭೬೧). ಈತನು ತನ್ನ ಸಾಹಸಗಳಿಂದ ಮೈಸೂರ ರಾಜ್ಯವನ್ನು ಆಕ್ರಮಿಸಿ ಅರಸುಮನೆತನದವರನ್ನು ಮೂಲೆಗುಂಪಾಗಿ ಮಾಡಿದನು. ಈತನ ಮಗನಾದ ಟೀಪು ಸುಲ್ತಾನನು ತಂದೆಯನ್ನೆ ಅನುಸರಿಸಿದನು. ಈ ವೇರೆಗೆ ಸುಮಾರು ನಾಲ್ವತ್ತು ವರ್ಷಗಳ

ವರೆಗೆ ಹತಪ್ರಭವಾದ ಈ ಮನೆತನವು ಮುಂದೆ ಮತ್ತೆ ಟೀಪುವಿನ ಪತನವಾದ ಬಳಿಕ ಇಂಗ್ಲಿಶರ ಸಹಾಯದಿಂದ ಮರಳಿ ರಾಜ್ಯಾಧಿಕಾರವನ್ನು ಪಡೆಯಿತು. ಅಂಕಿತ ರಾಜಪದ್ಧತಿಯ ನಿಯಮಾನುಸಾರವಾಗಿ (Subsidiary System) ಮುಮ್ಮಡಿ ಕೃಷ್ಣರಾಜನು ಮೈಸೂರ ದೊರೆಯಾಗಿ ಆಳತೊಡಗಿದನು (೧೭೯೯).

ಮುಂದೆ ರಾಜ್ಯದಲ್ಲಿ ಗಲಭೆಯು ಉಂಟಾಯಿತು. ಮುಮ್ಮಡಿ ಕೃಷ್ಣರಾಜನ ಅಸಮರ್ಪಕವಾದ ಆಡಳಿತವೆ ಅದಕ್ಕೆ ಕಾರಣವು ಎಂಬ ತಿಳವಳಿಕೆಯಿಂದ ಇಂಗ್ಲಿಶರು ರಾಜ್ಯಾಧಿಕಾರವನ್ನು ತಮ್ಮ ಕೈಯಲ್ಲಿ ತೆಗೆದುಕೊಂಡರು (೧೮೩೧-೬೮). ಕೃಷ್ಣರಾಜನು ಮಡಿದ ಬಳಿಕ (೧೮೬೮) ಆತನ ದತ್ತಕ ಪುತ್ರನಾದ (ಹತ್ತನೆಯ) ಚಾಮರಾಜನು ಮೈಸೂರ ಪಟ್ಟಾಧಿಕಾರಿಯಾದನು. ಆದರೆ ಆತನು ಇನ್ನೂ ಅಪ್ರಬುದ್ಧನಿದ್ದುದರಿಂದ ಮುಂದೆ ಹದಿಮೂರು ವರ್ಷಗಳವರೆಗೆ ರಾಜ್ಯವ್ಯವಸ್ಥೆಯು ಇಂಗ್ಲಿಶ್ ಪ್ರಭುಗಳ ಕೈಯಲ್ಲಿಯೆ ಉಳಿಯಿತು. ಬಳಿಕ ಶ್ರೀಚಾಮರಾಜೇಂದ್ರ ಒಡೆಯರು ಪ್ರೌಢಿಮೆಯನ್ನು ಹೊಂದಿ ಪ್ರಭುತ್ವವನ್ನು ಪಡೆದು ರಾಜ್ಯವಾಳಿದರು (೧೮೮೧-೯೪).

ಇವರ ಮತ್ತು ಈ ಹಿಂದಿನ ಆಳಿಕೆಯಲ್ಲಿ ಮೈಸೂರ ರಾಜ್ಯವು ಅನೇಕ ವಿಧದ ಸುಧಾರಣೆಗಳನ್ನು ಪಡೆಯಿತು. ಆಧುನಿಕ ಯುಗಕ್ಕೆ ಅನುಗುಣವಾಗಿ ಶಾಸನ ಸಂವಿಧಾನಗಳು ಆಳವಟ್ಟುವು. ಅಂಚೆ, ಉಗಿಬಂಡಿ ಮೊದಲಾದ ಸೌಕರ್ಯಗಳು ಒದಗಿದುವು. ·ಹತ್ತಿ, ಉಣ್ಣೆಯ ಯಂತ್ರಾಲಯಗಳು (mills) ನಿರ್ಮಾಣವಾದುವು. ಉದ್ಯಮಗಳು ಬೆಳೆದುವು. ಆರೋಗ್ಯ, ಶಿಕ್ಷಣ ಮುಂತಾದ ಲಾಭಗಳು ಹೆಚ್ಚಿದುವು. ಸಾರಾಂಶ, ಮೈಸೂರು ಈಗಣ ನಾಗರಿಕತೆಯ ನೆಲೆವೀಡು ಎಂಬ ಕೀರ್ತಿಗೆ ಎಡೆಗೊಟ್ಟಾಯಿತು.

ಚಾಮರಾಜೇಂದ್ರರ ತರುವಾಯ ಅವರ ಹಿರಿಯ ಕುಮಾರರಾದ **ನಾಲ್ವಡಿ ಮಹಾರಾಜ ಶ್ರೀಕೃಷ್ಣರಾಜೇಂದ್ರ ಒಡೆಯರು** ಪಟ್ಟಾಧಿಕಾರಿಗಳಾದರು (೧೮೯೫, ಫೆಬ್ರುವರಿ ೧). ಆದರೆ ಆಗ ಇವರು

ಹತ್ತು ವರ್ಷದವರೂ ಇನ್ನೂ ಅಪ್ರೌಢರೂ ಆಗಿರುವುದರಿಂದ ಮುಂದೆ ಎಂಟು ವರ್ಷಗಳ ವರೆಗೆ ಪ್ರಾತಿನಿಧಿಕ ರಾಜ್ಯವ್ಯವಸ್ಥೆಯು (Regency) ಏರ್ಪಟ್ಟಿತು. ಬಳಿಕ ರಾಜ್ಯಸೂತ್ರಗಳು ಪ್ರತ್ಯಕ್ಷವಾಗಿ ಇವರ ಕೈಯಲ್ಲಿ ಬಂದುವು (೧೯೦೨, ಅಗಸ್ಟ ೮).

ಇವರೇ ಇಂದಿಗೂ ಮೈಸೂರ ದೊರೆಗಳಾಗಿ ಕರ್ನಾಟಕದ ರಾಜ್ಯವನ್ನೂ ಕನ್ನಡಿಗರ ಹೃದಯವನ್ನೂ ಆಳುತ್ತಿರುವರು. ಇವರ ಪ್ರತ್ಯಕ್ಷವಾದ ರಾಜ್ಯಪರಿಪಾಲನೆಯ ಮೂವತ್ತೈದನೆಯ ವರ್ಷವು ಈಗ ನಡೆಯುತ್ತಿರುವುದು. ಒಂಬತ್ತು ವರ್ಷಗಳ ಹಿಂದೆ ಇವರ ಆಳಿಕೆಯ **ರಜತಮಹೋತ್ಸವವು** ವಿಜೃಂಭಣೆಯಿಂದ ನೆರವೇರಿತು (೧೯೨೭). ಇವರು ೧೯೦೭ರಲ್ಲಿ 'G. C. S. I. ಎಂಬ ಬಿರುದನ್ನು, ೧೯೧೮ ರಲ್ಲಿ G. B. E. ಎಂಬ ಪದವಿಯನ್ನು ಪಡೆದರು.

ಇವರ ಕೃಪಾಛತ್ರದಲ್ಲಿ ಮೈಸೂರು ಹಲವು ವಿಧದಿಂದ ಪುರೋಭಿವೃದ್ಧಿಯನ್ನು ಪಡೆದಿದೆ. ಕೃಷಿ, ನೀರಾವರಿ, ವಿದ್ಯುತ್ ಮೊದಲಾದುವುಗಳ ಹೆಚ್ಚಿನ ಸೌಕರ್ಯಗಳು ಒದಗಿವೆ. ವಿದ್ಯೆ, ಕಲೆ, ಕೈಗಾರಿಕೆಗಳು ಬೆಳೆದಿವೆ. ಮೈಸೂರು, ಬೆಂಗಳೂರು ಈ ರಾಜಧಾನೀಪಟ್ಟಣಗಳ ಸೌಂದರ್ಯವೂ ವೈಭವವೂ ಹೆಚ್ಚಿದೆ. ಪ್ರಜಾಜನರಿಗೆ ರಾಜ್ಯಾಂಗಗಳಲ್ಲಿ ಹೆಚ್ಚಿನ ಅಧಿಕಾರಗಳು ಉಂಟಾಗಿವೆ. ಒಟ್ಟಿನಲ್ಲಿ ಮೈಸೂರು ಆದರ್ಶ ರಾಜ್ಯವೆಂದು ದೇಶದಲ್ಲಿ ಗೌರವವನ್ನು ಪಡೆದಿದೆ. ಇವೆಲ್ಲಕ್ಕೂ ಮಿಗಿಲಾಗಿ ಮೈಸೂರಿಗೂ ಹೊರಗಿನ ಕರ್ನಾಟಕಕ್ಕೂ ಸಾಹಿತ್ಯ ಮೊದಲಾದ ಮಾರ್ಗಗಳಿಂದ ಸಮೀಪದ ಸಂಬಂಧಗಳು ಉಂಟಾಗಿ ವಿಶಾಲ ಕರ್ನಾಟಕವಲ್ಲಿ ಏಕರಾಷ್ಟ್ರೀಯತ್ವದ ಭಾವನೆಯು ನೆಲೆಗೊಳ್ಳುತ್ತಲಿದೆ.

---



ಮೈಸೂರ ಪ್ರಭುಗಳಾದ

**ನಾಲ್ವಡಿ ಶ್ರೀಕೃಷ್ಣರಾಜೇಂದ್ರ ಮಹಾರಾಜರು**

## ಇಪ್ಪತ್ತೊಂಬತ್ತನೆಯ ವಿಲಾಸ

# ಸಾಮ್ರಾಜ್ಯದ ವಿಮರ್ಶೆ

ವಿಜಯನಗರಸಾಮ್ರಾಜ್ಯದ ಜೀವನಪ್ರಪಂಚವನ್ನು ಇದುವರೆಗೆ ಬಿಡಿಬಿಡಿಯಾಗಿ ಅವಲೋಕಿಸಿದುದಾಯಿತು. ಇಲ್ಲಿ ಅದನ್ನು ಇನ್ನೊಮ್ಮೆ ಇಡಿಯಾಗಿ ಪರಿಶೀಲಿಸಿ ಅದರೊಳಗಿನ ಮುಖ್ಯಾಂಶಗಳನ್ನು ನೆನೆದು ಕೊಂಡು ಅದರ ಜೀವನದ ವಿಮರ್ಶೆಯನ್ನು ಮಾಡುವ. ಈ ಸಂದರ್ಭದಲ್ಲಿ ಹೊಸತಾಗಿ ತಿಳಿಯಬಹುದಾದ ಕೆಲವು ವಿಶೇಷ ಸಂನಿವೇಶಗಳನ್ನೂ ಕಂಡುಕೊಳ್ಳುವ.

ವಿಜಯನಗರಸಾಮ್ರಾಜ್ಯದ ಪರಿಸಮಾಪ್ತಿಯೊಂದಿಗೆ ಕರ್ನಾಟ ಕದ ಸಾಮ್ರಾಜ್ಯಜೀವನವು ಪರಿಸಮಾಪ್ತಿಹೊಂದಿತು. ಕರ್ನಾಟಕದ ಈ ಸಾಮ್ರಾಜ್ಯಜೀವನವು ಸುಮಾರು ಒಂದು ಸಾವಿರ ವರ್ಷಗಳ ವರೆಗೆ ಬಾಳಿತು. ಇಷ್ಟು ಸುದೀರ್ಘವಾದ ಸಾಮ್ರಾಜ್ಯಪರಂಪರೆಯನ್ನು ಉಪಭೋಗಿಸುವ ಭಾಗ್ಯವು ಭಾರತದಲ್ಲಿ ಮಿಕ್ಕಾವ ಜನಾಂಗಕ್ಕೂ ಲಭಿ ಸಿಲ್ಲ. ಹೆಚ್ಚೇನು, ಬೇರೆ ಭೂಭಾಗದಲ್ಲಿಯೂ ಇಷ್ಟು ವೈಭವಶಾಲಿಯೂ ಉಜ್ವಲವೂ ಆದ ಸಾಮ್ರಾಜ್ಯಜೀವನವೂ ದೀರ್ಘವಾದ ಐತಿಹಾಸಿಕ ಪರಂಪರೆಯೂ ದೊರೆವುದು ದುರ್ಲಭವೆ ಆಗಿದೆ.

ವಿಜಯನಗರಸಾಮ್ರಾಜ್ಯದಲ್ಲಿ ಅಪೂರ್ವವಾದ ಒಂದು ಸಂವಿಧಾನ ವಿದೆ. ವಿಜಯನಗರಸಾಮ್ರಾಜ್ಯವು ಮಿಕ್ಕ ಸಾಮ್ರಾಜ್ಯಗಳಂತೆ ಬರಿಯ ವೈಯಕ್ತಿಕ ಸಾಹಸ-ಮಹತ್ವಾಕಾಂಕ್ಷೆಗಳ ಫಲವಾಗಿರಲಿಲ್ಲ. ಅದು ಒಂದು ಜನಾಂಗದ, ಒಂದು ರಾಷ್ಟ್ರದ ಸಾಮುದಾಯಿಕ ಪ್ರೇರಣೆಯ ಉದಾತ್ತವಾದ ಪರಿಪಾಕವಾಗಿದ್ದಿತು. ವಿಜಯನಗರವು ಉನ್ನತವಾದ ಧ್ಯೇಯಸ್ಫೂರ್ತಿಯನ್ನು ಎತ್ತಿಕೊಂಡು ಅವತಾರಮಾಡಿತು. ಉನ್ನತ ವಾದ ಆ ಧ್ಯೇಯವನ್ನು ಆಚರಿಸುತ್ತ ಜೀವಿಸಿತು. ಉನ್ನತವಾದ ಆ ಧ್ಯೇಯಸಾಧನೆಯಲ್ಲಿಯೇ ಮಡಿದುಹೋಯಿತು.

ರಾಜವಂಶದ ಪರಿವರ್ತನೆಯೊಂದಿಗೆ ಸಾಮ್ರಾಜ್ಯದ ಧ್ಯೇಯ, ಸ್ವರೂಪ, ಜೀವನೋದ್ದೇಶ ಮುಂತಾದುವುಗಳಲ್ಲಿ ಹಲವು ಮಾರ್ಪಾಟಗಳು ಉಂಟಾಗುವುದು ಬೇರೆ ಸಾಮ್ರಾಜ್ಯಗಳಲ್ಲಿ ಸಾಮಾನ್ಯವಾಗಿ ಕಾಣಬರುವ ಸಾಮಾನ್ಯಸಿಯಮವಾಗಿದೆ. ವಿಜಯನಗರಸಾಮ್ರಾಜ್ಯದ ರೀತಿಯೆ ಬೇರೆಯಾಗಿದೆ. ಅರಸುಮನೆತನಗಳು ಮೂಡಲಿ, ಮುಳುಗಲಿ, ಸಾಮ್ರಾಜ್ಯವು ಅದುವೆ, ಅದರ ಧ್ಯೇಯವು ಅದುವೆ, ಅದರ ನೀತಿಯು ಅದುವೆ. ವಿಜಯನಗರವು ಹಾಳಾದರೂ ಬಾಳಿದ ಸಾಮ್ರಾಜ್ಯವು ಇನ್ನೂ ವಿಜಯನಗರವೆ ! ಈ ಧ್ಯೇಯನಿಷ್ಠೆ, ಈ ಸ್ವಾಭಿಮಾನ, ಈ ಕರ್ತವ್ಯಜಾಗೃತಿ ಅಪೂರ್ವವಲ್ಲವೆ ?

ಜನಾಂಗದ ಜೀವಾಳವು ಪ್ರಭುಶಕ್ತಿ. ಸಂಸ್ಕೃತಿಯು ಅದರ ಜೀವನವು. ಸ್ವರಾಜ್ಯವನ್ನು ಕಳೆದುಕೊಂಡು ಸ್ವಾತಂತ್ರ್ಯಕ್ಕೆ ಎರವಾದ ರಾಷ್ಟ್ರದಲ್ಲಿ ಸ್ವರಾಜ್ಯಸ್ಥಾಪನೆಯು ಆದ್ಯಕರ್ತವ್ಯವಾಗುತ್ತದೆ. ಸ್ವರಾಜ್ಯದ ಹಿಂದೆ ಸಂಸ್ಕೃತಿಯು ಬರುವುದು. ಸ್ವರಾಜ್ಯವು ಸಾಮ್ರಾಜ್ಯದಲ್ಲಿ ವಿಸ್ತಾರಗೊಳ್ಳುವುದು. ವಿಜಯನಗರವು ಉದಯಿಸಿ ಮೊದಲು ಸ್ವರಾಜ್ಯವನ್ನು ಸ್ಥಾಪಿಸಿತು. ಸಂಸ್ಕೃತಿಯನ್ನು ಸಂರಕ್ಷಿಸಿತು. ಸ್ವರಾಜ್ಯವನ್ನು ವಿಸ್ತಾರಗೊಳಿಸಿ ಸಾಮ್ರಾಜ್ಯಸಂಘವನ್ನು ಕಟ್ಟಿತು. ಇದರಿಂದ ಸಂರಕ್ಷಿತವಾದ ಸಂಸ್ಕೃತಿಯೂ ನಾಗರಿಕತೆಯೂ ಸಂವರ್ಧಿತವಾಗಿ ವಿಧವಿಧದಿಂದ ವಿಕಾಸಹೊಂದಿತು. **ಸಾಮ್ರಾಜ್ಯಸ್ಥಾಪನೆಯಾದ ಬಳಿಕ ಸ್ವರಾಜ್ಯವನ್ನು ಪರಿಪಾಲಿಸಿ ಸ್ವಧರ್ಮ ಮತ್ತು ಸ್ವಸಂಸ್ಕೃತಿ ಇವುಗಳನ್ನು ಪೂರ್ಣವಾಗಿ ಸಂವರ್ಧಿಸುವುದೆ ಮೊದಲಿನಿಂದ ಕೊನೆಯವರೆಗೆ ವಿಜಯನಗರಸಾಮ್ರಾಜ್ಯದ ಉತ್ತುಂಗ ಆದರ್ಶವೂ ಉದಾತ್ತವಾದ ಆಚಾರನೀತಿಯೂ ಆಗಿದ್ದಿತು.**

ವಿಜಯನಗರದಷ್ಟು ಉತ್ಕಟವಾಗಿಯೂ ವಿಸ್ತೃತಪ್ರಮಾಣದಲ್ಲಿಯೂ ಧರ್ಮ ಮತ್ತು ಸಂಸ್ಕೃತಿ ಇವುಗಳ ಪರಿಪಾಲನೆ ಮತ್ತು ಸಂವರ್ಧನೆಯ ಕಾರ್ಯದಲ್ಲಿ ನಿರತವಾದ ಸಾಮ್ರಾಜ್ಯಗಳು ಈ ಪ್ರಪಂಚದಲ್ಲಿ ಅತ್ಯಲ್ಪವಾಗಿಯೆ ಗೋಚರವಾಗುವುವು. ವಿಜಯನಗರದ

ಆಧಿಪತ್ಯದ ದಕ್ಷಿಣಭಾರತದಲ್ಲಿ ಭಾರತೀಯ ಧರ್ಮ, ವಿದ್ಯೆ, ಸಾಹಿತ್ಯ, ಕಲೆ, ಕೈಗಾರಿಕೆ ಮೊದಲಾದ ನಾಗರಿಕತೆಯ ಆವಿಷ್ಕಾರಗಳು ಅತಿಶಯವಾಗಿ ಅಭಿವೃದ್ಧಿಗೊಂಡುವು. ದಕ್ಷಿಣಭಾರತದಲ್ಲಿ ಕಂಗೊಳಿಸುವ, ಸಾಮಾನ್ಯವಾದ ಭಾರತೀಯ ನಾಗರಿಕತೆಯ ಈಗಣ ಪಡಿಯಚ್ಚು ಬಹುಭಾಗ ಸಿದ್ಧವಾದುದು ವಿಜಯನಗರ ಕಾಲದಲ್ಲಿಯೆ. ಈಗಣ ನಮ್ಮ ಸಾಂಸ್ಕೃತಿಕ ಜೀವನದಲ್ಲಿ ಕಾಣಬಹುದಾದ, ಸ್ಥೂಲ-ಸೂಕ್ಷ್ಮವಾದ ಅನೇಕ ವಿಧಾನಗಳು, ರೀತಿಗಳು, ಒಲವುಗಳು ವಿಜಯನಗರದ ಸಂಸ್ಕಾರಗಳನ್ನು ಪಡೆದುವುಗಳಾಗಿವೆ.

ವಿಜಯನಗರಸಾಮ್ರಾಜ್ಯವು ಸುಮಾರು ಮೂರುನೂರು ವರ್ಷಗಳಿಗಿಂತ ಹೆಚ್ಚು ಕಾಲ (೧೩೩೬-೧೬೪೧) ಜೀವಿಸಿತು. ಈ ಕಾಲದಲ್ಲಿ ನಾಲ್ಕು ಮನೆತನಗಳು ಉದಯಿಸಿದುವು. ಇಪ್ಪತ್ತುನಾಲ್ಕು ಅರಸರು ಆಳಿದರು. ಇವರಲ್ಲಿ ನಾಲ್ವರೈವರನ್ನುಳಿದು ಮಿಕ್ಕವರೆಲ್ಲರು ಸಮರ್ಥರಾದ ರಾಜ್ಯಕರ್ತರೆ ಆಗಿದ್ದರು. ಇವರಲ್ಲಿ ಕೆಲವರಂತೂ ಭೂವಲಯದ ಮೇಲಿನ ನಾಮಾಂಕಿತ ನರಪತಿಗಳಲ್ಲಿ ಗಣನೆಯಾಗಲು ಅರ್ಹರಾಗಿದ್ದಾರೆ. ಅವರು: ಹರಿಹರ, ಬುಕ್ಕರಾಯ, ಇಮ್ಮಡಿ ಹರಿಹರ, ಇಮ್ಮಡಿ ದೇವರಾಯ, ಸಾಳುವ ನರಸಿಂಹ, ಕೃಷ್ಣದೇವರಾಯ, ಅಳಿಯ ರಾಮರಾಯ, ವೆಂಕಟಪತಿದೇವರಾಯ.

ವಿಜಯನಗರದ ಆಳಿಕೆಯಲ್ಲಿ ಮೂರು ದೊಡ್ಡ ರಾಜಕ್ರಾಂತಿಗಳಾದುವು. ಈ ಕಾಲಾವಧಿಯಲ್ಲಿ ಅನೇಕ ಯುದ್ಧಪ್ರಸಂಗಗಳು ನಡೆದುವು. ಇವುಗಳಲ್ಲಿ ಹರಿಹರನ ಸ್ವರಾಜ್ಯದ ಹೋರಾಟಗಳು, ಕಂಪಣ್ಣನ ಮದುರೆಯ ದಂಡಯಾತ್ರೆ, ಕೃಷ್ಣದೇವರಾಯನ ಕಲಿಂಗ ದಂಡಯಾತ್ರೆ, ರಾಯಚೂರ ದಿಗ್ವಿಜಯ, ಅಳಿಯ ರಾಮರಾಯನ ಮಹಮ್ಮದೀಯ ರಾಜ್ಯಗಳ ಮೇಲಿನ ಆಕ್ರಮಣಗಳು ಚಿರಸ್ಮರಣೀಯವಾಗಿವೆ. ಸಾಮ್ರಾಜ್ಯಕ್ಕೆ ಅನರ್ಥಕಾರಕವಾದ ಘಟನೆಗಳಲ್ಲಿ ರಾಕ್ಷಸತಂಗಡಿಯ ಮಹಾಯುದ್ಧ, ಜಗರಾಯನ ಜ್ಞಾತಿಯುದ್ಧ, ಮದುರೆಯ ನಾಯಕರ ದ್ರೋಹನೀತಿ ಪ್ರಮುಖವಾಗಿವೆ.

ಅಧಿಕವಾದ ರಾಜ್ಯವಿಸ್ತಾರ, ಪ್ರಬಲವಾದ ಪ್ರಭುಶಕ್ತಿ, ಪ್ರಚಂಡವಾದ ಸೇನಾಬಲ, ಸುದೀರ್ಘವಾದ ಜೀವಮಾನ, ಸುಯಂತ್ರಿತವಾದ ಶಾಸನಪದ್ಧತಿ ಇವುಗಳಿಂದ ಸುಸಜ್ಜಿತವಾದ ವಿಜಯನಗರಸಾಮ್ರಾಜ್ಯವು ಪ್ರಪಂಚದಲ್ಲಿ ಸುವಿಖ್ಯಾತವಾದ ಸಾಮ್ರಾಜ್ಯಗಳ ಅಗ್ರಪಂಕ್ತಿಯನ್ನು ಆಕ್ರಮಿಸಲು ಅರ್ಹವಾಗಿದೆ. ಉತ್ತುಂಗವಾದ ಆದರ್ಶ, ಉಚ್ಚವಾದ ಸಂಸ್ಕೃತಿ, ಉದಾತ್ತವಾದ ನಾಗರಿಕತೆ, ವಿಶಾಲವಾದ ಜೀವನಸಂಕಲ್ಪ ಮೊದಲಾದ ಸಂವಿಧಾನಗಳಲ್ಲಿ ವಿಜಯನಗರವು ಪೃಥ್ವೀತಲದಲ್ಲಿ ನಾಮಾಂಕಿತವಾದ ಯಾವ ಸಾಮ್ರಾಜ್ಯಕ್ಕೂ ಹಿಂದುಳಿವಂತೆ ಇಲ್ಲ. ಪ್ರಬಲರಾದ ಪ್ರತಿಸ್ಪರ್ಧಿಗಳೊಡನೆ ಅವ್ಯಾಹತವಾಗಿ ಕಾದುತ್ತ ಇಷ್ಟು ಉನ್ನತವೂ ವಿಸ್ತೃತವೂ ಆದ ಸಾಂಸ್ಕೃತಿಕ ಕಾರ್ಯವನ್ನು ನೆರವೇರಿಸಿದ ವಿಜಯನಗರದ ಶ್ರೇಯಸ್ಸು ಮಾನವ ಲೋಕದಲ್ಲಿಯೆ ಅಪೂರ್ವವಾಗಿದೆ.

ಸಾಂಸ್ಕೃತಿಕ ವೈಭವದಂತೆ ಭೌತಿಕ ಐಶ್ವರ್ಯದಲ್ಲಿಯೂ ವಿಜಯನಗರಸಾಮ್ರಾಜ್ಯವು ಮಿಗಿಲಾಗಿತ್ತು. ಅತ್ಯಂತ ಧನಾಢ್ಯವೂ ಸಮೃದ್ಧವೂ ಆದ ಸಾಮ್ರಾಜ್ಯವೆಂದು ಅದರ ಕೀರ್ತಿಯು ದಿಗಂತಗಳಲ್ಲಿ ಪಸರಿಸಿತ್ತು. ಫಲವತ್ತಾದ ಭೂಮಿಯಿಂದ ಬರುವ ವಿಪುಲವಾದ ಆದಾಯ, ದೇಶಾಂತರಗಳ ವ್ಯಾಪಾರ, ಉದ್ಯಮ ಮೊದಲಾದ ಸಾಧನಗಳಿಂದ ಹರಿದು ಬರುವ ಧನಪ್ರವಾಹವಲ್ಲದೆ ವಿಜಯನಗರ ರಾಜ್ಯದಲ್ಲಿ ರತ್ನದ ಅನೇಕ ಕಣಿಗಳು ಇದ್ದುವು. ಇಷ್ಟು ಬೆಲೆಯುಳ್ಳ ಕಣಿಗಳು ಭೂಮಂಡಲದಲ್ಲಿ ಬೇರೆಡೆ ಎಲ್ಲಿಯೂ ಇರಲಿಲ್ಲ. ಈ ಕಣಿಗಳು ಹೆಚ್ಚಾಗಿ ಕರ್ನೂಲ, ಅನಂತಪುರ ಪ್ರದೇಶದಲ್ಲಿ ಇದ್ದುವು. ಇಂತಹ ಸ್ಥಲಗಳಲ್ಲಿ ವಜ್ರಕರೂರು ನಾಮಾಂಕಿತವಾಗಿದ್ದಿತು. ಇಲ್ಲಿಯ ರತ್ನಗಳು ದೇಶವಿದೇಶಗಳಿಗೆ ಹೋಗುತ್ತಿದ್ದುವು. ಈ ಕಣಿಗಳನ್ನು ವರ್ತಕರಿಗೆ ಗುತ್ತಿಗೆಯಾಗಿ ಕೊಡುತ್ತಿದ್ದರು. ಆದರೆ ಅವುಗಳಲ್ಲಿ ಹುಟ್ಟುವ ೨೫ ಕ್ಯಾರಟಿಗಿಂತ ಹೆಚ್ಚು ತೂಕವುಳ್ಳ ರತ್ನಗಳನ್ನು ವಿಜಯನಗರದ ರಾಜರಿಗೆ ಕೊಡಬೇಕೆಂದು ನಿರ್ಬಂಧವಿದ್ದಿತು. ರಾಕ್ಷಸತಂಗಡಿಯ ಸುಳಿಗೆಯಲ್ಲಿ ರಾಮರಾಯನ ಕುದುರೆಯ ತುರಾಯಿಗೆ ಕೋದ ಕೋಳಿತತ್ತಿಯ ಆಕಾರದ

ಒಂದು ರತ್ನವು ಆದಿಲಶಹನ ಕೈಸೇರಿತು ಎಂದು ಹೇಳುತ್ತಾರೆ. ೧೬೫೬ರಲ್ಲಿ ಮೀರಜುಮ್ಲನಿಗೆ ದೊರೆತ ವಿಶ್ವವಿಖ್ಯಾತ ಕೋಹಿನೂರು ವಿಜಯನಗರದ ರತ್ನಖನಿಯಲ್ಲಿ ಹುಟ್ಟಿದುದು.[೧]

ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗುವ ಭಾಗ್ಯವು ಮೂರು ನಾಲ್ಕು ಊರುಗಳಿಗೆ ಬೇರೆ ಬೇರೆ ಸಮಯಗಳಲ್ಲಿ ಪ್ರಾಪ್ತವಾಯಿತು. ವಿಜಯನಗರವು ಸುಮಾರು ೨೨೦ ವರ್ಷಗಳವರೆಗೆ ಅತ್ಯಂತ ವೈಭವದಿಂದ ಮೆರೆಯಿತು (೧೩೪೬-೧೫೬೫). ಭೂತಲದ ಮೇಲೆ ಅತ್ಯಂತ ಪ್ರಸಿದ್ಧವೂ ವಿಸ್ತೀರ್ಣವೂ ಸಮೃದ್ಧವೂ ರಮಣೀಯವೂ ಆಗಿ ಬಾಳಿದ ಪಟ್ಟಣಗಳಲ್ಲಿ ವಿಜಯನಗರವು ಒಂದಾಗಿದೆ. ಭರತಖಂಡದಲ್ಲಿ ಸುವಿಖ್ಯಾತವಾದ ಹಸ್ತಿನಾವತಿ, ಪಾಟಲಿಪುತ್ರ, ಉಜ್ಜಯಿನಿ ಮೊದಲಾದ ಪಟ್ಟಣಗಳಾಗಲಿ, ದ್ವೀಪಾಂತರಗಳಲ್ಲಿ ನಾಮಾಂಕಿತವಾದ ರೋಮ, ಕಾರ್ಥೇಜ, ಕಾನ್ಸ್ಟಂಟಿನೋಪಲ್ ಮೊದಲಾದ ಪಟ್ಟಣಗಳಾಗಲಿ, ಯಾವ ಪಟ್ಟಣಕ್ಕೂ ಅದು ಸೋಲುವಂತೆ ಇರಲಿಲ್ಲ. ವಿಜಯನಗರವು ಹಾಳಾದುದರಿಂದ ಪೋರ್ತುಗೀಜರ ಇಡಿಯ ವ್ಯಾಪಾರವು ಮುಳುಗಿ ಹೋಯಿತು ಎಂಬ ಒಂದು ಸಂಗತಿಯ ಮೇಲಿಂದಲೆ ಅದು ಎಷ್ಟು ಸಮೃದ್ಧವೂ ವಿಸ್ತೃತ ವ್ಯಾಪಾರ ಕ್ಷೇತ್ರವೂ ಆಗಿದ್ದಿತು ಎಂಬುದರ ಸ್ವಲ್ಪ ಕಲ್ಪನೆಯಾಗುವಂತಿದೆ. ಮುಂದೆ ವಿಜಯನಗರದ ಇಳಿಗಾಲದಲ್ಲಿ ಪೆನುಗೊಂಡ (೧೫೬೫), ಚಂದ್ರಗಿರಿ (೧೫೯೨), ವೆಲ್ಲೂರು (೧೬೦೬), ಇವು ರಾಜಧಾನಿಗಳಾದುವು.

ಯುಗಮಾನವನ್ನು ಅನುಸರಿಸಿ,ವಿಜಯನಗರದ ಆಡಳಿತವು ರಾಜನಿಯಂತ್ರಿತವಾಗಿದ್ದಿತು. ಸನಾತನವಾದ ಭಾರತೀಯ ಪರಂಪರೆಗೆ ಅನುಗುಣವಾಗಿ, ತಂದೆಯು ಕುಟುಂಬವನ್ನು ಸಲಹುವಂತೆ ರಾಜನು ಪ್ರಜಾಜನರನ್ನು ಪರಿಪಾಲಿಸುತ್ತಲಿದ್ದನು. ಆದರೂ ಆತನ ಅಧಿಕಾರವು ಪೂರ್ಣವಾಗಿ ಅನಿಯಂತ್ರಿತವಾಗಿರುತ್ತಿರಲಿಲ್ಲ.ರಾಜಗುರು ಮೊದಲಾದ ಮಂತ್ರಿಮಂಡಲದ ಮಂತ್ರಾಲೋಚನೆಯನ್ನು ಆತನು ಆಗಾಗ ತೆಗೆದುಕೊಳ್ಳ-

---

೧. ಮು. ರಿ. ಭಾ. ೧, ಪು. ೩೧೧.

ಬೇಕಾಗುತ್ತಿತ್ತು. ಇದಲ್ಲದೆ, ಸಾಮಂತರು, ನಾಯಕರು, ಅಧಿಕಾರಿ ಗಳು, ಪ್ರಜಾಪಕ್ಷದ ಪ್ರಮುಖರು ಮುಂತಾದವರ ಅಭಿಪ್ರಾಯ-ಆಲೋಚನೆಗಳನ್ನೂ ಆತನು ಪ್ರಾಸಂಗಿಕವಾಗಿ ಕೇಳುತ್ತಿದ್ದನು.

ವಿಜಯನಗರದ ರಾಜ್ಯಪದ್ಧತಿಯು ಸುಯಂತ್ರಿತವಾಗಿದ್ದಿತು. ಆಗಿನ ಕಾಲದ ನಾಗರಿಕ ರಾಷ್ಟ್ರದ ಎಲ್ಲ ವಿಧದ ಅಂಗೋಪಾಂಗಗಳಿಂದ ಕೂಡಿದುದು ಆಗಿತ್ತು. ಮಂತ್ರಿ, ಸೇನಾಪತಿ, ಮೊದಲಾದ ಅಧಿಕಾರದ ಸ್ಥಳಗಳು ಸಕಲ ಜಾತಿ, ಧರ್ಮ, ಮತ, ಪಂಗಡಗಳ ಜನರಿಗೆ ಯಾವ ಭೇದಭಾವನೆಯಿಲ್ಲದೆ ದೊರೆಯುತ್ತಿದ್ದುವು. ಹಲವು ಮಹಮ್ಮದೀಯರು ಕೂಡ ವಿಜಯನಗರದ ಸೇವೆಯಲ್ಲಿ ಇದ್ದರು. ಆಡಳಿತದ ಸೌಕರ್ಯಕ್ಕಾಗಿ ಗ್ರಾಮ, ನಗರ, ಕಂಪಣ, ನಾಡು, ಮಂಡಲ ಮುಂತಾದ ಚಿಕ್ಕ ದೊಡ್ಡ ಪ್ರದೇಶಗಳಲ್ಲಿ ದೇಶವು ವಿಭಾಗಿಸಲ್ಪಟ್ಟಿತ್ತು. ಸಾಮ್ರಾಜ್ಯದಲ್ಲಿ ಈ ಆರು ಪ್ರಮುಖ ಪ್ರಾಂತಗಳು ಇದ್ದುವು: ೧. ಉದಯಗಿರಿ ರಾಜ್ಯ, ೨. ಪೆನುಗೊಂಡ ರಾಜ್ಯ, ೩. ಮುಳುವಾಯಿ (ಮುಳಬಾಗಲ್) ರಾಜ್ಯ, ೪. ಬಾರಕೂರು ಅಥವಾ ತುಳುರಾಜ್ಯ, ೫. ಅರಗ, ಚಂದ್ರಗುತ್ತಿ ಅಥವಾ ಮಲೆ ರಾಜ್ಯ, ೬. ರಾಜಗಂಭೀರ ರಾಜ್ಯ, ಮದುರೆ-ಕಂಚಿ ಮೊದಲಾದ ಪ್ರದೇಶಗಳನ್ನೊಳಗೊಂಡುದು.

ಯುದ್ಧಮಯವಾದ ವಿಜಯನಗರದ ಸಾಮ್ರಾಜ್ಯಜೀವನಕ್ಕೆ ಅತಿಶಯವಾದ ಧನವು ಬೇಕಾಗುತ್ತಿದ್ದುದರಿಂದ, ಎಂದಿನಿಂದ ನಡೆದುಬಂದ ಭೂಮಿಯ ಕಂದಾಯ, ವ್ಯಾಪಾರದ ಸುಂಕ ಮೊದಲಾದ ಸಾಮಾನ್ಯ ಕರಗಳಲ್ಲದೆ ಹೊಸತಾಗಿ ಅನೇಕ ತೆರಿಗೆಗಳು ಪ್ರಜಾಜನರ ಮೇಲೆ ಹೇರಲಾದುವು. ಈ ಭಾರವು ಕೆಲವೆಡೆ ಜನತೆಯ ಸಹನಶಕ್ತಿಯನ್ನು ಮೀರಿ ಹೋಯಿತು. ಈ ಕಾಲದಲ್ಲಿ ತೆರಿಗೆಯ ವಿಷಯವಾದ ಪದಾರ್ಥಗಳಲ್ಲಿ ಕೆಲವನ್ನು ಮಾದರಿಗಾಗಿ ಇಲ್ಲಿ ಕಾಣಿಸಬಹುದು: ಉಪ್ಪು, ಗಾಣ, ಕುಂಬಾರಸಾಲೆ, ಕಮ್ಮಾರಸಾಲೆ, ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವ ಎಲ್ಲ ಬಗೆಯ ಸರಕುಗಳು, ಮಠಗಳು, ಬ್ರಾಹ್ಮಣರು, ಭಿಕ್ಷುಕರು, ಸೂಳೆಯರು, ಇ. ಇ.

ಪ್ರಜಾಹಿತದ ದೃಷ್ಟಿಯಿಂದ ಎರಡು ಅಭಿನಂದನೀಯವಾದ ಸಂನಿವೇಶಗಳು ವಿಜಯನಗರದ ಜನಾಂಗದಲ್ಲಿ ಕಂಡು ಬರುತ್ತವೆ: ೧. ಜನತೆಯಲ್ಲಿ ಜಾಗರೂಕವಾಗಿದ್ದ ಸಾಂಘಿಕ ಜೀವನ; ೨. ಪ್ರಜಾಜನರು ರಾಜಕೀಯ ಮತ್ತು ಸಾಮಾಜಿಕವಾದ ಹಲವು ಸಂದರ್ಭಗಳನ್ನು ಪರಸ್ಪರ ಸಹಕಾರ್ಯದಿಂದ,ಹೆಚ್ಚಾಗಿ ರಾಜ್ಯಾಧಿಕಾರಿಗಳ ಸಹಾಯವನ್ನು ಬಯಸದೆ ನೆರವೇರಿಸುವುದು. ವಿಜಯನಗರದ ಆಡಳಿತದಲ್ಲಿ ಪ್ರಜೆಗಳಿಗೆ ಸ್ವಹಿತವನ್ನು ರಕ್ಷಿಸಿಕೊಳ್ಳಲು ಕೆಲಮಟ್ಟಿಗೆ ಸ್ವಾತಂತ್ರ್ಯವಿದ್ದಿತು.ಊರಿನ ಆಡಳಿತಕ್ಕೆ ಸಂಬಂಧಪಟ್ಟ ಅನೇಕ ಸಂವಿಧಾನಗಳು ಊರ ಪ್ರತಿನಿಧಿಗಳಿಂದಲೆ ನಿರ್ಣಯವಾಗುತ್ತಿದ್ದುವು.ಊರೂರಿಗೆ ಜನನಿಯುಕ್ತವಾದ ಸಮಿತಿಗಳು ಇದ್ದುವು. ಇವುಗಳಲ್ಲದೆ, ಜಾತಿ, ಪಂಗಡ, ಬೇರೆ ಬೇರೆ ಹೋರೆಗಳು, ಬೇಸಾಯಗಳು, ವ್ಯಾಪಾರ ಮೊದಲಾದುವುಗಳಿಗೆ ಸಂಬಂಧಪಟ್ಟ ವಿಶಿಷ್ಟಸಂಘಗಳು ಇರುತ್ತಿದ್ದುವು. ಇಂತಹವುಗಳಲ್ಲಿ ವೀರಬಣಂಜಿಗ, ಮಹಾಗಣ ಎಂಬಿವು ಪ್ರಧಾನವಾಗಿದ್ದುವು. ಈ ಸಂಘಗಳ ಅಧಿಕಾರಿಗಳು ರಾಜರಿಂದಲೂ ಪೂಜಿತರಾಗುತ್ತಿದ್ದರು. ಇಂತಹರಲ್ಲಿ ವಡ್ಡವ್ಯವಹಾರಿ, ಮಹಾಪ್ರಭು, ಪಟ್ಟಣಸ್ವಾಮಿ, ಪೃಥ್ವೀಸೆಟ್ಟಿ (mayor) ಮೊದಲಾದವರು ಪ್ರಮುಖರಾಗಿದ್ದರು.

ವಿಜಯನಗರದ ರಕ್ಷಾವಿಧಾನವೂ ಸೇನಾಶಕ್ತಿಯೂ (police and military departments) ಕಾರ್ಯತತ್ಪರವಾಗಿದ್ದುವು. ವಿಜಯನಗರದ ಸೈನಿಕರು ಅಗ್ನಿವಿದ್ಯೆಯನ್ನೂ ಅರಿತವರಾಗಿದ್ದರು. ವಿಜಯನಗರದವರು ಹಡಗುಪಡೆಯನ್ನೂ ಇಟ್ಟಿದ್ದರಾಗಿ ತೋರುತ್ತದೆ. ಆದರೆ ಈ ಎರಡು ವಿಧಾನಗಳಲ್ಲಿ ಅವರು ಸಾಕಷ್ಟು ಗಮನಕೊಡಲಿಲ್ಲವೆಂದು ಹೇಳಬೇಕಾಗಿದೆ. ಅಗ್ನಿವಿದ್ಯೆಯಲ್ಲಿಯ ನ್ಯೂನತೆಯ ಮೂಲಕ ರಾಯಚೂರು ಮತ್ತು ರಾಕ್ಷಸತಂಗಡಿಯ ಕಾಳೆಗಗಳಲ್ಲಿ ಅವರು ಹಾನಿಯನ್ನು ಅನುಭವಿಸಬೇಕಾಯಿತು ಎಂಬುದನ್ನು ಹಿಂದೆ ನೋಡಿದುದಾಗಿದೆ. ಸಮರ್ಥವಾದ ನೌಕಾದಳವಿಲ್ಲದುದರಿಂದಲೆ ವಿಜಯನಗರದ ಅರಸರು ದ್ವೀಪಾಂತರಗಳ ಕುದುರೆ ಮೊದಲಾದ ಯುದ್ಧ ಸಾಮಗ್ರಿಯ ಗೋಸುಗ ಪರಾವಲಂಬಿಯಾಗಿರಬೇಕಾಯಿತು.

ಅರಸರಲ್ಲಿ ಸಾಮಾನ್ಯವಾಗಿ ಇರಬೇಕಾದ ಶೌರ್ಯ–ಧೈರ್ಯಾದಿ ರಾಜಗುಣಗಳಲ್ಲದೆ, ವಿಜಯನಗರದ ಅರಸರಲ್ಲಿ ಒಂದು ಸದ್ಗುಣವು ವಿಶೇಷ ಪ್ರಮಾಣದಲ್ಲಿ ಪ್ರಕಟವಾಗುತ್ತದೆ. ಅದು ಸುಸಂಸ್ಕೃತತೆಯು. ವಿಜಯನಗರದ ಅರಸರಷ್ಟು ಸಂಸ್ಕೃತಿಸಂಪನ್ನರಾದ ಅರಸರು ಬೇರೆಡೆಯಲ್ಲಿ ದೊರೆವುದು ಕಡಿಮೆ. ವಿಜಯನಗರದ ಅರಸರು ಧ್ಯೇಯನಿಷ್ಠರಾಗಿದ್ದರು. ಅವರಿಗೆ ಧರ್ಮದಲ್ಲಿ ಆಸಕ್ತಿಯು ಹೆಚ್ಚು. ಅವರ ಹೃದಯವು ವಿಶಾಲವಾದುದು. ಅನ್ಯಧರ್ಮಗಳಲ್ಲಿ ಸಹಿಷ್ಣುತೆಯನ್ನೂ ಸರ್ವರಲ್ಲಿ ಸಹಾನುಭೂತಿಯನ್ನೂ ಹೇಗೆ ಆಚರಿಸಬೇಕು ಎಂಬುದಕ್ಕೆ ಅವರು ಮಾದರಿಯಾಗಿರುವರು. ಅವರ ನೀತಿಯು ಉಚ್ಚವಾಗಿದ್ದಿತು. ಅವರ ಶೀಲವು ಉದಾತ್ತವಾಗಿದ್ದಿತು. ಅವರ ಔದಾರ್ಯವು ಅಮಿತವಾಗಿದ್ದಿತು. ಅವರೆಲ್ಲರೂ ಒಳ್ಳೆಯ ವಿದ್ಯಾವಂತರೂ ವಿದ್ಯಾಪಕ್ಷಪಾತಿಗಳೂ ಆಗಿದ್ದರು. ಅವರಲ್ಲಿ ಅನೇಕರು ಕವಿಗಳೂ ಗ್ರಂಥಕಾರರೂ ಆಗಿದ್ದರು.[೨]

ವಿಜಯನಗರ ಸಾಮ್ರಾಜ್ಯವು ಉತ್ಕರ್ಷವನ್ನು ಹೊಂದಿತು. ಬಳಿಕ ಅಪಕರ್ಷಕ್ಕೀಡಾಗಿ ವಿಲಯನೈದಿತು. ಮಾನವೀಯ ವಿಚಾರದಿಂದ ಈ ಉತ್ಕರ್ಷಾಪಕರ್ಷಗಳಿಗೆ ದೃಶ್ಯವಾದ ಕೆಲವು ಕಾರಣಗಳನ್ನು ಕಂಡು ಹಿಡಿಯಬಹುದಾಗಿದೆ. ಉಚ್ಚವಾದ ಧ್ಯೇಯ, ಶೌರ್ಯ, ಸಾಹಸ, ಪರಾಕ್ರಮ, ಸ್ವಾರ್ಥತ್ಯಾಗ, ಸಂಘಶಕ್ತಿ, ರಾಷ್ಟ್ರಾಭಿಮಾನ, ದೀರ್ಘೋದ್ಯೋಗ, ಕಾರ್ಯದಕ್ಷತೆ ಮೊದಲಾದ ಗುಣ–ಶಕ್ತಿಗಳು ವಿಜಯನಗರದ ಅಭ್ಯುದಯಕ್ಕೆ ಸಾಧಕಗಳಾದುವು. ವಿಜಯನಗರದ ಜೀವನದ ಸುಮಾರು ೧೮೦ ವರ್ಷಗಳವರೆಗೆ ಇವುಗಳು ಪ್ರಬಲವಾಗಿರುವುದರಿಂದ ಸಾಮ್ರಾಜ್ಯವು ಅನೇಕ ವಿಧದ ಎಡರು ತೊಡರುಗಳನ್ನು ಇದಿರಿಸುತ್ತಿರುವಾಗಲೆ ಉನ್ನತಿಶಿಖರವನ್ನು ಏರಿತು.

---

೨. ಫಿರಿಷ್ತಾ ಮೊದಲಾದ ಕೆಲವು ಪರಕೀಯ ಇತಿಹಾಸಕಾರರು ವಿಪರ್ಯಸ್ತವಾಗಿ ಚಿತ್ರಿಸಿದ ವಿಜಯನಗರದ ಅರಸರ ವೃತ್ತಾಂತಗಳನ್ನು ನಂಬಿ, ನಮ್ಮಲ್ಲಿಯ ಶ್ರೀ. ಸರದೇಸಾಯಿಯಂತಹ ಕೆಲವು ಇತಿಹಾಸಕಾರರು ವಿಜಯನಗರದ ಅರಸರನ್ನು ದೂಷಿಸಿದುದು ಶೋಚನೀಯವಾಗಿದೆ ! ಇಂತಹ ವಿಧಾನಗಳಿಗೆ ಎಷ್ಟು ಆಧಾರವಿಲ್ಲ. (ಮು. ರಿ. ಭಾ. ೧, ಪು. ೩೭೯–೮೦)

ಆದರೆ ಮುಂದೆ ಮುಂದೆ ಅಭ್ಯುದಯಕ್ಕೆ ಪ್ರೇರಕವಾದ ಈ ಶಕ್ತಿಗಳು ಬಲಗುಂದಿ ಇವುಗಳಿಗೆ ವಿರುದ್ಧವಾದ ಶಕ್ತಿಗಳು ಬಲಿಯ ತೊಡಗಿದುವು. ಧ್ಯೇಯನಿಷ್ಠೆಯು ಕಳೆಗುಂದಿತು. ಲೋಭವೂ ಆತ್ಮ ಪ್ರತಿಷ್ಠೆಯೂ ಹೆಚ್ಚಿದುವು. ಪರಾಕ್ರಮವು ಕುಸಿಯಿತು. ಸಂಘ ಶಕ್ತಿಯು ಕುಗ್ಗಿತು. ರಾಷ್ಟ್ರಾಭಿಮಾನವು ಮಲಿನವಾಯಿತು. ಸ್ವಾರ್ಥವು ಪ್ರಬಲಿಸಿತು. ಇದರಿಂದ ಅರಸುಮನೆತನಗಳಲ್ಲಿಯೂ ಸಾಮಂತರಲ್ಲಿಯೂ ಮಂಡಲಾಧಿಕಾರಿಗಳಲ್ಲಿಯೂ ಅನೈಕ್ಯ, ಅಂತಃ-ಕಲಹ, ದ್ರೋಹ, ಇವುಗಳ ಪ್ರವೃತ್ತಿಯು ವೃದ್ಧಿಂಗತವಾಗಿ ಸಾಮ್ರಾಜ್ಯವು ಅಧಃಪತನವೈದಿತು. ಭಾರತೀಯ ಸಾಮ್ರಾಜ್ಯಗಳ ಅಧಃಪತನಕ್ಕೆ ಪ್ರಧಾನಕಾರಣವಾದ ಮಂಡಲಪತಿಗಳ ಪ್ರಾಬಲ್ಯವು ವಿಜಯನಗರ ಸಾಮ್ರಾಜ್ಯಕ್ಕೂ ಹೇಗೆ ವಿಘಾತಕವಾಯಿತು ಎಂಬುದು ಅರವೀಡು ಮನೆತನದ ಚರಿತ್ರೆಯಲ್ಲಿ ವಿಶದವಾಗಿ ವಿವರಿಸಲಾಗಿದೆ.

---

## ಮೂವತ್ತನೆಯ ವಿಲಾಸ

# ವಿಜಯನಗರದ ನಾಗರಿಕತೆ

ಜನಾಂಗದ ರಾಜಕೀಯ ಮತ್ತು ಸಾಮಾಜಿಕ ಜೀವನಗಳು ಹಲವು ಪರಿಯಲ್ಲಿ ಅನ್ಯೋನ್ಯ ಸಂಬಂಧಗಳಿಂದ ಸಂಲಗ್ನವಾಗಿರುವುವು. ವಿಜಯನಗರದ ಬಹಿರಂಗ ಜೀವನದ ಫಲವಾದ ಅದರ ರಾಜಕೀಯ ಚರಿತ್ರೆಯು ಎಷ್ಟು ವೈಭವಶಾಲಿಯಾಗಿದೆಯೊ, ಅಷ್ಟೆ, ಅದಕ್ಕೂ ಹೆಚ್ಚಾಗಿ, ಅದರ ಅಂತರಂಗ ಜೀವನದ ಆತ್ಮವಿಕಾಸದ ಫಲವಾದ ಅದರ ನಾಗರಿಕತೆಯೂ ಉಜ್ವಲವೂ ವೈಭವಸಂಪನ್ನವೂ ಆಗಿದೆ. ವಿವಿಧ ಸಂವಿಧಾನಗಳಲ್ಲಿ ಬಗೆಬಗೆಯ ಆವಿಷ್ಕಾರಗಳಿಂದ ಅಭಿವ್ಯಕ್ತವಾದ

ಈ ನಾಗರಿಕತೆಯ ಅತಿಪ್ರಧಾನವಾದ ಕೆಲವು ನಿದರ್ಶನಗಳನ್ನಷ್ಟೇ ಬಹು ಸಂಕ್ಷೇಪವಾಗಿ ಇಲ್ಲಿ ಕಾಣಿಸಲಿರುವೆ.

ವಿಜಯನಗರದ ಉನ್ನತವಾದ ನಾಗರಿಕತೆಯು ಪ್ರಾಮುಖ್ಯ ವಾಗಿ ಜೀವನದ ಮೂರು ಅಂಗಗಳಲ್ಲಿ ಪ್ರಕಟವಾಗಿದೆ: ೧. ಧಾರ್ಮಿಕ, ೨. ಬೌದ್ಧಿಕ, ೩. ಕಲಾತ್ಮಕ.

ವಿವೇಕಮೂಲಕವಾಗಿ ಹುಟ್ಟಿ ವಿವೇಕನಿಯಂತ್ರಿತವಾಗಿ ಬೆಳೆವ ಬಹುಧರ್ಮತ್ವವಾಗಲಿ ಅನೇಕಮತತ್ವವಾಗಲಿ ಜನಾಂಗಕ್ಕೆ ಹಾನಿಕರ ವಾಗಲಾರದು. ಇಷ್ಟೇ ಅಲ್ಲ. ಈ ಬಗೆಯ ಆಚಾರ-ವಿಚಾರ ಭಿನ್ನ ತೆಯೂ ಮತಸ್ವಾತಂತ್ರ್ಯವೂ ಜನಾಂಗದ ಸಚೇತನತೆಯ ಸುಲಕ್ಷಣವೆ ಆಗಿದೆ. ವಿಜಯನಗರಸಾಮ್ರಾಜ್ಯವು ಭಿನ್ನಭಿನ್ನ ಧರ್ಮಮತಗಳ ಮಹಾ ಸಮ್ಮೇಲನವೆ ಆಗಿದ್ದಿತು. ವೈದಿಕ, ಜೈನ,ವೀರಶೈವ, ಅದ್ವೈತ, ವಿಶಿಷ್ಟಾ ದ್ವೈತ, ದ್ವೈತ, ಶೈವ, ವೈಷ್ಣವ, ಮಹಮ್ಮದೀಯ, ಕ್ರೈಸ್ತ ಮೊದ ಲಾದ ಧರ್ಮಮತಗಳಿಗೆ ಸೇರಿದವರು ವಿಜಯನಗರದ ಪ್ರಜಾಜನ ರಾಗಿದ್ದರು. ಈ ಈ ಮತಗಳ ಆಚಾರ್ಯರೂ ಉಪದೇಶಕರೂ ಈ ಕಾಲ ದಲ್ಲಿ ತಮ್ಮ ತಮ್ಮ ಧರ್ಮಮತಗಳನ್ನು ಪ್ರಚಾರಗೊಳಿಸಲು ಹೆಣಗಿದರು. ಅದರಿಂದ ಇವುಗಳಲ್ಲಿ ಪರಸ್ಪರ ಸ್ಪರ್ಧೆಯೂ ಸಂಘರ್ಷವೂ ಆಗಾಗ ಉಂಟಾಗುತ್ತಿದ್ದಿತು. ಆದರೆ ಅದು ವಿಕೋಪಕ್ಕೆ ಹೋಗಿ ಅದಕ್ಕೆ ಹೇಯವಾದ ಸ್ವರೂಪವು ಎಂದೂ ಬರಲಿಲ್ಲ.

ಈ ಪರಮತಸಹಿಷ್ಣುತೆಗೆ ವಿಜಯನಗರದ ಅರಸರ ವಿಶಾಲವಾದ ದೃಷ್ಟಿಯೂ ಅತ್ಯುದಾರವಾದ ಸಹಾನುಭೂತಿಯ ನೀತಿಯೂ ಪ್ರಧಾನ ಕಾರಣವಾಗಿವೆ. ಅರಸನು ಶೈವನಿರಲಿ, ರಾಮಾನುಜನಿರಲಿ, ಆತನ ಪ್ರಜೆ ಗಳಿಗೆ ತಮ್ಮ ತಮ್ಮ ಧರ್ಮಗಳನ್ನು ಆಚರಿಸಲು ಪೂರ್ಣ ಸ್ವಾತಂತ್ರ್ಯವೆ ಇದ್ದಿತು. ಇಷ್ಟೆ ಅಲ್ಲ, ಪೂರ್ಣ ಪ್ರೋತ್ಸಾಹವೂ ಇರುತ್ತಿದ್ದಿತು. ವೈದಿಕ ಅರಸನ ಅರಮನೆಯ ಮಗ್ಗುಲಲ್ಲಿ ಜೈನರ ಬಸದಿ! ಸಾಮ್ರಾಜ್ಯದ ಬದ್ಧವೈರಿಗಳ ಧರ್ಮದವರಿಗೆ ಸಾಮ್ರಾಜ್ಯದ ರಾಜಧಾನಿಯ ಮಧ್ಯದಲ್ಲಿ ಪ್ರಾರ್ಥನಾಮಂದಿರದ ಸೌಕರ್ಯವು! ಸ್ವಧರ್ಮನಿಂದಕರಾಗಿ

ಸ್ವಧರ್ಮೀಯರನ್ನು ಧರ್ಮಭ್ರಷ್ಟಮಾಡಲಿಕ್ಕೆ ಬಂದವರಿಗೆ ರಾಜಸಭೆ ಯಲ್ಲಿಸನ್ಮಾನವು; ಅವರ ಕಾರ್ಯಕ್ಕೆ ಬೇಕಾದ ಸೌಲಭ್ಯಗಳು! ಈ ವಿಶ್ವಬಂಧುತ್ವವು ಜಗತ್ತಿನ ಇತಿಹಾಸದಲ್ಲಿಯೆ ಅಪೂರ್ವವಾಗಿಲ್ಲವೆ? ಇಂತಹ ಉನ್ನತವಾದ ಧಾರ್ಮಿಕ ಜೀವನದ ಪರಮಾವಧಿಯನ್ನು ಬೇರೆಡೆ ಎಲ್ಲಿಯಾದರೂ ಕಾಣಬಹುದೇ?

ಬೌದ್ಧಿಕ ಜೀವನವು ಜನಾಂಗದ ನಾಗರಿಕತೆಯನ್ನು ನಿರ್ಧರಿಸಲು ಸಹಾಯಕವಾದ ಹಿರಿದಾದ ಅಳತೆಗೋಲಾಗಿದೆ. ಬೌದ್ಧಿಕ ಜೀವನವನ್ನು ಕುರಿತು ಆಲೋಚಿಸುವಾಗ ಈ ಜೀವನದ ಮೂರು ದೃಶ್ಯ ಪರಿಣಾಮಗಳಾದ ಭಾಷೆ, ವಿದ್ಯೆ, ಸಾಹಿತ್ಯ ಇವುಗಳನ್ನು ಕುರಿತು ವಿಚಾರಮಾಡಬೇಕಾಗುತ್ತದೆ.

ವಿಜಯನಗರಸಾಮ್ರಾಜ್ಯಯುಗವು ಸಂಸ್ಕೃತಭಾಷೆಯ ಇತಿಹಾಸದಲ್ಲಿಯೂ ದೇಶ್ಯಭಾಷೆಗಳ ಇತಿಹಾಸದಲ್ಲಿಯೂ ಅಪೂರ್ವವಾಗಿದೆ. ಈ ಕಾಲದಲ್ಲಿ ಸಂಸ್ಕೃತಭಾಷೆಯು ಪುನರುಜ್ಜೀವನವಾಯಿತು. ಅದು ಸಮ್ರಾಜರ, ರಾಜರ ಸಾಮಂತರ ಪೋಷಣೆಯಲ್ಲಿ ಅತ್ಯಂತ ಗೌರವದ ಸ್ಥಾನದಲ್ಲಿ ವಿರಾಜಿಸಿತು. ಈ ಕಾಲದಲ್ಲಿ ದೇಶಭಾಷೆಗಳೂ ಹೆಚ್ಚಾಗಿ ಉತ್ಕರ್ಷವನ್ನು ಹೊಂದಿದುವು. ವಿಜಯನಗರದ ಯುಗವು ಸಂಸ್ಕೃತ ಹಾಗೂ ದೇಶ್ಯ ಈ ಎರಡೂ ಭಾಷಾಸಂತತಿಗಳ ಸಮಾನವಾದ ಪ್ರಾಧಾನ್ಯದ ಯುಗವೆಂದು ಹೇಳಬಹುದು.

ಈ ಕಾಲದಲ್ಲಿ ದೇಶಭಾಷೆಗಳು ಸಂಸ್ಕೃತಕ್ಕೆ ಸರಿದೊರೆಯಾಗಿ ಧರ್ಮಸ್ಥಾನಗಳಲ್ಲಿಯೂ ರಾಜಮಂದಿರಗಳಲ್ಲಿಯೂ ಪ್ರಜಾವ್ಯವಹಾರಗಳಲ್ಲಿಯೂ ಮನ್ನಣೆಯನ್ನು ಪಡೆದುವು. ಸಂಸ್ಕೃತದ ಪ್ರತಿಷ್ಠೆಯನ್ನು ಆಗಾಗ ಹಿಂದೂಡಿದುವು. ಕನ್ನಡಭಾಷೆಯು ಈ ಕಾಲದಲ್ಲಿ ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆಯಿತು. ಧಾರ್ಮಿಕ ಮೊದಲಾದ ಕೆಲವು ಕ್ಷೇತ್ರಗಳಲ್ಲಿ ಸಂಸ್ಕೃತಕ್ಕೆ ಅಗ್ರಪೂಜೆಯನ್ನು ಸಲ್ಲಿಸುತ್ತಿರುವಾಗಲೂ ಜನತಾ ಹೃದಯದ ಅಂತರಾಳದಲ್ಲಿ ಅವಿತುಕೊಂಡು ಜನಮನಗಳನ್ನು ಒಲಿಸಿ ನಲಿಸುವ ಮೋಹದ ಅರಸಿಯು ಕನ್ನಡವೆ ಆಗಿರುವಳು ಎಂಬುದನ್ನು

ಸಂಸ್ಕೃತಾಭಿಮಾನಿಗಳೂ ಪೂರ್ಣವಾಗಿ ಅರಿತಿದ್ದರು. ಈ ಕಾಲದಲ್ಲಿ ಕನ್ನಡದಲ್ಲಿ ಅಸಂಖ್ಯವಾಗಿ ಶಿಲಾಶಾಸನಗಳು ಹುಟ್ಟಿದುವು. ಸಾಮಾನ್ಯವಾಗಿ ಸಂಸ್ಕೃತಕ್ಕೆಂದೇ ಮೀಸಲಾಗಿರಿಸಿದುವುಗಳಾದ ತಾಮ್ರಶಾಸನಗಳಲ್ಲಿಯೂ ಕನ್ನಡವು ತನ್ನ ಪ್ರಭಾವವನ್ನು ಬೀರಿತು. ಪೂರ್ಣಕನ್ನಡ ಹಾಗೂ ಸಂಸ್ಕೃ-ಕನ್ನಡಗಳಲ್ಲಿ ಬರೆಯಲ್ಪಟ್ಟ ಅನೇಕ ಶಾಸನಗಳು ದೊರೆಯುತ್ತವೆ. ಈ ಸಂದರ್ಭದಲ್ಲಿ ಮನೋರಂಜಕವಾದ ಒಂದು ಉದಾಹರಣೆಯನ್ನು ಹೇಳಬಹುದು. ಸಂಸ್ಕೃತದಿಂದ ಆರಂಭವಾದ ಈ ಶಾಸನದ ಕೆಲಭಾಗವು ಮುಗಿದ ಮೇಲೆ ಮುಂದೆ ಹೀಗೆ ವಾಕ್ಯವಿದೆ :

"अत. परं अस्य विशेषः सर्वजन विज्ञानाय कर्नाटकभाषया लिख्यते" (ಇದರ ಮುಂದಿನ ವಿವರವು ಎಲ್ಲ ಜನರ ತಿಳವಳಿಕೆಗಾಗಿ ಕನ್ನಡದಲ್ಲಿ ಬರೆಯಲಾಗುವುದು; ಬೇಲೂರು. ೭೫).

ವಿಜಯನಗರಸಾಮ್ರಾಜ್ಯವು ಅನೇಕ ವಿದ್ಯೆಗಳ, ವಿದ್ಯಾಸ್ಥಾನಗಳ ನೆಲೆವೀಡೆಂದು ವಿಖ್ಯಾತ್ಯವಾಗಿದ್ದಿತು. ಸಮ್ರಾಜರ,ಸಾಮಂತರ, ಪ್ರಾಂತಾಧಿಕಾರಿಗಳ ರಾಜಧಾನಿಗಳೂ ಆಸ್ಥಾನಗಳೂ ಪಂಡಿತರ, ವಿದ್ಯಾವಂತರ ಕಲಾವಿದರ ನಿರಂತರದ ಸಂಮೇಲನಾಲಯಗಳಾಗಿದ್ದುವು.

ಧೂಳಾಕ್ಷರಗಳನ್ನು ಕಲಿಸುವ ಹಳ್ಳಿಯ ಶಾಲೆಗಳಿಂದ ಉನ್ನತವಾದ ಶಿಕ್ಷಣವನ್ನು ಕೊಡುವ ವಿದ್ಯಾಪೀಠದ ವರೆಗೆ ವಿವಿಧರೀತಿಯ, ಮತ್ತು ಅನೇಕ ತರಗತಿಯ ವಿದ್ಯಾಸಂಸ್ಥೆಗಳು ವಿಜಯನಗರಕಾಲವಲ್ಲಿ ಬಾಳಿ ಬೆಳೆಯುತ್ತಿದ್ದುವು. ಇವುಗಳಲ್ಲಿ ಸಂಸ್ಕೃತ, ಕನ್ನಡ ಮೊದಲಾದ ಭಾಷೆಗಳ, ಕಾವ್ಯ, ಶಾಸ್ತ್ರ, ಸಾಹಿತ್ಯ, ವೇದಾಂತ ಮೊದಲಾದ ವಿಷಯಗಳ ಅಧ್ಯಯನವು ನಡೆಯುತ್ತಿದ್ದಿತು. ಈ ಸಂಸ್ಥೆಗಳು, ಸಮ್ರಾಜರು, ರಾಜರು, ಸಾಮಂತರು, ನಾಯಕರು, ಧನಿಕರು ಮೊದಲಾದವರ ಅಸಂಖ್ಯವಾದ ದಾನಜೀವನಗಳಿಂದ ಪೋಷಿತವಾಗುತ್ತಿದ್ದುವು.

ಸಾಮಾನ್ಯವಾಗಿ ಪ್ರತಿಯೊಂದು ಹಳ್ಳಿಗೆ ಒಂದು ಪ್ರಾಥಮಿಕ ಶಾಲೆಯು ಇರುತ್ತಿದ್ದಿತು.ದೊಡ್ಡ ಊರುಗಳಲ್ಲಿಯೂ ಪಟ್ಟಣಗಳಲ್ಲಿಯೂ ಉಚ್ಚತರಗತಿಯ ಶಿಕ್ಷಣದ ವ್ಯವಸ್ಥೆಯು ಇದ್ದಿತು. ಧರ್ಮಪೀಠಗಳು,

ಮಠಗಳು, ನಾಮಾಂಕಿತ ದೇವಾಲಯಗಳು ಇವುಗಳಲ್ಲಿ ಧಾರ್ಮಿಕ ಶಿಕ್ಷಣವಲ್ಲದೆ ಲೌಕಿಕವಿದ್ಯೆಗಳ ವ್ಯಾಸಂಗವೂ ನಡೆಯುತ್ತಿದ್ದಿತು. ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳು ಕೇವಲ ಜ್ಞಾನ ಸಂವರ್ಧನೆಗಾಗಿ ಏರ್ಪಟ್ಟ ಸ್ವತಂತ್ರವಾದ ಪ್ರಾದೇಶಿಕ ವಿದ್ಯಾನಿಲಯಗಳಾಗಿದ್ದುವು. ಇವುಗಳಲ್ಲಿ ಸಾಮಾನ್ಯವಾಗಿ ವಿದ್ಯಾದಾನದೊಂದಿಗೆ ವಿದ್ಯಾರ್ಥಿಗಳಿಗೆ ಆಹಾರಾದಿ ಸೌಕರ್ಯಗಳೂ ಏರ್ಪಟ್ಟಿರುತ್ತಿದ್ದುವು. ಇವುಗಳನ್ನು ಈಗಣ ಛಾತ್ರಾಲಯಗಳಿಗೆ (Residential Universities) ಹೋಲಿಸಬಹುದು. ಇವುಗಳೆಲ್ಲವು ಕಲಿಸುವ ಮತ್ತು ಪರೀಕ್ಷಿಸುವ ಸಂಘಗಳು (teaching & examining bodies) ಆಗಿದ್ದುವು.

ವಿಜಯನಗರದಂತಹ ರಾಜಧಾನೀ ಸ್ಥಲಗಳು ವಿದ್ಯೆಯ ಮಹಾ ಕೇಂದ್ರಗಳಾಗಿದ್ದು, ಇವುಗಳ ಲಾಭವನ್ನು ಪಡೆಯಲೋಸುಗ ದೇಶ ವಿದೇಶಗಳ ಜ್ಞಾನಪಿಪಾಸುಗಳು ಐತರುತ್ತಿದ್ದರು. ವಿಜಯನಗರವು ಅಖಿಲ ಸಾಮ್ರಾಜ್ಯದ ಪ್ರಧಾನ ವಿದ್ಯಾನಿಲಯವಾಗಿದ್ದಿತು. ಸೋಮನಾಥ ಕವಿಯು ಹೇಳುವಂತೆ, ಕೃಷ್ಣದೇವರಾಯನ ಕಾಲದಲ್ಲಿ ವ್ಯಾಸಯೋಗಿಗಳು ಈ ವಿಜಯನಗರದ ಸರಸ್ವತೀಪೀಠದ ಅಧಿಪತಿಗಳಾಗಿದ್ದರು (Chancellor of the Imperial University of the Vijayanagar Empire).[೧]

ವಿಜಯನಗರ ಯುಗದಲ್ಲಿ ನಿರ್ಮಾಣವಾದ ಸಾಹಿತ್ಯಸೃಷ್ಟಿಯು ಅಪಾರವಾಗಿದೆ. ಸಂಸ್ಕೃತದಲ್ಲಿಯೂ ದೇಶ್ಯಭಾಷೆಗಳಲ್ಲಿಯೂ ನಾಮಾಂಕಿತವಾದ ಸಾವಿರಾರು ಗ್ರಂಥಗಳು ಹುಟ್ಟಿದುವು. ಈ ಸಾಹಿತ್ಯರಾಶಿಯನ್ನು ಸರಿದೂಗುವಂತಹ ಸಾಹಿತ್ಯವು ಇನ್ನಾವ ಸಾಮ್ರಾಜ್ಯಕಾಲದಲ್ಲಿಯೂ ಪ್ರಕಟವಾಗಲಿಲ್ಲವೆಂದು ಧೈರ್ಯವಾಗಿ ಹೇಳಬಹುದು. ವಿವಿಧತೆಯಲ್ಲಿಯೂ ವಿಪುಲತೆಯಲ್ಲಿಯೂ ಈ ಸಾಹಿತ್ಯಪ್ರಪಂಚವು ಅನ್ಯಾದೃಶವಾಗಿದೆ. ಧಾರ್ಮಿಕ ಮತ್ತು ಲೌಕಿಕ ಈ ಎರಡೂ ಬಗೆಯ ಸಾಹಿತ್ಯವು ವಿಸ್ತಾರಗೊಂಡಿತು. ಕಾವ್ಯ, ವೇದಾಂತ, ವ್ಯಾಕರಣ, ಅಲಂಕಾರ,

೧ ವ್ಯಾಸ. ಪ್ರ. ಪು. ೬೩.

ಸಂಗೀತ ಮೊದಲಾದ ಶಾಸ್ತ್ರೀಯ ಗ್ರಂಥರಚನೆಯು ವಿಶೇಷವಾಗಿ ಪುರಸ್ಕಾರ ಹೊಂದಿತು.

ಸಂಸ್ಕೃತದಲ್ಲಿ ಟೀಕಾತ್ಮಕವೂ ಸ್ಥಲ-ದೇವತಾದಿಗಳ ಮಾಹಾತ್ಮ್ಯವನ್ನು ವಿವರಿಸುವ ಪುರಾಣಾತ್ಮಕವೂ ಆದ ಸಾಹಿತ್ಯಸಂಪ್ರದಾಯಗಳು ಹೆಚ್ಚಾಗಿ ಪ್ರಚುರಗೊಂಡುವು. ಕನ್ನಡದಲ್ಲಿ ಈ ಎರಡು ಬಗೆಯ ಸಂಪ್ರದಾಯಗಳಲ್ಲದೆ ವಚನಕಾರ ಮತ್ತು ದಾಸಕೂಟದ ಸಂಪ್ರದಾಯಗಳೂ ಊರ್ಜಿತವಾದುವು. ಸಮ್ರಾಜರು, ರಾಜರು, ರಾಜವಂಶದವರು, ಅಧಿಕಾರಿಗಳು, ನಾಯಕರು ಈ ಸಾಹಿತ್ಯವಿಕಾಸಕ್ಕೆ ಪ್ರಾಮುಖ್ಯವಾಗಿ ಪ್ರೇರಕರೂ ಅದರ ಪೋಷಕರೂ ಆಗುವುದಲ್ಲದೆ, ಸಾಹಿತ್ಯ ನಿರ್ಮಿತಿಯ ಕಾರ್ಯಕ್ಕೆ ವಿಶೇಷ ಪ್ರಮಾಣದಲ್ಲಿ ಪ್ರತ್ಯಕ್ಷವಾಗಿ ಸಹಾಯವಾದುದು ವಿಜಯನಗರದ ಸಾಹಿತ್ಯಲೋಕಕ್ಕೆ ಅತ್ಯಂತ ಗೌರವಾಸ್ಪದವಾದ ವಿಷಯವಾಗಿದೆ. ಈ ಕಾರ್ಯದಲ್ಲಿ ಸ್ತ್ರೀಯರೂ ಹೆಚ್ಚಾಗಿ ನೆರವಾದುದು ಅಭಿನಂದನೀಯವಾದ ಇನ್ನೊಂದು ಸಂನಿವೇಶವಾಗಿದೆ.

ಈ ಸಾಹಿತ್ಯದ ಕೆಲವು ಕೃತಿಗಳು ವಿಶ್ವೋಪಕಾರಕವಾಗಬಲ್ಲ ನಿರಂತರ ಸತ್ತ್ವಪೂರ್ಣವಾದ ಕೃತಿಗಳಾಗಿವೆ ಸಾಯಣಾಚಾರ್ಯರ ವೇದಭಾಷ್ಯವು ಇಂತಹವುಗಳಲ್ಲಿ ಅಗ್ರಗಣ್ಯವಾಗಿದೆ. ಕುಮಾರವ್ಯಾಸನ ಕನ್ನಡ ಭಾರತವು, ದಾಸರ ಕೀರ್ತನೆಗಳು, ವೀರಶೈವ ವಚನಗಳು, ಪುರಾಣಗಳು, ಜೈನ ಕಾವ್ಯಗಳು, ಆ ಆ ಮತಸಂಪ್ರದಾಯಗಳ ತತ್ತ್ವಜ್ಞಾನದ ಗ್ರಂಥಗಳು, ಇವುಗಳಲ್ಲಿಯ ಎಷ್ಟೋ ಭಾಗಗಳು ಪ್ರಪಂಚದ ಚಿರಂತನ ಸಾಹಿತ್ಯಕ್ಕೆ ಸೇರಲರ್ಹವಾಗಿವೆ.

ವಿಜಯನಗರದ ಕಲಾಜೀವನವು ಉನ್ನತವಾಗಿದೆ. ವಿಜಯನಗರದಂತಹ ಕಲಾಪೂರ್ಣವಾದ ನಗರಿಯನ್ನು ನಿರ್ಮಿಸಿದ ವಾಸ್ತುಕಲೆಯು ಈ ಮೊದಲಾದ ಕೃತಿಗಳಿಂದ ತನ್ನ ಪರಿಣತದಶೆಯನ್ನು ಸೂಚಿಸುವಂತಹದಾಗಿದೆ. ಈ ಕಾಲದ ಶಿಲ್ಪಕಲೆಯಲ್ಲಿ ಒಂದು ಹೊಸಮಾರ್ಗವು ಗೋಚರವಾಗುವುದು. ವಿಶಾಲತೆ, ಭವ್ಯತೆ, ಮತ್ತು ಉತ್ತುಂಗತೆ ಇವುಗಳು

ಈ ಶಿಲ್ಪಕಲೆಯ ವೈಶಿಷ್ಟ್ಯವಾಗಿವೆ. ವಿಜಯನಗರದಲ್ಲಿಯ ವಿಜಯವಿಠ್ಠಲ ಮೊದಲಾದ ಭವ್ಯವೂ ರಮಣೀಯವೂ ಆದ ದೇವಾಲಯಗಳು, ಈಗಲೂ ರಾಮೇಶ್ವರದ ವರೆಗೆ ಅಲ್ಲಲ್ಲಿ ತಲೆಯೆತ್ತಿಕೊಂಡು ಬಾಳಿರುವ ಅನೇಕ ಮಂದಿರಗಳು, ದೇವಾಲಯಗಳು ವಿಜಯನಗರದ ಶಿಲ್ಪಕಲಾಪ್ರೌಢಿಮೆಗೆ ಅಂಶತಃ ಸಾಕ್ಷಿಯಾಗಿವೆ. ಶೃಂಗೇರಿಯ ವಿದ್ಯಾಶಂಕರ ದೇವಸ್ಥಾನವು ಈ ಕಾಲದ ಶಿಲ್ಪಕಲೆಯ ಅಪೂರ್ವವಾದ ಒಂದು ಅಪತ್ಯವಾಗಿದೆ.

ಚಿತ್ರಕಲೆಯ ಸಾಕಷ್ಟು ಅವಶೇಷಗಳು ದೊರೆತಿಲ್ಲವಾದರೂ ಈ ಕಲೆಯು ಈ ಕಾಲದಲ್ಲಿ ಬಗೆಗೊಂಡಿತ್ತು ಎಂದು ಹೇಳಲಿಕ್ಕೆ ನಿದರ್ಶನ ಗಳಿವೆ. ವಿಜಯನಗರದ ಚಿತ್ರಕಾರರ ಬಣ್ಣಗಾರಿಕೆಯು ಅಸಾಮಾನ್ಯ ವಾಗಿದ್ದಿತೆಂದು ಪೇಸನು ಹೇಳುವನು.

ಸಂಗೀತ ಕಲೆಯು ಹೆಚ್ಚಾಗಿ ಅಭಿವೃದ್ಧಿಯನ್ನು ಪಡೆಯಿತು. ರಾಜಾಸ್ಥಾನಗಳೂ ಜನಗೋಷ್ಠಿಗಳೂ ಈ ಕಲೆಯನ್ನು ಎತ್ತಿಕೊಂಡು ಲಾಲಿಸಿ ಪಾಲಿಸಿದುವು. ಕೃಷ್ಣದೇವರಾಯ, ರಾಮರಾಯ ಮೊದಲಾದವರಿಂದ ಈ ಕಲೆಯು ವಿಶೇಷವಾದ ಪ್ರೋತ್ಸಾಹವನ್ನು ಪಡೆಯಿತು. ಈ ಕಲೆಯನ್ನು ಕುರಿತು ಪ್ರಮಾಣಭೂತವಾದ ಶಾಸ್ತ್ರೀಯ ಗ್ರಂಥಗಳು ಹುಟ್ಟಿದುವು: ಕಲ್ಲಿನಾಥಾರ್ಯನ ಸಂಗೀತರತ್ನಾಕರ ಟೀಕೆ, ಗೋಪ ತಿಪ್ಪನ ತಾಳದೀಪಿಕಾ, ರಾಮಯಮಾತ್ಯನ ಸ್ವರಮೇಲಕಲಾನಿಧಿ, ರಘು ನಾಥನಾಯಕನ ಸಂಗೀತಸುಧಾ ಇ. ಸಂಗೀತದ ಜೊತೆಗೆ ನೃತ್ಯ ಕಲೆಯೂ ಪೋಷಣೆಗೊಂಡಿತು.

ಈ ಕಾಲದ ಸಂಗೀತಗೋಷ್ಠಿಯ ಒಂದು ಪ್ರಸಂಗವು ಉದಾಹ ರಣೆಯಾಗಿ ಉಲ್ಲೇಖನಾರ್ಹವಾಗಿದೆ. ಸಂಗೀತಾದಿಕಲಾವಿಶಾರದ ನಾದ ತಂಜಾವೂರ ರಘುನಾಥ ನಾಯಕನು ಒಮ್ಮೆ ಸಂಗೀತಸಭೆ ಯನ್ನು ನೆರೆಸಿದನು. ಕಾವ್ಯಸಂಗೀತಾದಿಕಲಾಪ್ರವೀಣೆಯರಾದ ಅನೇಕ ಮಹಿಳೆಯರು ಇದರಲ್ಲಿ ಭಾಗಿಯಾಗಿದ್ದರು. ಈ ಕಲಾವತಿ ಯರು ಕುಲವತಿಯರಾಗಿದ್ದರು. ಅವರು ಚಿತ್ರ, ಬಂಧ, ಗರ್ಭ, ಆಶು ಈ ನಾಲ್ಕುಗೆಯ ಕಾವ್ಯರಚನೆಯಲ್ಲಿ ಕುಶಲರಾಗಿದ್ದರು. ಕರ್ನಾಟಕ, ದೇಶ

ಈ ಉಭಯವಿಧ ಸಂಗೀತಶಾಸ್ತ್ರದ ಮರ್ಮಗಳನ್ನು ಅರಿತವರಾಗಿದ್ದರು. ಇವರು ತಮ್ಮ ಇನಿಗೊರಳಿನಿಂದ ಸವಿಯಾದ ಹಾಡುಗಳನ್ನು ಹಾಡ ಬಲ್ಲರು. ವೀಣೆಯನ್ನು, ರಾವಣಹಸ್ತ ಮುಂತಾದ ವಾದ್ಯಗಳನ್ನು ಬಾರಿಸಬಲ್ಲರು.

ನಾಯಕನು ಇವರ ಕಲಾಗಾರಿಕೆಯನ್ನು ವಿಮರ್ಶಿಸಿದನು. ಕೆಲರು ಹಾಡಿ ತೋರಿಸಿದರು. ಕೆಲರು ಕುಣಿದು ತೋರಿಸಿದರು. ಇವರು ಹಾಡಿದ ರಾಗಗಳಲ್ಲಿ ಕೆಲವು ನಾಯಕನು ರಚಿಸಿದಂತಹವು ಆಗಿದ್ದುವು. ಅವುಗಳಲ್ಲಿ ಜಯಮಂಗಲ, ಸಿಂಹಲೀಲಾ, ಜಯನಿಸ್ಸಾರಣ ಎಂಬುವು ಪ್ರಮುಖವಾದುವು. ನಾಯಕನು ಕಲ್ಪಿಸಿದ ಹೊಸತಾಳಗಳನ್ನು ಇವರು ಮೇಳಯಿಸಿ ತೋರಿಸಿದರು. ಅವುಗಳಲ್ಲಿ ರತಿಲೀಲಾ, ತುರಂಗಲೀಲಾ, ರಂಗಾಭರಣ, ಅನಂಗಪರಿಕ್ರಮಣ, ಅಭಿನಂದನ, ನಂದನಂದನ, ಅಭಿಮಾಲಾ ಎಂಬುವು ಕೆಲವು. ಇವರ ಕುಣಿತಗಳಲ್ಲಿ ರಘುನಾಥವಿಲಾಸ ಎಂಬುದು ಒಂದು ನೃತ್ಯಪ್ರಕಾರವಾಗಿದ್ದಿತು. ನಾಯಕನು ಈ ಗುಣವತಿಯರ ಈ ಮೊದಲಾದ ಗುಣಗಳನ್ನು ಪರೀಕ್ಷಿಸಿ ಕನಕಾಭಿಷೇಕ ಮೊದಲಾದ ಉಚಿತವಾದ ಸನ್ಮಾನಗಳನ್ನು ಸಲ್ಲಿಸಿದನು.[೨]

ಸಂಸ್ಕೃತ ಮತ್ತು ಕನ್ನಡದಲ್ಲಿ ಅನೇಕ ನಾಟಕಗಳು ಬರೆಯಲ್ಪಟ್ಟುವು, ಅಭಿನಯಿಸಲ್ಪಟ್ಟುವು. ಸಂಸ್ಕೃತ ನಾಟಕಗಳು ಸರ್ವಮಾನ್ಯವಾದ ಶಾಕುಂತಲಾದಿ ಮಹಾ ನಾಟಕಗಳ ಮಾರ್ಗವನ್ನು ಅನುಸರಿಸಿದುವು. ಕನ್ನಡ ನಾಟಕಗಳು ಹೆಚ್ಚಾಗಿ ಪ್ರಹಸನ, ಯಕ್ಷಗಾನ ಮುಂತಾದ ಸ್ವರೂಪದವು ಆಗಿದ್ದು, ಜಾತ್ರೆ, ಉತ್ಸವ, ಹಬ್ಬ ಮೊದಲಾದ ಸಮಾರಂಭಗಳಲ್ಲಿ ಪ್ರಯೋಗಿಸಲ್ಪಡುತ್ತಿದ್ದುವಾಗಿ ತೋರುತ್ತದೆ. ವಿಜಯನಗರ ಮೊದಲಾದ ರಾಜಧಾನಿಗಳಲ್ಲಿಯೂ ತಂಜಾವೂರು, ಇಕ್ಕೇರಿ ಮುಂತಾದ ಪಟ್ಟಣಗಳಲ್ಲಿಯೂ ನಾಟ್ಯಗೃಹಗಳು ಇದ್ದುವಾಗಿ ತಿಳಿಯುತ್ತದೆ. ಪುರುಷರಂತೆ ಸ್ತ್ರೀಯರೂ ರಂಗಭೂಮಿಯನ್ನು

೨. Sources p. 291.

ಅಲಂಕರಿಸುವವರಾಗಿದ್ದರು. ಕರ್ನಾಟಕವು ನಾಟ್ಯಕಲೆಯಲ್ಲಿ ಮುಂದುವರಿದಿದ್ದು ಅದರ ಕೀರ್ತಿಯು ಗುಜರಾತದಂತಹ ದೂರದ ದೇಶಗಳಲ್ಲಿ ಹಬ್ಬಿತ್ತು ಎಂದು ಗಂಗಾದಾಸಪ್ರತಾಪವಿಲಾಸಂ ಎಂಬ ಸಂಸ್ಕೃತ ಐತಿಹಾಸಿಕ ನಾಟಕದಿಂದ ವ್ಯಕ್ತವಾಗುತ್ತದೆ. ಪಾವಾಚಲ ಸಂಸ್ಥಾನಾಧಿಪತಿಯಾದ ಗಂಗಾದಾಸನ ಆಸ್ಥಾನದಲ್ಲಿ ಈ ನಾಟಕವನ್ನು ಅಭಿನಯಿಸಲು ವಿಜಯನಗರದ ಮಲ್ಲಿಕಾರ್ಜುನರಾಯನ ಆಸ್ಥಾನದ ಒಬ್ಬ ನಟನು ಅಲ್ಲಿಗೆ ಹೋದನೆಂದು ಈ ನಾಟಕದಲ್ಲಿ ಹೇಳಲಾಗಿದೆ.[೩]

ವಿದ್ಯೆ-ಕಲೆಗಳಲ್ಲಿ ಉಚ್ಚತರಗತಿಯ ಶಿಕ್ಷಣವನ್ನು ಪಡೆದು ಜೀವನದ ವಿವಿಧ ಮಾರ್ಗಗಳಲ್ಲಿ ಮುಂದುವರಿಯಲು ಸ್ತ್ರೀಯರಿಗೆ ಸಾಮಾಜಿಕ-ನೈತಿಕ ಪ್ರತಿಬಂಧಗಳು ಇರಲಿಲ್ಲವೆಂದು ತೋರುತ್ತದೆ. ಕೃಷ್ಣ-ದೇವರಾಯನ ಅರಮನೆಯಲ್ಲಿ ನಾಲ್ಕುಸಾವಿರ ಸ್ತ್ರೀಸೇವಿಕೆಯರಿದ್ದು, ಅವರು ನ್ಯಾಯದಾನ, ರಕ್ಷಾವಿಧಾನ, ವೃತ್ತಾಂತಲೇಖನ, ಲೆಕ್ಕಪತ್ರ ಮುಂತಾದ ಕೆಲಸಗಳನ್ನು ಯಶಸ್ವಿಯಾಗಿ ಸಾಗಿಸುತ್ತಿದ್ದರೆಂದು ನ್ಯೂನಿಝನು ಹೇಳುತ್ತಾನೆ. ಕಾವ್ಯ, ಸಂಗೀತ, ನೃತ್ಯ, ಶಿಲ್ಪ ಮುಂತಾದ ಲಲಿತಕಲೆಗಳಲ್ಲಿ ಕುಶಲರಾದ ಅನೇಕ ಲಲನೆಯರು ದೇಶದಲ್ಲಿ ಇದ್ದರು. ವೈದ್ಯಕ, ಮಂತ್ರಶಾಸ್ತ್ರ, ಜ್ಯೋತಿಷ ಮೊದಲಾದ ಗಹನಶಾಸ್ತ್ರಗಳಲ್ಲಿ ಬಲ್ಲಿದರಾದ ನಾರಿಯರ ಕೆಲವು ಉದಾಹರಣೆಗಳು ದೊರೆಯುತ್ತವೆ. ರಾಜಕಾರಣ, ಮಲ್ಲವಿದ್ಯೆ, ಯುದ್ಧಕಲೆಯಂತಹ ಕಠೋರ ಕ್ಷೇತ್ರಗಳಲ್ಲಿ ಕಾಲಿಟ್ಟ ಹೆಂಗಳೆಯರೂ ಅಲ್ಲಲ್ಲಿ ಹೊಳೆಯುತ್ತಿರುವರು.

ಸುಸಂಸ್ಕೃತ ಜನಾಂಗದಲ್ಲಿ ಪ್ರಕಟವಾಗಬೇಕಾದ ಧ್ಯೇಯನಿಷ್ಠೆಯೂ ಅಂಗೀಕೃತ ಕಾರ್ಯದಲ್ಲಿ ಆತ್ಮಾರ್ಪಣೆಯೂ ವಿಜಯನಗರದ ಜನತೆಯಲ್ಲಿ ವಿಶೇಷಪ್ರಮಾಣದಲ್ಲಿ ಅಭಿವ್ಯಕ್ತವಾಗಿದೆ. ಧರ್ಮಕ್ಕಾಗಿ, ದೇಶಕ್ಕಾಗಿ, ಸ್ವಾಮಿಕಾರ್ಯಕ್ಕಾಗಿ ಸರ್ವಸ್ವವನ್ನು ಸೂರೆಮಾಡಿ ತಮ್ಮ ಪ್ರಾಣಗಳ ಬಲಿದಾನವನ್ನು ನೀಡಿದ, ಜ್ಞಾತಾಜ್ಞಾತ ವೀರರ, ಕರ್ಮವೀರರ, ಮಹಾವೀರರ ಸ್ಫೂರ್ತಿಯಿಂದಲೆ ವಿಜಯನಗರವು

೩. Ibid. p. 66.

ಊರ್ಜಿತವಾಯಿತು. ಇಂತಹರ ಸ್ವಾರ್ಥತ್ಯಾಗದ ಪುಣ್ಯಪ್ರಭಾವದಿಂದಲೆ ವಿಜಯನಗರವು ಜಯಶಾಲಿಯಾಯಿತು.

ವಿಜಯನಗರಸಾಮ್ರಾಜ್ಯದ ಉಜ್ವಲವಾದ ಚರಿತ್ರೆಯನ್ನು ಪರಿಶೀಲಿಸಿದುದಾಯಿತು. ವಿಜಯನಗರಸಾಮ್ರಾಜ್ಯವು ಕಟ್ಟಿದ ಉನ್ನತವಾದ ಸಂಸ್ಕೃತಿಯನ್ನು ಉದಾತ್ತವಾದ ನಾಗರಿಕತೆಯನ್ನು ಅವಲೋಕಿಸಿದುದಾಯಿತು. ವಿಜಯನಗರದ ಹಿಂದೆ ಒಂದು ಸಾವಿರ ವರ್ಷಗಳ ವರೆಗೆ ಕನ್ನಡಿಗರ ಜೀವನಪ್ರವಾಹವು ಹರಿದುಬಂದಿತು. ವಿಜಯನಗರದಲ್ಲಿ ಪುಟನೆಗೆದು ಮೂರುನೂರು ವರ್ಷಗಳ ವರೆಗೆ ಸೂಸಿ ಹರಿಯಿತು. ವಿಜಯನಗರವು ನಾಮಶೇಷವಾಗಿ ಮೂರುನೂರು ವರ್ಷಗಳಾಗುತ್ತಿರುವ ಈಚೆಯ ಕಾಲದಲ್ಲಿಯೂ ಹರಿಯುತ್ತಲಿದೆ. ಆದರೆ ಈ ಕನ್ನಡಿಗರ ಈ ಜೀವನವು ಆ ಕನ್ನಡಿಗರ ಆ ಜೀವನಕ್ಕೆ ಒಪ್ಪುವಂತಹದಾಗಿದೆಯೆ? ಹಿಂದಿನ ಕರ್ನಾಟಕವು, ಅಂದಿನ ಕರ್ನಾಟಕವು, ಇಂದಿನ ಕರ್ನಾಟಕವು ಇವುಗಳಲ್ಲಿ ಯಾವ ಬಗೆಯ ಸಮರಸತೆಯು ಕಾಣಬರುತ್ತದೆ? ಅಂದಿನ ಕರ್ನಾಟಕವು ಇಂದಿಗೆ ಮುಂದುವರಿದಿದೆಯೆ? ಹಿಂದುಳಿದಿದೆಯೆ?

ಅಂದಿನ ನವಯುಗದಲ್ಲಿ ವಿಜಯನಗರದ ವಿಜಯಿಯಾದ ಜೀವನವನ್ನು ಕಟ್ಟಿದ ಕನ್ನಡಿಗರು, ಇಂದಿನ ನವಯುಗದಲ್ಲಿಯೂ ಜಯಶೀಲವಾದ ಜೀವನವನ್ನು ನಿರ್ಮಿಸಲಿ.

ಕನ್ನಡನಾಡಿನ ವಿಜಯದುಂದುಭಿಯು ಎಲ್ಲೆಲ್ಲಿಯೂ ಮೊಳಗಲಿ.

**ಭದ್ರಂ ಶುಭಂ ಮಂಗಲಂ**

———

# ದೀರ್ಘ ಟಿಪ್ಪಣಿಗಳು

**ವಿ.=ವಿಲಾಸ. ಅ. ಟಿ.=ಅಡಿಟಿಪ್ಪಣಿ**

## ೧—ವಿ. ೧, ಅ. ಟಿ. ೫, [ಪು. ೩]

'ಲತ್ತಲೂರ ಪುರವರಾಧೀಶ್ವರ' ಎಂಬ ರಾಷ್ಟ್ರಕೂಟರ ಬಿರುದು ಅವರ ಶಾಸನಗಳಲ್ಲಿ ಬರುವುದು. ಹೀಗೆ ತಮ್ಮ ಮೂಲಸ್ಥಲದ ಸ್ಮಾರಕವಾದ ಬಿರುದನ್ನು ಧರಿಸುವುದು ಆಗಿನ ರಾಜರ ಸಂಪ್ರದಾಯವಾಗಿದ್ದಿತು. ಈ ಲತ್ತಲೂರು ನಿಜಾಮರಾಜ್ಯದ, ಬಿದರಜಿಲ್ಲೆಯೊಳಗಿನ ಲಾತೂರು; ಎಂದು ಶ್ರೀ. ಆಳತೇಕರರ ಊಹೆಯು (A. R. P. 23). ಈಚೆಗೆ ಲಾತೂರಲ್ಲಿ ದೊರೆತ ಶಿಲಾಲೇಖನದ ಮೇಲಿಂದ ಇದೇ ಮಾತನ್ನು ಶ್ರೀ. ಖರೆಯವರು ಪುಷ್ಟೀಕರಿಸಿರುವರು.

## ೨—ವಿ. ೩, ಅ. ಟಿ. ೧೧, [ಪು. ೧೭]

ಈ ಸಂದರ್ಭದಲ್ಲಿ ಕೆಳಗಿನ ಸಂಗತಿಗಳು ಮಹತ್ವದುವಾಗಿವೆ.

ಹರಿಹರನ ನೆಲೆವೀಡುಗಳು: ೧೩೪೦— ಹೊಸಪಟ್ಟಣ (Heras p. 57)
೧೩೪೭— ವಿಜಯನಗರ (Heras p. 19)
೧೩೪೭— ಹಸ್ತಿನಿ ,,
೧೩೫೪— ಹೊಸಪಟ್ಟಣ ,,
೧೩೫೫— ಹೊಸಪಟ್ಟಣ ,,

ಇದರಿಂದ ಹೊಸಪಟ್ಟಣ, ಹಸ್ತಿನಿ (ಆನೇಗುಂದಿ) ಮತ್ತು ವಿಜಯನಗರ ಈ ಮೂರೂ ಹೆಸರುಗಳು ಒಂದೇ ರಾಜಧಾನೀಸ್ಥಳವನ್ನು ಸೂಚಿಸುತ್ತವೆ ಎಂಬುದು ಸ್ಪಷ್ಟವಿದೆ.

೩ — ಎ. ೩, ಅ. ಟಿ. ೧೨, [ಪು. ೧೭]

ಆನೇಗುಂದಿಯ ಗಲಭೆಯಲ್ಲಿ ಹರಿಹರನ ಸಂಬಂಧವು ಯಾವ ಬಗೆಯದಾಗಿತ್ತು ಎಂಬುದನ್ನು ನಿರ್ಧರಿಸುವುದು ಅಶಕ್ಯವಾಗಿದೆ. ಹರಿಹರನ ಸ್ವರಾಜ್ಯಸ್ಥಾಪನೆಯ ಪ್ರಥಮಸಂಕೇತದ ಸ್ಪಷ್ಟವಾದ ಕುರುಹನ್ನು ಕಂಡುಹಿಡಿಯುವುದೂ ಬಹು ಕಠಿನವಾಗಿದೆ. ಈ ಪ್ರಸಂಗವನ್ನು ಕುರಿತು ಶಾಸನಪ್ರಮಾಣವು ದೊರೆವುದಿಲ್ಲ. ದೊರೆಯಬೇಕೆಂದು ಅಪೇಕ್ಷಿಸುವುದೂ ಸಮಂಜಸವಾಗದು. ಏಕೆಂದರೆ, ಆ ಪರಿಸ್ಥಿತಿಯೆ ಅಷ್ಟು ಅಸ್ಥಿರವಾಗಿದ್ದಿತು. ಇಬ್ನಬೂತ, ಬಾರ್ನಿ, ನ್ಯೂನಿಝು ಮೊದಲಾದ ಪರಕೀಯ ಲೇಖಕರು ಹೇಳುವ ವಿಷಯಗಳನ್ನು ಪೂರ್ಣವಾಗಿ ನಂಬುವಂತೆ ಇಲ್ಲ. ಅವರು ಕಂಡುದು, ಕೇಳಿದುದು, ತಿಳಿದುಕೊಂಡುದು ಅಸಮರ್ಪಕವೂ ವಿಪರ್ಯಸ್ತವೂ ಆಗಿರುವುದು ಹೆಚ್ಚು ಸಂಭವನೀಯವಾಗಿದೆ. ಆದುದರಿಂದ ಉಪಲಬ್ಧವಾಗುವ ಇವರ ಪ್ರಮಾಣಗಳು ಸತ್ಯವನ್ನು ಹೇಳಲಿಕ್ಕೆ ಸಹಾಯವಾಗದೆ, ಅದನ್ನು ಸೂಚಿಸಲಿಕ್ಕೆ ಮಾತ್ರ ಸಹಾಯವಾಗುವುವು. ಸತ್ಯವು ಇವುಗಳಿಂದ ಭಿನ್ನವಾಗಿದ್ದು, ಊಹಾಬಲದಿಂದ ಅದನ್ನು ಕಂಡುಕೊಳ್ಳಬೇಕಾಗಿದೆ.

ಆನೇಗುಂದಿಯ ವಿಪ್ಲವದಲ್ಲಿ ಮುಹಮ್ಮದೀಯರಿಗೆ ಸೆರೆಸಿಲುಕಿ ಕುಲಗೆಟ್ಟವರಲ್ಲಿ ಹರಿಹರನೂ ಆಗಿದ್ದನೆಂದು ಮುಸಲ್ಮಾನ ಇತಿಹಾಸಕಾರರು ಹೇಳುವರು. ದಿಲ್ಲಿಯಿಂದ ಬಿಡುಗಡೆಹೊಂದಿ ಬಂದು, ಆನೇಗುಂದಿಯಲ್ಲಿ ಆಳತೊಡಗಿದ ನ್ಯೂನಿಝುನ ದೇವರಾಯನು ವೀರಬಲ್ಲಾಳನೆಂದು ಕೆಲರ (ಫಾ. ಹೆರಾಸ) ಅಭಿಪ್ರಾಯವು; ಹರಿಹರನೆಂದು ಬೇರೆಯವರ (ಸಿವೆಲರ) ಮತವು.

ವಿಜಯನಗರಸಾಮ್ರಾಜ್ಯಸ್ಥಾಪನೆಯು ೧೩೩೬ರಲ್ಲಿ ಆಯಿತು ಎಂಬುದು ಪರಂಪರಾಗತವಾದ ಐತಿಹ್ಯವು. ಇದಕ್ಕೆ ಅನುಕೂಲವಾದ ಕೆಲವು ಪ್ರಮಾಣಗಳು ದೊರೆತಿದ್ದರೂ ಅವು ಅಷ್ಟು ಪ್ರಬಲವೂ ನಿರ್ಣಾಯಕವೂ ಆಗಿಲ್ಲವೆಂದು ಹೇಳಬಹುದು. ೧೩೩೬ಕ್ಕೆ ಅನುಕೂಲವಾದ

ಸ್ಪಷ್ಟ ಪ್ರಮಾಣವು ಮೇಲೆ ವಿವರಿಸಿದ ಕಾರಣಗಳ ಮೂಲಕ ದೊರೆವುದಿಲ್ಲ ವಾದರೂ ಅದನ್ನು ಅಲ್ಲಗಳೆವ ಪ್ರಮಾಣಗಳು ಮಾತ್ರ ಎಲ್ಲಿಯೂ ದೊರೆ ತಿಲ್ಲ. ಅಲ್ಲದೆ, ಬೇರೆ ವಿಶ್ವಸನೀಯವಾದ ಪ್ರಮಾಣಗಳನ್ನು ಪರೀಕ್ಷಿಸಿ ದರೆ, ೧೩೩೬ರಲ್ಲಿ ಸಾಮ್ರಾಜ್ಯಸ್ಥಾಪನೆಯಾಯಿತು ಎಂದು ನಂಬಲಿಕ್ಕೆ ಯಾವ ವಿರೋಧವೂ ವಿಸಂಗತಿಯೂ ಅನೌಚಿತ್ಯದೋಷವೂ ಬರುವಂತೆ ಇಲ್ಲ. ೧೩೩೬ರಿಂದ ೧೩೪೬ರ ವರೆಗಿನ ಹರಿಹರನ ಉತ್ಕರ್ಷಪಥವನ್ನು ಪರಿಶೀಲಿಸಿದರೆ, ಆತನ ಸ್ವರಾಜ್ಯದ ಉಪಕ್ರಮವು ೧೩೩೬ ರಲ್ಲಿ ಆರಂಭ ವಾಗಿ ೧೩೪೬ರಲ್ಲಿ ಪೂರ್ಣವಾಗಿ ನೆರವೇರಿತು ಎಂದು ಮನವರಿಕೆಯಾಗ ದಿರದು. ಆಧುನಿಕರಾದ ಅನೇಕ ಮಾನ್ಯ ಲೇಖಕರ ಒಲವು ೧೩೩೬ನ್ನು ಪ್ರಮಾಣವಾಗಿ ಅಂಗೀಕರಿಸುವುದರ ಕಡೆಗೇ ಇರುವುದು (ಉದಾ: Heras p. 67).

೧೩೪೦ರ ಒಂದು ಶಾಸನದಲ್ಲಿ ಹೊಸಹಂಪೆಯಪಟ್ಟಣದ ನಿರ್ದೇಶವು ಬರುವುದರಿಂದ (Heras p. 57), ೧೩೩೬ ರಲ್ಲಿ ಹರಿಹರನು ಈ ಪಟ್ಟಣದಲ್ಲಿ ತನ್ನ ನವರಾಜ್ಯಸ್ಥಾಪನೆಯ ಶಂಕುವನ್ನು ಸ್ಥಾಪಿಸಿದನು ಎಂದು ಊಹಿಸುವುದು ಸಯುಕ್ತಿಕವಾಗಿದೆ. ಮತ್ತೆ ೧೩೫೪—೫೫ರ ಶಾಸನಗಳಲ್ಲಿಯೂ ಈ ಹೊಸಪಟ್ಟಣದ ಉಲ್ಲೇಖವು ಬರುತ್ತದೆ (Heras p. 19).

೪ — ವಿ. ೪, ಅ. ಟಿ. ೧೬, [ಪುಟ ೨೫]

ವಿದ್ಯಾರಣ್ಯರಿಗೂ ವಿಜಯನಗರಸ್ಥಾಪನೆಗೂ ಯಾವ ಸಂಬಂಧವೂ ಇಲ್ಲ. ವಿಜಯನಗರದ ಮೂರನೆಯ ಅರಸುಮನೆತನದ ಕಾಲದಲ್ಲಿ ವಿದ್ಯಾರಣ್ಯರಿಗೆ ಶೃಂಗೇರೀ ಜಗದ್ಗುರುಗಳಿಂದ ಸ್ವಾರ್ಥಮೂಲಕವಾಗಿ ಈ ಗೌರವವು ಸಲ್ಲಿಸಲ್ಪಟ್ಟಿತು. ಅದಕ್ಕೂ ಪೂರ್ವದ ಶಾಸನಗಳಲ್ಲಿ ವಿಜಯ ನಗರಕ್ಕೆ ವಿದ್ಯಾನಗರವೆಂಬ ಹೆಸರು ದೊರೆವುದಿಲ್ಲ. ಹೀಗೆ ದೊರೆವ ಶಾಸನಗಳೆಲ್ಲ ಕೃತಕವಾದುವು. ಎಂದು ಫಾದರ ಹೆರಾಸರು ವಾದಿಸಿ ದ್ದಾರೆ (Beginnings, pp. 14-35).

ಮೊದಮೊದಲಿನ ವಿಜಯನಗರದ ಶಾಸನಗಳಲ್ಲಿ ವಿದ್ಯಾರಣ್ಯರು ವಿಜಯನಗರದ ಸಂಸ್ಥಾಪಕರು ಎಂದು ಸಂಶಯಾತೀತವಾಗಿ ಹೇಳುವ ಪ್ರಬಲ ಆಧಾರಗಳು ಸಾಕಷ್ಟು ದೊರೆವುದಿಲ್ಲ. ಹೀಗೆ ಹೇಳುವ ಪ್ರಮಾಣಗಳು ಉದಾ: ನೆಲ್ಲೂರು, ಕಾಪಲೂರು, ಯರಗುಡಿ, ಮುಳಬಾಗಲ್ ೧೫೫ಲ, ಈ ತಾಮ್ರಶಾಸನಗಳು ಕೃತಕವೆಂದು ಕೆಲರು ಸಾಧಿಸಿರುವರು. ಆದರೆ ಇಷ್ಟರಿಂದ ವಿದ್ಯಾರಣ್ಯರ ಸಂಬಂಧವನ್ನು ಪೂರ್ಣವಾಗಿ ಹಾರಿಸಿ ಬಿಡುವುದು ಸಾಧ್ಯವಿಲ್ಲ. ಅಕೃತಕವಾದ ಕೆಲವು ಶಾಸನಗಳಾದರೂ ವಿದ್ಯಾರಣ್ಯರನ್ನು ಎತ್ತಿ ಹಿಡಿಯುವುವು ಎಂದು ಫಾ. ಹೆರಾಸರೆ ಒಪ್ಪಿಕೊಳ್ಳುವರು (Ibid p. 31).

೧೩೫೬ ರಲ್ಲಿ ಬುಕ್ಕರಾಯನು ಕಾಶಿಯಿಂದ ವಿದ್ಯಾರಣ್ಯರನ್ನು ಕರೆಸಿಕೊಂಡನು. ಅಂದಿನಿಂದ ವಿಜಯನಗರದ ರಾಜಕಾರಣದಲ್ಲಿ ವಿದ್ಯಾರಣ್ಯರ ಸಂಬಂಧವು ಪ್ರಾರಂಭವಾಯಿತು ಎಂದು ಕೆಲರ ಅಭಿಪ್ರಾಯವು. ಆದರೆ ಅದಕ್ಕೂ ಪೂರ್ವದ ಕೆಲವು ದಿಟವಾದ ಶಾಸನಗಳಲ್ಲಿ ವಿದ್ಯಾನಗರವೆಂದು ವಿಜಯನಗರ ರಾಜಧಾನಿಯ ಉಲ್ಲೇಖವು ಬರುವುದನ್ನು ವಿಮರ್ಶಿಸಿದರೆ, ವಿಜಯನಗರದೊಡನೆ ವಿದ್ಯಾರಣ್ಯರ ಸಂಬಂಧವು ಇದಕ್ಕೂ ಮೊದಲಿನಿಂದ ಇದ್ದು, ೧೩೩೬ ರಲ್ಲಿಯ ರಾಜ್ಯಸ್ಥಾಪನೆಗೆ ಅವರು ಪ್ರೇರಕರಾಗಿದ್ದರು ಎಂದು ನಂಬಲು ಯಾವ ಅಭ್ಯಂತರವೂ ಇಲ್ಲ.

೧೩೩೬ ರಲ್ಲಿ ವಿದ್ಯಾರಣ್ಯರ ಪ್ರೇರಣೆಯಿಂದ ವಿಜಯನಗರವು ಸ್ಥಾಪಿತವಾಯಿತು ಎಂದು ಈಗಲೂ ಅನೇಕ ಸಂಶೋಧಕರು ಅಭಿಪ್ರಾಯಪಡುವರು. ಈ ಮತಕ್ಕೆ ಮೂಲಾಧಾರವಾದ ಕಾಪಲೂರು ಮತ್ತು ಯರಗುಡಿಯ ಶಾಸನಗಳು ಕೃತಕವೆಂದು ತೋರಿಸಲು ಹಲವು ಪಂಡಿತರು ಹೆಣಗಾಡಿದ್ದಾರೆ ಅದಕ್ಕೆ ವಿರುದ್ಧವಾಗಿ, ಅವು ಕೃತಕವಲ್ಲವೆಂದು ಸಾಧಿಸುವ ಪಂಡಿತರೂ ಇದ್ದಾರೆ. ಈ ವಿಷಯವನ್ನು ಕುರಿತು ಕೆಲದಿನಗಳ ಹಿಂದೆ ಶ್ರೀ. ಕೇ. ಈಶ್ವರದತ್ತರು ಮಂಡಿಸಿದ ಕೆಲವು ಮಾತುಗಳನ್ನು ಇಲ್ಲಿ ಉದ್ಧರಿಸುವುದು ಯುಕ್ತವಾಗಿದೆ :

"We strongly maintain that the Kaplur & Yergudi plates are the two pillars on which the mighty edifice of the history of the Vijayanagar Empire should be constructed. We have not seen any South Indian historian, uptill now who has refuted the arguments of Mr Venkiah .................. who proved that the Kaplur copper-plate grant is palaeographically and historically an excellent piece of evidence about the foundation of the Empire ( I. A. Vol. 38, pp. 89-91 )."

( Journal of the Andhra Historical Research Society, Jan. 1935, p. 50 ).

೫—ವಿ. ೫, ಅ. ಟಿ. ೪, [ಪುಟ ೨೯]

ಹರಿಹರ ಬಂಧುಗಳು ತೆಲುಗರು, ವರಂಗಲ್ ರಾಜ್ಯದಿಂದ ಬಂದವರು ಎಂದು ಆಂಧ್ರಾಭಿಮಾನಿಗಳು ವಾದಿಸುವರು. ಈ ವಾದವು ಅನೇಕ ಬಗೆಯಿಂದ ದುರ್ಬಲವಾಗಿದ್ದು ಐತಿಹಾಸಿಕ ವಿಮರ್ಶೆಗೆ ನಿಲ್ಲಲು ಅಸಮರ್ಥವಾಗಿರುವುದರಿಂದ ತ್ಯಾಜ್ಯವಾಗಿದೆ. ಏಕೆಂದರೆ,

೧. ಅದಕ್ಕೆ ಶಾಸನಗಳ ಆಧಾರವಿಲ್ಲ. ಹರಿಹರ ಬಂಧುಗಳು ಸಂಗಮ ಪುತ್ರರು ಎಂದು ಅನೇಕ ಶಾಸನಗಳು ಹೇಳುತ್ತವೆ

೨. ಈ ಮತಕ್ಕೆ ಮುಖ್ಯ ಆಧಾರವಾದ ರಾಜಕಾಲನಿರ್ಣಯ ಮೊದಲಾದ ಗ್ರಂಥಗಳು ಬಹಳ ಈಚೆಯವಾಗಿವೆ. ರಾಜಕಾಲನಿರ್ಣಯವು ಪ್ರಮಾಣಾರ್ಹವಲ್ಲವೆಂದು ಆಂಧ್ರ ಸಂಶೋಧಕರೇ (ಉದಾ: ಶ್ರೀ. ಗೋಪೀನಾಥರಾಯರು) ಒಪ್ಪಿಕೊಳ್ಳುವರು.

೩. ಇತರ ಅನೇಕ ಪ್ರಮಾಣಗಳೂ ಈ ವಾದವನ್ನು ವಿರೋಧಿಸುವುವು (Heras pp. 102–122; Sal. I, pp. 35–39 ಮತ್ತು ಪರಿಶಿಷ್ಟ ೧; ಇವುಗಳನ್ನು ನೋಡಿರಿ).

೬ — ವಿ. ೫, ಅ. ಟಿ. ೧೦, [ಪುಟ ೩೯]

ವಿಜಯನಗರ—ಮಹಮ್ಮದೀಯರ ನಡುವೆ ಇನ್ನು ಮುಂದೆ ಮೇಲಿಂದ ಮೇಲೆ ನಡೆವ ಯುದ್ಧಗಳ ವರ್ತಮಾನವನ್ನು ವಿಸ್ತಾರವಾಗಿ ತಿಳಿಯಲಿಕ್ಕೆ ಮಹಮ್ಮದೀಯ ಇತಿಹಾಸಕಾರನಾದ ಫಿರಿಷ್ತನ ಹೊರತು ಬೇರೆ ಸುಲಭವಾದ ಸಾಧನವು ಇಲ್ಲ. ಆದರೆ ಫಿರಿಷ್ತನ ಬರವಣಿಗೆಯು ಕಲುಷಿತವೂ ಪಕ್ಷಪಾತಪೂರಿತವೂ ಆಗಿದೆ ಎಂಬುದು ಒಡೆದು ಕಾಣುತ್ತದೆ. ಆದುದರಿಂದ ಫಿರಿಷ್ತನು ಹೇಳುವ ಅತಿಶಯೋಕ್ತಿಗಳಲ್ಲಿ ಸಯುಕ್ತಿಕವೂ ಸಮಂಜಸವೂ ತೋರುವ ಸತ್ಯಾಂಶಗಳನ್ನು ಆರಿಸಿಕೊಂಡು ಇತರ ಪ್ರಮಾಣಗಳಿಗೆ ವಿರೋಧವಾಗದಂತೆ ಈ ಯುದ್ಧಗಳನ್ನು ವರ್ಣಿಸುವ ಮಾರ್ಗವನ್ನು ಇಲ್ಲಿ ಸ್ವೀಕರಿಸಲಾಗಿದೆ. ಪ್ರತಿಯೊಂದು ಯುದ್ಧದ ಕೊನೆಯಲ್ಲಿ ವಿಜಯನಗರದವರು ಸೋತು ಬಹಮನೀ ಸುಲ್ತಾನರಿಗೆ ವಿಪುಲವಾಗಿ ಕಪ್ಪ-ಕಾಣಿಕೆಗಳನ್ನು ಕೊಟ್ಟರು ಎಂದು ಫಿರಿಷ್ತನು ಹೇಳುವನು. ಇದನ್ನು ನಂಬಲಿಕ್ಕೆ ಆಗುವುದಿಲ್ಲ.

೭ — ವಿ. ೬, ಅ. ಟಿ. ೩, [ಪುಟ ೪೭]

ರಂಗಿನಿ ಕಾಳೆಗದ ವೃತ್ತಾಂತವು ಸಮಗ್ರವಾಗಿ ದೊರೆತಿಲ್ಲ. ಇಲ್ಲಿಯ ರಂಗಿನಿ, ಆದವಾನಿ ಮೊದಲಾದ ಕಾಳೆಗಗಳ ವಿಷಯವಾಗಿ ಫಿರಿಷ್ತನು ಪೂರ್ಣವಾಗಿ ಮೌನವನ್ನು ತಳೆದಿರುವನು. ಇವುಗಳ ಅಲ್ಪಸ್ವಲ್ಪ ಸಂಗತಿಗಳು ಶಾಸನಗಳಿಂದ ತಿಳಿಯುತ್ತವೆ. ಫಿರಿಷ್ತನ ಪಕ್ಷಪಾತ ರೀತಿಗೆ ಇದೊಂದು ಬಲವಾದ ಪ್ರಮಾಣವು.

೮ — ವಿ. ೬, ಅ. ಟಿ. ೬, [ಪುಟ ೫೩]

ಇಮ್ಮಡಿ ವಿರೂಪಾಕ್ಷನು ನ್ಯೂನಿಝನ 'ಅಜರಾಯನು.' ಪ್ರಪನ್ನಾಮೃತ ಎಂಬ ಸಂಸ್ಕೃತ ಗ್ರಂಥದಲ್ಲಿ ಈತನನ್ನು ಕುರಿತು ಹೇಳಿರುವ ಕಥೆಯು ಹೀಗೆ :

ವಿರೂಪಾಕ್ಷನಿಗೆ ಪಟ್ಟವು ದೊರೆತಿತು, ಆದರೆ ಆತನ

ದಾಯಾದಿಗಳಿಗೆ ಇದು ಸಹನವಾಗಲಿಲ್ಲ. ಅವರು ಆತನನ್ನು ಕೊಲ್ಲಲು ಪ್ರಯತ್ನಿಸಿದರು. ವಿರೂಪಾಕ್ಷನು ವಿಜಯನಗರದಿಂದ ಓಡಿ ಹೋದನು. ಮುಂದೆ ಒಂದು ದಿನ ಆತನು ಇರುಳಲ್ಲಿ ಪುರವನ್ನು ಪ್ರವೇಶಿಸಿ ತನ್ನ ವೈರಿಗಳನ್ನೆಲ್ಲ ಕೊಂದು ಹಾಕಿದನು. ಹೀಗೆ ಹತರಾದ ಈ ರಾಜಬಾಂಧವರು ಪಿಶಾಚಗಳಾದರು. ಅವು ರಾತ್ರಿಯಲ್ಲಿ ಆ ಸ್ಥಳಕ್ಕೆ ಬಂದು ಓಲಗವನ್ನು ನೆರೆಸುತ್ತಿದ್ದುವು. ಅವುಗಳ ಬಾಧೆಯು ಹೆಚ್ಚಾಯಿತು. ಅದನ್ನು ತಾಳಲಾರದೆ ವಿರೂಪಾಕ್ಷನು ಬೇರೆಡೆಗೆ ಅರಮನೆಯನ್ನು ಕಟ್ಟಿಸಿ ಇರಲಾರಂಭಿಸಿದನು.

ಕೆಲ ದಿನಗಳಾದ ಬಳಿಕ ಇಬ್ಬರು ರಾಮಾನುಜ ಆಚಾರ್ಯರು -ಎಟ್ಟೂರು ನರಸಿಂಹಾಚಾರ್ಯ ಮತ್ತು ಆತನ ತಮ್ಮನು-ಆ ಸ್ಥಳಕ್ಕೆ ಬಂದರು. ಅವರು ಆ ಪಿಶಾಚಗಳ ಆಗ್ರಹದ ಮೇರೆಗೆ ರಾಮಾಯಣವನ್ನು ಓದಿ ಅವುಗಳಿಗೆ ಸದ್ಗತಿಯನ್ನು ಕೊಟ್ಟರು. ಇದನ್ನು ಕೇಳಿದ ವಿರೂಪಾಕ್ಷನಿಗೆ ರಾಮನಲ್ಲಿಯೂ ರಾಮಾನುಜ ಮತದಲ್ಲಿಯೂ ಭಕ್ತಿಯು ಹುಟ್ಟಿತು. ಅಂದಿನ ವರೆಗೆ ವೀರಶೈವನಾಗಿದ್ದ ಆತನು ಆ ಮತವನ್ನು ಬಿಟ್ಟು ರಾಮಾನುಜ ಮತವನ್ನು ಸ್ವೀಕರಿಸಿದನು. ತನ್ನ ಶಾಸನಕ್ಕೆ 'ಶ್ರೀರಾಮ' ಎಂಬ ಮುದ್ರಿಕೆಯನ್ನು ಎತ್ತಿಕೊಂಡನು.

ಈ ಕಥೆಯು ನಂಬಲು ಅರ್ಹವಾಗಿಲ್ಲ. ಮೊದಲು ಈ ಗ್ರಂಥವು ಬಹಳ ಈಚೆಯ ಕಾಲದ್ದು (೧೭ನೆಯ ಶತಮಾನ). ರಾಮಾನುಜ ಮತದ ಅಗ್ಗಳಿಕೆಯನ್ನು ಹೊಗಳಲು ಅದು ಹುಟ್ಟಿದುದು. ಈ ಕಥೆಯಲ್ಲಿಯ ಮುಖ್ಯವಾದ ಘಟನೆಗಳೂ ಸಾಧಾರವಾಗಿಲ್ಲ. ಈ ಕಾಲದ ಶಾಸನಗಳಲ್ಲಿ ದೊರೆವ ಅಂಕಿತವು 'ಶ್ರೀವಿರೂಪಾಕ್ಷ' ಎಂದೇ ಇದೆ.

೯ — ವಿ. ೬, ಅ. ಟಿ. ೭, [ಪುಟ ೫೪]

ಫೆರಿಷ್ತನು ಹೇಳುವ ಈ ಯುದ್ಧದ ವೃತ್ತಾಂತವು ಅಕಟೋವಿಕಟವಾಗಿದೆ. ಕಲ್ಪಿತ ಕಾದಂಬರಿಗಿಂತ ಅದ್ಭುತವಾಗಿದೆ. ಅದನ್ನು ನಂಬುವುದು ಸಾಧ್ಯವಿಲ್ಲ. ಅದರ ಸಾರಾಂಶವು ಹೀಗೆ :

ಮುದಗಲ್ಲಿನಲ್ಲಿ ಒಬ್ಬ ಒಕ್ಕಲಿಗನಿಗೆ ಪೆರ್ತಾಲ (ಅಥವಾ ನಿಹಾಲ) ಎಂಬ ಅತಿರೂಪವತಿಯಾದ ಮಗಳು ಇದ್ದಳು. ದೇವರಾಯನು ಆಕೆಗೆ ಮನಸೋತು ಆಕೆಯನ್ನು ಒಲಿಸಿಕೊಳ್ಳಲು ಮಾಡಿದ ಯತ್ನಗಳು ವ್ಯರ್ಥವಾದುವು. ಕೊನೆಗೆ ರಾಯನು ಬಲಾತ್ಕಾರದಿಂದ ಆಕೆಯನ್ನು ಅಪಹರಿಸಲು ದಂಡಯಾತ್ರೆ ಹೊರಟನು. ಆಕೆಯು ಕೈಗೆ ಸಿಕ್ಕದೆ ಬಹಮನೀ ರಾಜ್ಯಕ್ಕೆ ಓಡಿ ಹೋದಳು. ರಾಯನ ಈ ಉಪದ್ರವಕ್ಕಾಗಿ ಫಿರೋಜ ಶಹನು ವಿಜಯನಗರದೊಡನೆ ಯುದ್ಧವನ್ನು ಹೂಡಿದನು. ರಾಯನು ಸೋತು ಶರಣಾಗತನಾಗಿ ತನ್ನ ಮಗಳನ್ನು ಶಹನಿಗೆ ಮದುವೆ ಮಾಡಿ ಕೊಟ್ಟನು. ಲಗ್ನಸಮಾರಂಭವು ವಿಜಯನಗರದಲ್ಲಿ ವಿಜೃಂಭಣೆಯಿಂದ ನೆರವೇರಿತು. ಪೆರ್ತಾಲಳು ಶಹನ ಸೊಸೆಯಾಗಿ ಅಂತಃಪುರವನ್ನು ಸೇರಿದಳು. ಇ. ಇ.

ಈ ವೃತ್ತಾಂತವು ಅನೇಕ ಅಸಂಭಾವ್ಯ ಮಾತುಗಳಿಂದ ತುಂಬಿದೆ. ಇದು ಸುಳ್ಳಿನ ಸಂತೆಯೆಂಬುದು ಕೆಳಗಿನ ಪ್ರಮಾಣಗಳಿಂದ ಸಿದ್ಧವಾಗುತ್ತದೆ.

(೧) ಫಿರಿಷ್ತನ ಸಮಕಾಲೀನನೂ 'ಬುರ್ಹಾನ-ಇ – ಮಾಸಿರ್' ಎಂಬ ಮುಸಲ್ಮಾನೀ ಇತಿಹಾಸಗ್ರಂಥದ ಕರ್ತನೂ ಆದ ಅಜಿಜ-ಉಲ್ಲಾ-ತಬಾತಬನು ಈ ಸಂಗತಿಯನ್ನು ಅಪ್ಪುಟವಾಗಿ ಹೇಳುವುದಿಲ್ಲ.

(೨) ಪೆರ್ತಾಲ ಅಥವಾ ನಿಹಾಲ ಎಂಬ ಹೆಸರು ಆ ಕಾಲದ ಮುದಗಲ್ ಪ್ರಾಂತದ ಹೆಣ್ಣಿಗೆ ಇರುವುದು ಸೋಜಿಗವೆನಿಸುತ್ತದೆ.

(೩) ಶಹನು ವಿಜಯನಗರದ ವರೆಗೆ ಬಂದಿರುವುದು ಶಕ್ಯವಿಲ್ಲ. ಆದವಾನಿಯಲ್ಲಿಯ ಕಪಾಳಮೋಕ್ಷದಿಂದಲೆ ಆತನು ಸತ್ತು ಕೆಟ್ಟು ಹಿಂದಿರುಗಬೇಕಾಯಿತು ಎಂದು ಫಿರಿಷ್ತನೇ ಹೇಳುವನು.

(೪) ಈ ಕಾಳಗದಲ್ಲಿ ರಾಯನು ಸೋಲಲಿಲ್ಲವೆಂಬುದು ಸಮಕಾಲೀನವಾದ ಶಾಸನಗಳಿಂದ ತಿಳಿಯುತ್ತದೆ.

(೫) ರಾಯನಿಗೆ ಒಬ್ಬಳೆ ಮಗಳಿದ್ದು ಆಕೆಯು ದೇವರಸನೆಂಬವನನ್ನು ಮದುವೆಯಾಗಿದ್ದಳು.

## ೧೦ — ವಿ. ೭, ಅ. ಟಿ. ೨, [ಪುಟ ೬೦]

ಈ ಸಂಗತಿಯನ್ನು ವಿವರಿಸುವ ನ್ಯೂನಿಝು ಮತ್ತು ಅಬ್ದುಲ್ ರಜಾಕರ ವೃತ್ತಾಂತಗಳಲ್ಲಿ ಅನೇಕ ವ್ಯತ್ಯಾಸಗಳಿವೆ. ರಜಾಕನು ಸಮ ಕಾಲೀನನಾದುದರಿಂದ ಹೆಚ್ಚು ವಿಶ್ವಸನೀಯನಾಗಿದ್ದಾನೆ. ಅತಿಥಿ ಗಳನ್ನು ಒಬ್ಬೊಬ್ಬರನ್ನಾಗಿ ಉಣಿಸುವ ಪದ್ಧತಿಯು ವಿಚಿತ್ರವಾಗಿ ತೋರುತ್ತದೆ.

## ೧೧ — ವಿ. ೮, ಅ. ಟಿ. ೩, [ಪುಟ ೭೪]

ಶಾಸನ ಪ್ರಮಾಣಗಳಿಂದ ವಿದಿತವಾಗುವ ಇತಿಹಾಸವಿದು. ಈ ರಾಜವಂಶಪರಂಪರೆ ಮತ್ತು ಈ ರಾಜ್ಯಕ್ರಾಂತಿ ಇವುಗಳನ್ನು ಕುರಿತು ನ್ಯೂನಿಝುನು ಹೇಳುವ ವೃತ್ತಾಂತವು ಬೇರೆಯಾಗಿದೆ :

ವಿಜಯರಾಯನು ೬ ವರ್ಷ ಆಳಿದನು. ಆತನ ತರುವಾಯ ದೇವ ರಾಯನು ೨೫ ವರ್ಷ ಆಳಿದನು. ಬಳಿಕ ಆತನ ಮಗ ಪೀನರಾಯನು ೧೨ ವರ್ಷ ಆಳಿದನು. ಈತನು ತನ್ನ ಮಗನಾಗಿ ಸಲಹಿದ ತನ್ನ ಅಣ್ಣನ ಮಗನ (nephew) ದ್ರೋಹಕ್ಕೆ ಬಲಿಯಾದನು. ತರುವಾಯ ಈತನ ಮಗನು ಪಟ್ಟಕ್ಕೆ ಬಂದನು ಈತನು ಅವಿಚಾರದಿಂದ ಆಳಿದನು. ಈತನ ತರುವಾಯ ಈತನ ಮಗ ವಿರುಪಾಕ್ಷನು ಪಟ್ಟಕ್ಕೆ ಬಂದನು.

ವಿರುಪಾಕ್ಷನು ದುರಾಚಾರಿಯೂ ದುರ್ವ್ಯಸನಿಯೂ ಆಗಿದ್ದನು. ಈತನ ಹಿಂಸೆಗೆ ಬೇಸತ್ತು ನಾಯಕರೆಲ್ಲರು ಬಂಡಾಯವನ್ನು ಹೂಡಿದರು. ಗೋವೆ, ಚೌಲ (ಚೆಯೋಳ), ಡಬುಲ (ದಾಭೋಳ) ಮತ್ತು ರಾಜ್ಯದ ಬೇರೆ ಭಾಗಗಳು ಕೈಬಿಟ್ಟು ಹೋದುವು. ಈ ರಾಜನಿಗೆ ಪ್ರೌಢರಾದ ಇಬ್ಬರು ಮಕ್ಕಳಿದ್ದರು. ಅವರಲ್ಲಿ ಹಿರಿಯನು ತಂದೆಯ ಈ ದುಷ್ಕೃತನ ಕ್ಕಾಗಿ ಈತನನ್ನು ಕೊಂದು ಹಾಕಿದನು. ಆದರೆ ಪಿತೃವಧೆಯಿಂದ ಕಲಂ ಕಿತನಾದ ತನ್ನಿಂದ ವಿಜಯನಗರದ ಸಿಂಹಾಸನವು ದೂಷಿತವಾಗುವು ದೆಂದು ಹೇಳಿ ರಾಜ್ಯಾಧಿಕಾರವನ್ನು ಅಂಗೀಕರಿಸಲಿಲ್ಲ. ಈತನ

ಅನುಮತಿಯಂತೆ ಈತನ ತಮ್ಮನಾದ ಪದೇವರಾಯನು (ಪ್ರೌಢ ದೇವರಾಯನು) ಪಟ್ಟವೇರಿದನು. ಈತನು ಮಂತ್ರಿ-ನಾಯಕರ ದುರಾಲೋಚನೆಯನ್ನು ಕೇಳಿ ಸಾಶಂಕನಾಗಿ ತನ್ನ ಅಣ್ಣನನ್ನು ಕೊಂದನು. ಬಳಿಕ ಈತನು ತನ್ನ ತಂದೆಯ ಮಾರ್ಗವನ್ನು ಅನುಸರಿಸಿ ವಿಷಯಾಸಕ್ತಿಯಿಂದ ರಾಜ್ಯಕಾರ್ಯವನ್ನು ಅಲಕ್ಷಿಸಿದನು.

(ಸಾಳುವ) ನರಸಿಂಗನೆಂಬ ನಾಯಕನು ರಾಜ್ಯದ ಈ ದುಃಸ್ಥಿತಿಯನ್ನು ನೋಡಿ ಈತನನ್ನು ರಾಜ್ಯಭ್ರಷ್ಟ ಮಾಡಲು ನಿಶ್ಚಯಿಸಿದನು. ಈತನು ಎಲ್ಲ ನಾಯಕರನ್ನು ತನ್ನೆಡೆಗೆ ಒಲಿಸಿಕೊಂಡು ತನ್ನ ಶಕ್ತಿಯನ್ನು ಬೆಳೆಸಿದನು. ರಾಜಧಾನಿಯ ಮೇಲೆ ಹರಾಟ ಮಾಡಿ ಅರಮನೆಯನ್ನು ಹೊಕ್ಕನು. ಅಸಹಾಯನಾದ ಪದೇವರಾಯನು ಪಲಾಯನ ಮಾಡಿದನು. ಬಳಿಕ ನರಸಿಂಗನು ವಿಜಯನಗರಕ್ಕೆ ಒಡೆಯನಾದನು-.

ನ್ಯೂನಿಝನ ಈ ವೃತ್ತಾಂತವು ಸತ್ಯವಾದ ಇತಿಹಾಸದಿಂದ ಬಹು ದೂರವಿದೆ. ಆತನು ತಾನು ಕೇಳಿದ ಹರಟೆಗಳನ್ನು ಅಸಂಬದ್ಧವಾಗಿ ಹೆಣೆದಿಟ್ಟಂತೆ ತೋರುತ್ತದೆ. ಈ ಘಟನೆಗಳಿಗೆ ಸುಮಾರು ನೂರುವರ್ಷಗಳಾದ ಬಳಿಕ ನ್ಯೂನಿಝನು ಇದನ್ನು ಬರೆಯುತ್ತಿರುವನು.

೧೨ — ಪಿ. ೧೦, ಅ. ಟಿ. ೭, [ಪುಟ ೯೧]

ಸಾಳುವ ರಾಜ್ಯಕ್ರಾಂತಿಯಾದ ಬಳಿಕ ಅಲ್ಪಾವಧಿಯಲ್ಲಿಯೆ ತುಳು ರಾಜ್ಯಕ್ರಾಂತಿಯಾಯಿತು. ಆದುದರಿಂದ ಈ ಎರಡು ರಾಜ್ಯಕ್ರಾಂತಿಗಳಲ್ಲಿಯ ಅನೇಕ ಘಟನೆಗಳೂ ಗಲಭೆಗಳೂ ತೊಡಕುತೊಡಕಾಗಿ ವಿಂಗಡಿಸಲಿಕ್ಕೆ ಬಾರದಂತಹವಾಗಿ ಅನೇಕರ ತಪ್ಪುತಿಳವಳಿಕೆಗಳಿಗೆ ಕಾರಣವಾಗಿವೆ. ನ್ಯೂನಿಝ-ಫೆರಿಷ್ತರೂ ಈ ವೃತ್ತಾಂತಗಳನ್ನು ಭಿನ್ನಭಿನ್ನವಾಗಿ ವರ್ಣಿಸಿರುವರು. ಈ ವಿಸಂಗತಿಗಳನ್ನೆಲ್ಲ ಸಮನ್ವಯ ಮಾಡಿ ಸ್ಪಷ್ಟೀಕರಿಸುವುದು ಸುಲಭವಾಗಿಲ್ಲ. ಸಮಕಾಲೀನವಾದ ಶಾಸನಗಳು, ಗ್ರಂಥಗಳು ಮುಂತಾದುವುಗಳ ಮೇಲಿಂದ ವ್ಯಕ್ತವಾಗುವ ಇತಿಹಾಸವು ಬೇರೆಯಾಗಿದೆ. ಆದುವೆ ಹೆಚ್ಚು ವಿಶ್ವಸನೀಯವಾದುದರಿಂದ ಆದನ್ನೇ

ಇಲ್ಲಿ ಅನುಸರಿಸಲಾಗಿದೆ. ಶಕ್ಯವಿದ್ದಲ್ಲಿ ನ್ಯೂನಿಝು-ಫೆರಿಷ್ತರೊಡನೆ ಮೇಳಗೂಡಿಸಲು ಪ್ರಯತ್ನಿಸಿದೆ.

**೧೪—ವಿ. ೧೩, ಅ. ಟಿ. ೧೨, [ಪುಟ ೧೧೭]**

ನ್ಯೂನಿಝುನು ಈ ಸ್ಥಳದ ಹೆಸರು Mollabamdym ಎಂದು ಹೇಳುವನು. ಇದು ಈಗಿನ ಮಲ್ಲಿಯಾಬಾದ ಎಂದು ಸಂಶೋಧಕರು ಅಭಿಪ್ರಾಯ ಪಟ್ಟಿರುವರು. 'ಕೃಷ್ಣರಾಜ ವಿಜಯಮು' ಎಂಬ ತೆಲುಗು ಗ್ರಂಥದಲ್ಲಿ ಮಲ್ಲಯ್ಯಬಂಡ ಎಂದು ಈ ಊರ ಹೆಸರು ಉಕ್ತವಾಗಿದೆ. ಈ ಸ್ಥಳವು ರಾಯಚೂರ ದಕ್ಷಿಣಕ್ಕೆ ಆರು ಮೈಲಿನಲ್ಲಿದೆ.

ರಾಯಚೂರ ವಾಯುವ್ಯಕ್ಕೆ ಸುಮಾರು ೧೫ ಮೈಲಿನಲ್ಲಿ ಕೃಷ್ಣಾ-ಭೀಮಾ ಸಂಗಮವಿದೆ. ಈ ಸಂಗಮದ ಕೆಳಭಾಗದಲ್ಲಿ ನದಿಗೆ ಇಳಿವಿದ್ದು ಸುಲಭವಾಗಿ ದಾಟಬಹುದಾಗಿದೆ. ಇದರ ಬಳಿಯಲ್ಲಿ ಕೃಷ್ಣೆಯ ದಕ್ಷಿಣ ದಂಡೆಯ ಮೇಲೆ ಕಾಡಲೂರು ಎಂಬ ಗ್ರಾಮವಿದೆ. ಆದಿಲಶಹನು ಈ ಕಾಡಲೂರ ಬಳಿಯಲ್ಲಿ ಕೃಷ್ಣೆಯನ್ನು ದಾಟಿರಬಹುದಾಗಿ ತೋರುತ್ತದೆ. ಆದಿಲಶಹನು ಕೃಷ್ಣೆಯನ್ನು ದಾಟಿ, ದಕ್ಷಿಣ ದಂಡೆಯ ಮೇಲೆ ಹೊಳೆಯ ಮಗ್ಗುಲಲ್ಲಿ ಬೀಡು ಬಿಟ್ಟಿದ್ದನೆಂದು ನ್ಯೂನಿಝುನು ಹೇಳುವನು. ಸಂಗಮದಿಂದ ಸ್ವಲ್ಪ ಅಂತರದಲ್ಲಿ ಈಗಿನ ಕೃಷ್ಣಾ ರೇಲ್ವೆ ಸ್ಟೇಶನಿಗೆ ಎರಡು ಮೈಲು-ಪಶ್ಚಿಮಕ್ಕೆ ವಿಶಾಲವಾದ ಶಿಬಿರದ ಅವಶೇಷಗಳು ಈಗಲೂ ಗೋಚರವಾಗುತ್ತವೆ. ಕಾಡಲೂರ ಪೂರ್ವಕ್ಕೆ ಒಂದು ಮರಳು ದಿನ್ನೆಯಿದೆ ಎಂದು ತಿಳಿಯುತ್ತದೆ. ಈ ಕುರುಹುಗಳಿದ್ದ ಸ್ಥಳದಲ್ಲಿ ಆದಿಲಶಹನ ಮುಖ್ಯ ದಳವು ಬೀಡು ಬಿಟ್ಟಿರಬೇಕು.

ಮಲ್ಲಾಬಂಡಿಯಿಂದ ರಾಯಚೂರ ವರೆಗಿನ ಪ್ರದೇಶದಲ್ಲಿಯೂ ರಾಯಚೂರಿಂದ ಕೃಷ್ಣೆಯವರೆಗಿನ ಪ್ರದೇಶದಲ್ಲಿಯೂ ವೀರಗಲ್ಲುಗಳು ಮುಂತಾದ ಕಾಳಗದ ಕುರುಹುಗಳು ದೊರೆಯುತ್ತವೆ.

**೧೫ — ವಿ. ೧೮, ಅ. ಟಿ. ೯, [ಪುಟ ೧೭೦]**

ಈ ಮಹಾಯುದ್ಧಕ್ಕೆ ತಾಳೀಕೋಟೆಯ ಯುದ್ಧವೆಂಬ ತಪ್ಪು

ಹೆಸರು ಎಲ್ಲೆಡೆಯಲ್ಲಿಯೂ ರೂಢವಾಗಿದೆ. ಈ ಯುದ್ಧವು ನಿಜವಾಗಿ ತಾಳೀಕೋಟೆಯ ಬಳಿಯಲ್ಲಿ ಆಗಲೇ ಇಲ್ಲ. ತಾಳೀಕೋಟೆಯ ದಕ್ಷಿಣಕ್ಕೆ ಸುಮಾರು ೨೫ ಮೈಲಿನಲ್ಲಿರುವ ತಂಗಡಿ ಅಥವಾ ತಂಗಡಿಗಿ ಎಂಬ ಗ್ರಾಮದ ಬಳಿಯಲ್ಲಿ ಆಯಿತು. ಈ ಊರು ರಾಮರಾಯನ ಬಖರಿನಲ್ಲಿ 'ರಾಕ್ಷಸ ತಂಗಡಿ' ಎಂದು ನಿರ್ದಿಷ್ಟವಾಗಿದೆ. ಈ ಯುದ್ಧದ ಸ್ಥಲವನ್ನು ಕುರಿತು ಇಲ್ಲಿ ಹೇಳಿದ ಸಂಗತಿಗಳಿಗೆ ಶ್ರೀ. ರಾಜಪುರೋಹಿತರವರ ಈ ವಿಷಯಕವಾದ ಲೇಖನವನ್ನು (ಪ್ರಾಚೀನ ಕರ್ನಾಟಕ ೧—೨) ಆಧಾರವಾಗಿ ಇಟ್ಟುಕೊಳ್ಳಲಾಗಿದೆ. ಸಮಕಾಲೀನವೂ ಆದುದರಿಂದ ಹೆಚ್ಚು ವಿಶ್ವಸನೀಯವೂ ಆದ ರಾಮರಾಯನ ಬಖರನ್ನು ಅವಲಂಬಿಸಿದುದರಿಂದಲೂ ಪ್ರತ್ಯಕ್ಷವಾಗಿ ರಣಭೂಮಿಯ ನಿರೀಕ್ಷಣೆಯಿಂದ ಪರಿಶೋಧಿತವಾಗಿರುವುದರಿಂದಲೂ ಈ ಮತವು ಪ್ರಸ್ತುತದಲ್ಲಿ ಸತ್ಯವೂ ಗ್ರಾಹ್ಯವೂ ಆಗಿದೆ. ರಾಮರಾಯನು ಕೃಷ್ಣೆಯನ್ನು ದಾಟಿ ಹೋದುದೇಕೆ ಎಂಬುದರ ಉಪಪತ್ತಿಯು ಮಾತ್ರ ನನ್ನ ಊಹೆಯಾಗಿದೆ. ರಕ್ಕಸ ತಂಗಡಗಿ ಎಂಬ ಹೆಸರು ರಾಕ್ಷಸ ತಂಗಡಿ ಎಂಬುದರ ಅಪಭ್ರಂಶವಾಗಿ ಈಚೀಚೆಯ ಬರವಣಿಗೆಗಳಲ್ಲಿ ಕೆಲವೆಡೆ ಬಳಸಲಾಗಿದೆ. ಬಖರಿನಲ್ಲಿಯ 'ರಾಕ್ಷಸ ತಂಗಡಿ' ಎಂಬ ಹೆಸರೇ ಹೆಚ್ಚು ಶುದ್ಧವಾದುದು ಎಂಬುದು ಸ್ಪಷ್ಟವಿದೆ.

———

# ಪ ರಿ ಶಿ ಷ್ಟ ಗ ಳು

## ಒಂದನೆಯ ಪರಿಶಿಷ್ಟ

## ವಿಜಯನಗರವು ಕನ್ನಡ ಸಾಮ್ರಾಜ್ಯವು

ವಿಜಯನಗರದ ಚರಿತ್ರೆಯನ್ನು ಪರಿಶೀಲಿಸುವವರಿಗೆ ವಿಜಯ ನಗರವು ಕನ್ನಡಸಾಮ್ರಾಜ್ಯವೆಂದು ಅಡಿಗಡಿಗೆ ಒಡೆದುಕಾಣದೆ ಇರದು. **ರಾಜ್ಯವು ಕನ್ನಡ ನಾಡಿನಲ್ಲಿ. ಅರಸರು ಕನ್ನಡಿಗರು, ಕನ್ನಡದ ಅಭಿಮಾನಿಗಳು, ಕನ್ನಡದ ಪೋಷಕರು.** ಅರಸರ, ಅಧಿಕಾರಿಗಳ ನಾಯಕರ ಹೆಸರುಗಳು, ಬಿರುದುಗಳು, ಎಲ್ಲವು ಕನ್ನಡತನದಿಂದ ಬಗೆ ಗೊಂಡವುಗಳು.ವಿಜಯನಗರಸಾಮ್ರಾಜ್ಯವು ಪ್ರಾಮುಖ್ಯವಾಗಿ ಕರ್ನಾ ಟಕಸಾಮ್ರಾಜ್ಯವಾದರೂ ಅದು ಬೇರೆ ಜನಾಂಗಗಳನ್ನೂ ಭಾಷೆಗಳನ್ನೂ ಸಂಸ್ಕೃತಿಗಳನ್ನೂ ಆದರಿಸದೆ ಇರಲಿಲ್ಲ. ಪೋಷಿಸದೆ ಇರಲಿಲ್ಲ. ವಿಜಯ ನಗರ ಸಾಮ್ರಾಜ್ಯಕಾಲದಲ್ಲಿ ಕನ್ನಡೇತರರೊಡನೆ ಅನೇಕ ವಿಧದ ಧಾರಾಳವಾದ ಸಂಬಂಧಗಳು ಉಂಟಾದುವು. ವಿಸ್ತಾರವಾದ ಕರ್ನಾಟಕೇತರ ಭೂಪ್ರದೇಶವು ವಿಜಯನಗರದ ಅಧಿಕಾರದಲ್ಲಿದ್ದಿತು. ಆದರೆ ಅದರಿಂದ ವಿಜಯನಗರಕ್ಕೆ ಈ ಕರ್ನಾಟಕಸಾಮ್ರಾಜ್ಯಕ್ಕೆ ಹೆಚ್ಚಿನ ಗೌರವವೆ ಬರುವುದಲ್ಲದೆ, ಇದರ ಕರ್ನಾಟಕತ್ವಕ್ಕೆ ಚ್ಯುತಿ ಯುಂಟಾಗುವುದೆಂತು ?

ಹಿಂದಿನ ಚರಿತ್ರೆಯಲ್ಲಿ ಅವಲೋಕಿಸಿದಂತೆ, ವಿಜಯನಗರ ಸಾಮ್ರಾಜ್ಯದ ಜರಿತ್ರೆಯಲ್ಲಿ ಅದನ್ನು ಆಳಿದ ಅರಸುಮನೆತನಗಳ ಭಿನ್ನತೆಗೆ ಅಷ್ಟು ಪ್ರಾಧಾನ್ಯವಿಲ್ಲ. ಅರಸರು ಯಾರೇ ಇರಲಿ, ಯಾವ ಮತಪಂಗಡ ಗಳ ಅಭಿಮಾನಿಗಳೇ ಆಗಿರಲಿ, ಅವರು ವಿಜಯನಗರದ ಮೂಲ ಧ್ಯೇಯ-

ಕುಲಪರಂಪರೆಗಳನ್ನು ಅವಿಚ್ಛಿನ್ನವಾಗಿ ಮುಂದುವರಿಸುವವರಾದರು. ಕೊನೆ ಕೊನೆಯ ಕೆಲವು ಅರಸರನ್ನುಳಿದು ಮಿಕ್ಕ ಅರಸರೆಲ್ಲರು ಕನ್ನಡದ ಅತ್ಯಂತ ಅಭಿಮಾನಿಗಳೂ ಕನ್ನಡದ ಪ್ರಭಾವಕ್ಕೆ ಮನಸೋತವರೂ ಆಗಿದ್ದರು ಎಂಬುದು ನಿಸ್ಸಂದಿಗ್ಧವಾಗಿದೆ. ಈ ಉಳಿದವರಾದರೂ ವಿಜಯನಗರದ ಪರಂಪರಾಭಿಮಾನಿಗಳಾದುದರಿಂದ ಕನ್ನಡದಲ್ಲಿ ಆದರವುಳ್ಳವರೂ ಕರ್ನಾಟಕದ ಹಿತಚಿಂತಕರೆ ಆಗಿದ್ದರು.

ಅನುಚಿತವಾದ ಸ್ಪರ್ಧೆಗೆ ಸಿಲುಕಿದ ಕೆಲ ಆಧುನಿಕರು ವಿಜಯನಗರದ ಕನ್ನಡತನದ ಬಗೆಗೆ ಸಂಶಯಗೊಳ್ಳುತ್ತಿರುವರು. ಆದರೆ ವಿಜಯನಗರದ ಕಾಲದಲ್ಲಿ ಹೀಗೆ ಯಾರೂ ಸಂಶಯಗೊಂಡಿರಲಿಲ್ಲವೆಂಬುದು ಅನೇಕ ಪ್ರಮಾಣಗಳಿಂದ ವ್ಯಕ್ತವಾಗುತ್ತದೆ. ಆಗಿನ ಸಮಕಾಲಿಕರಾದ ಲೇಖಕರು ಮತ್ತು ಗ್ರಂಥಕಾರರು, ಈ ದೇಶದವರು ಮತ್ತು ಪರದೇಶದವರು, ಆಂಧ್ರರು ಮತ್ತು ತಮಿಳರು, ಯಾರೇ ಇರಲಿ, ಅವರು ವಿಜಯನಗರವನ್ನು ಕರ್ನಾಟಕಸಾಮ್ರಾಜ್ಯವೆಂದೂ ಅರಸರನ್ನು ಕರ್ನಾಟಕದ ಅರಸರೆಂದೂ ನಿರ್ದೇಶಿಸಿರುವರು. ಈ ಪ್ರಮಾಣಗಳನ್ನೆಲ್ಲ ಹೇಳುವುದಾದರೆ ಅದೊಂದು ಸ್ವತಂತ್ರ ಗ್ರಂಥವೆ ಆಗುವುದು. ಆದುದರಿಂದ ಅತಿ ಸಂಕ್ಷೇಪವಾಗಿ ಕೇವಲ ದಿಗ್ದರ್ಶನವೆಂದು ಕೆಲವು ಮುಖ್ಯ ಅಂಶಗಳನ್ನಷ್ಟೆ ಇಲ್ಲಿ ಸೂಚಿಸಿ ಬಿಡುವೆನು.

೧. ಹೊಯ್ಸಳರು ಕನ್ನಡಿಗರು. ಅವರ ಸಾಮ್ರಾಜ್ಯವು ಕರ್ನಾಟಕ ಸಾಮ್ರಾಜ್ಯವು. ಸಂಗಮರು ಹೊಯ್ಸಳ ಸಾಮ್ರಾಜ್ಯದ ಅತ್ಯಂತ ಅಭಿಮಾನಿಗಳಾಗಿದ್ದು, ಅವರ ಪರಂಪರೆಯಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಮುಂದುವರಿಸಿದರು.

೨. ಸುಮಾರು ೨೫೦ ವರ್ಷಗಳ ವರೆಗೆ, ಅರವೀಡು ಮನೆತನದ ಆಳಿಕೆಯ ಕೆಲಭಾಗದ ವರೆಗೂ ಶ್ರೀವಿರೂಪಾಕ್ಷನು ವಿಜಯನಗರ ಸಾಮ್ರಾಜ್ಯದ ಅಧಿಷ್ಠಾಯಕ ದೇವನಾಗಿದ್ದನು. ಆತನ ಗೌರವ ಸೂಚಕವಾಗಿ '**ಶ್ರೀವಿರೂಪಾಕ್ಷ**' ಎಂಬ ಕನ್ನಡ ಅಂಕಿತವು ವಿಜಯನಗರದ ಎಲ್ಲ ಶಾಸನಗಳಲ್ಲಿಯೂ ಕಾಣಬರುತ್ತದೆ. ಅರವೀಡು

ಮನೆತನದ ಕೊನೆಯ ಆಳಿಕೆಯಲ್ಲಿ ಶಾಸನದ ಮುದ್ರಿಕೆಯು ಬೇರೆಯಾಗಿ 'ಶ್ರೀ ರಾಮ' ಎಂದಿದ್ದರೂ ಅದರ ಲಿಪಿಯು ಮಾತ್ರ ಕನ್ನಡವೆ. [Sal. I, P. 38]

೩. ಹೊಯ್ಸಳರ **ದೈವತವೂ** ಕನ್ನಡ ದೇವನೂ ಆದ **ಬೇಲೂರ ಚೆನ್ನಕೇಶವನಲ್ಲಿ** ವಿಜಯನಗರದ ಎಲ್ಲ ಅರಸರಿಗೆ ಅತಿಶಯವಾದ ಭಕ್ತಿಯಿದ್ದಿತು. ತುಳುಮನೆತನದ **ಕೃಷ್ಣದೇವರಾಯ**, ಸದಾಶಿವರಾಯ ಇವರುಗಳ ಕೆಲವು ಶಾಸನಗಳಲ್ಲಿ ಈ ದೇವನು ಕುಲಾಧಿದೇವತೆ ಎಂದು ನಿರ್ದಿಷ್ಟನಾಗಿದ್ದಾನೆ. [Ibid p. 39]

೪. ಶೃಂಗೇರೀ ಪೀಠವು ಮತ್ತು ಶ್ರೀವಿದ್ಯಾರಣ್ಯರು ಇವರುಗಳ ಪ್ರಭಾವವು ವಿಜಯನಗರ ಸಾಮ್ರಾಜ್ಯದ ಮತ್ತು ಸಮ್ರಾಜರ ಮೇಲೆ ಕೊನೆಯ ವರೆಗೆ ಬಾಳಿತು.

ಮನೆತನಗಳ ದೃಷ್ಟಿಯಿಂದ ವಿಚಾರ ಮಾಡಿದರೂ ಇದೆ ಮಾತು ಸಿದ್ಧವಾಗುತ್ತದೆ.

## ಸಂಗಮ ಮನೆತನ

೫ ಸಂಗಮರು ಅಚ್ಚ ಕನ್ನಡಿಗರು. ಅವರ ಜನ್ಮಸ್ಥಳ, ಅಭಿಮಾನ, ಸಂಬಂಧಗಳು, ಎಲ್ಲವು ಕರ್ನಾಟಕದಲ್ಲಿ. [Heras p.73& 118-22]

೬. ಗಂಗಾದೇವಿಯು 'ಮಧುರಾವಿಜಯ'ದಲ್ಲಿ ಬುಕ್ಕರಾಯನನ್ನು ಕುರಿತು **'ಕರ್ಣಾಟಲೋಕನಯನೋತ್ಸವಪೂರ್ಣಚಂದ್ರ :'** ಎಂದು ಹೇಳುವಳು.

೭. ವಿನುಕೊಂಡ ವಲ್ಲಭರಾಯನಿಂದ ರಚಿತವಾದ ಕ್ರೀಡಾಭಿರಾಮಂ ಎಂಬ ತೆಲುಗು ಗ್ರಂಥದಲ್ಲಿ ಬುಕ್ಕರಾಯನನ್ನು ಕುರಿತು **'ಕರ್ಣಾಟಕ್ಷಿತಿನಾಥ'** ಎಂದು ಹೇಳಲಾಗಿದೆ. (Sources, p. 56)

೮. ಆಂಧ್ರ ಕವಿಯಾದ ಶ್ರೀನಾಥನು ವಿಜಯನಗರ ರಾಜ್ಯ ಮತ್ತು ಇಮ್ಮಡಿ ದೇವರಾಯ ಇವರನ್ನು ಕುರಿತು **ಕನ್ನಡ**

**ರಾಜ್ಯಲಕ್ಷ್ಮಿ** ಮತ್ತು **ಕರ್ಣಾಟ ಕ್ಷಿತಿಪಾಲ** ಎಂದು ಹೇಳುವನು. (Ibid, pp. 61--62)

೯. ಇಮ್ಮಡಿ ದೇವರಾಯನ ಲಂಕೆಯ ದಂಡಯಾತ್ರೆಯ ವಿಷಯವನ್ನು ಹೇಳುವಾಗ ಸಿಂಹಲೀ ಭಾಷೆಯ ಕವನಗಳಲ್ಲಿ ಜಾಫ್ನಾ ಪ್ರದೇಶದ ಜನರು ಕನ್ನಡಿಗರು, ಈ ದಂಡಯಾತ್ರೆಯು ಕನ್ನಡಿಗರದು ಎಂದು ನಿರ್ದಿಷ್ಟವಾಗಿರುತ್ತದೆ. (M. G. p. 1580)

ಸಾಳುವ ಮನೆತನ

೧೦. ಪೀನ ವೀರಭದ್ರನ ಸಪ್ತಾಂಗಪದ್ಧತಿ ಎಂಬ ತೆಲುಗು ಕಾವ್ಯದಲ್ಲಿ ಸಾಳುವ ನರಸಿಂಹನು **'ರಾಯ ಮೂವರ ಗಂಡ'** ಎಂಬ ಕನ್ನಡ ಬಿರುದಿನಿಂದ ಉಕ್ತನಾಗಿದ್ದಾನೆ. (Ibid, p 1690)

೧೧. ಸಾಳುವ ಇಮ್ಮಡಿ ನರಸಿಂಹನ ಕಾಲದಲ್ಲಿ ರಾಮನಾಡ ಜಿಲ್ಲೆಯ ಒಂದು ಶಾಸನದಲ್ಲಿ ಆ ಆಳಿಕೆಯನ್ನು ಕುರಿತು **ಕನ್ನಡಿಗರ ರಾಜ್ಯ**ವೆಂದು ನಿರ್ದಿಷ್ಟವಾಗಿದೆ. (Ibid, p. 1744)

ತುಳು ಮನೆತನ

೧೨. ಕೃಷ್ಣ ದೇವರಾಯನಿಗೆ **ಕನ್ನಡರಾಜ್ಯರಮಾರಮಣ** ಎಂಬ ಬಿರುದು ಇದ್ದಿತು.

೧೩. ಕೃಷ್ಣದೇವರಾಯನ ತೆಲುಗು ಕೃತಿಯಾದ ಆಮುಕ್ತ-ಮಾಲ್ಯದಾ ಇದರಲ್ಲಿ ವಿಜಯನಗರ ರಾಜ್ಯವನ್ನು ಕುರಿತು **ಕರ್ಣಾಟ ಧರಾ** ಎಂದು ಹೇಳಲಾಗಿದೆ. (Sources p. 137)

೧೪. ನಂದಿ ತಿಮ್ಮಯ್ಯನ ಪಾರಿಜಾತಾಪಹರಣಮು ಎಂಬ ತೆಲುಗು ಕಾವ್ಯದಲ್ಲಿ ಕೃಷ್ಣ ದೇವರಾಯನನ್ನು ಕುರಿತು **ಶ್ರೀಕರ್ಣಾಟ ಮಹೀಶ** ಎಂದು ಉಕ್ತವಾಗಿದೆ. (Ibid, p. 142)

೧೫. ಕೃಷ್ಣದೇವರಾಯನ ಜಾಂಬವತೀಕಲ್ಯಾಣಂ ಎಂಬ ಸಂಸ್ಕೃತ ನಾಟಕದಲ್ಲಿ ವಿಜಯನಗರದ ಶ್ರೀವಿರೂಪಾಕ್ಷ ದೇವರನ್ನು ಕುರಿತು **ಕರ್ಣಾಟರಾಜ್ಯರಕ್ಷಾಮಣಿ'** ಎಂದು ಸಂಬೋಧಿಸಲಾಗಿದೆ. (Ibid.)

೧೬. ಸಾಳುವ ತಿಮ್ಮನ ಚಂಪೂಭಾರತ ಟೀಕೆಯಲ್ಲಿ ಕೃಷ್ಣದೇವ ರಾಯನನ್ನು ಕುರಿತು **ಕರ್ಣಾಟೇಶ್ವರ ಶ್ರೀಕೃಷ್ಣರಾಯ** ಎಂದು ಹೇಳಲಾಗಿದೆ. (Ibid, p. 143)

ಅರವೀಡು ಮನೆತನ

೧೭. ವಸುಚರಿತ್ರ ಎಂಬ ತೆಲುಗು ಕಾವ್ಯದಲ್ಲಿ ಅಳಿಯ ರಾಮ ರಾಯನು **ಕರ್ನಾಟಕ ರಾಜ್ಯವನ್ನು** ಮತ್ತೆ ಸ್ಥಾಪಿಸಿದನು ಎಂದು ಹೇಳಿದೆ. (M. G. p. 2017)

೧೮. ರಾಮರಾಯನಿಗೆ **ಪ್ರಾಜ್ಯಕರ್ಣಾಟರಾಜ್ಯಸ್ಥಾಪನಾ-ಚಾರ್ಯ** ಎಂಬ ಬಿರುದು ಇತ್ತು (ಹಿಂದೆ ಪುಟ ೧೪೮ ನೋಡಿ).

೧೯. ಅರವೀಡು ಮನೆತನದ ವೆಂಕಟಪತಿರಾಯನ ಶಾಸನದಲ್ಲಿ (ಕ್ರಿ. ಶ. ೧೬೦೧) ಆ ವಂಶದ ಪೂರ್ವಜರನ್ನು ಹೇಳುವಾಗ, ಚಾಳುಕ್ಯ ರಾಜ, ಬಿಜ್ಜಳ, ವೀರ ಹೇಮಾಳಿರಾಯ (ಪೆರ್ಮಾಡಿರಾಯ ಎಂದರೆ ಆರನೆಯ ವಿಕ್ರಮಾದಿತ್ಯ ?) ಇವರ ಹೆಸರುಗಳು ಬಂದಿವೆ. ಮುಂದೆ ಆತನು **ಕರ್ಣಾಟ ಸಿಂಹಾಸನವನ್ನು** ತನ್ನ ವಶಮಾಡಿಕೊಂಡನು ಎಂದು ಹೇಳಲಾಗಿದೆ. ಇದಲ್ಲದೆ ಸಂಸ್ಕೃತದಲ್ಲಿ ಬರೆದ ಈ ಶಾಸನದಲ್ಲಿ **ಹೊಸ ಬಿರುದರ ಗಂಡಃ, ರಾಯರಾಹುತ್ತಮಿಂಡಃ, ಭಾಷೆಗೆ ತಪ್ಪುವ ರಾಯರ ಗಂಡಃ, ಮೂರು ರಾಯರ ಗಂಡ,** ಮುಂತಾದ ಅಚ್ಚಗನ್ನಡ ಬಿರುದುಗಳು ಯಥೇಷ್ಟವಾಗಿ ಬಳಸಲಾಗಿವೆ. (E. I. IV, pp. 272—78)

೨೦. ಮಾಟ್ಲ ಅನಂತನ ಸಿದ್ಧೌತದ ಶಾಸನದಲ್ಲಿ (ಕ್ರಿ. ಶ. ೧೬೦೫) ವಿಜಯನಗರ ಸಮ್ರಾಜನನ್ನು **ಅಖಿಲ ಕರ್ನಾಟ ಸಿಂಹಾಸನಾಧೀಶ್ವರ** ಎಂದು ನಿರ್ದೇಶಿಸಲಾಗಿದೆ. (Sources, p. 249)

೨೧. ತಂಜಾವೂರ ನಾಯಕರ ಮಂತ್ರಿಯಾದ ಗೋವಿಂದ ದೀಕ್ಷಿತನ ಮಗ ಯಜ್ಞನಾರಾಯಣ ದೀಕ್ಷಿತನು ಬರೆದ ಸಾಹಿತ್ಯ-ರತ್ನಾಕರ ಎಂಬ ಸಂಸ್ಕೃತ ಗ್ರಂಥದಲ್ಲಿ ವಿಜಯನಗರ ಸಮ್ರಾಜರಾದ

ವೆಂಕಟಪತಿದೇವರಾಯ ಮತ್ತು ಮುಮ್ಮಡಿ ಶ್ರೀರಂಗರನ್ನು ಕುರಿತು **ಕರ್ಣಾಟಕ ಭೂಪತಿ** ಮತ್ತು **ಕರ್ನಾಟನೃಪ** ಎಂದು ಉಲ್ಲೇಖಿಸಲಾಗಿದೆ. (Sources, p- 280)

೨೨. ರಾಮಭದ್ರಾಂಬೆಯ ರಘುನಾಥಾಭ್ಯುದಯಂ ಎಂಬ ಸಂಸ್ಕೃತ ಕಾವ್ಯದಲ್ಲಿ ವಿಜಯನಗರ ರಾಜ್ಯವನ್ನು **ಕರ್ನಾಟ**ವೆಂದೂ ವಿಜಯನಗರ ಸಮ್ರಾಜನಾದ ವೆಂಕಟಪತಿರಾಯನನ್ನು **ಕರ್ಣಾಟದೊಡೆಯ**ನೆಂದೂ (ಕರ್ಣಾಟನೇತುಃ) ಉಕ್ತವಾಗಿದೆ. (Ibid, p. 293)

೨೩. ಆರ್ವಡಿ ಶ್ರೀರಂಗರಾಯನ ಶಾಸನದಲ್ಲಿ (ಕ್ರಿ ವ. ೧೬೪೪) ವಿಜಯನಗರದ ಅರಸೊತ್ತಿಗೆಯನ್ನು **ಕರ್ಣಾಟ ಸಿಂಹಾಸನ**ವೆಂದು ನಿರ್ದೇಶಿಸಲಾಗಿದೆ (I. A. XIII, pp. 156—60)

ಇದಲ್ಲದೆ ಮುಹಮ್ಮದೀಯ, ಪೋರ್ತುಗೀಜ ಮೊದಲಾದ ಅನೇಕ ಸಮಕಾಲೀನ ಲೇಖನಗಳಲ್ಲಿ ವಿಜಯನಗರವನ್ನು ಕುರಿತು ಕರ್ನಾಟಕ ರಾಜ್ಯ, ಕರ್ನಾಟಕ ಅರಸರು ಎಂದು ಮುಂತಾಗಿ ಹೇಳುವ ಅನೇಕ ನಿರ್ದೇಶಗಳಿವೆ. ವಿಸ್ತಾರಭಯದಿಂದ ಇಲ್ಲಿ ಅವುಗಳನ್ನು ಹೇಳಿಲ್ಲ.

---

## ಎರಡನೆಯ ಪರಿಶಿಷ್ಟ

# ವಿದ್ಯಾರಣ್ಯರ ವಾದಭೂಮಿ

ಹಿಂದಿನ ಚರಿತ್ರೆಯಲ್ಲಿ (ಪು. ೨೫-೨೬) ಪರಂಪರಾಪಕ್ಷದ ಅಭಿಪ್ರಾಯದ ಸ್ಥೂಲವಾದ ರೂಪರೇಖೆಯನ್ನು ಕಾಣಿಸಲಾಗಿದೆ. ಇಲ್ಲಿ ಪ್ರಾಮುಖ್ಯವಾಗಿ ವಿರೋಧಿಪಕ್ಷದ ಅಭಿಪ್ರಾಯಗಳ ಮುಖ್ಯಾಂಶಗಳನ್ನು ಸಂಕ್ಷೇಪವಾಗಿ ಹೇಳುವೆ.

**೧. ಫಾದರ ಹೆರಾಸರ ಅತಿವಾದ** : ೧ ಹರಿಹರ ಬಂಧು ಗಳು ವಿಜಯೋತ್ಸವಪ್ರಸಂಗದಲ್ಲಿ (೧೩೪೬) ಶೃಂಗೇರಿಯಲ್ಲಿ ದಾನ ಮಾಡುವಾಗ ವಿದ್ಯಾರಣ್ಯರ ನಿರ್ದೇಶವಿಲ್ಲ. ಅದು ಏಕೆ? ೨. ಮುಂದಿನ (೧೩೫೬) ಶೃಂಗೇರಿಯ ದಾನದಲ್ಲಿಯೂ ವಿದ್ಯಾರಣ್ಯರ ನಿರ್ದೇಶವಿಲ್ಲ! ಈ ಮೊದಲಾದ ದಾನಗಳಲ್ಲಿ ವಿದ್ಯಾತೀರ್ಥರ ಹೆಸರು ಬರುವುದೆ ಹೊರತು ವಿದ್ಯಾರಣ್ಯರದು ಬರುವುದಿಲ್ಲ. ೩. ಮುಂದೆ ವಿದ್ಯಾರಣ್ಯರಿಗೆ ಬುಕ್ಕ, ಇಮ್ಮಡಿ ಹರಿಹರ ಮೊದಲಾದವರು ದಾನಗಳನ್ನು ಕೊಟ್ಟ ಹಲವು ಶಾಸ ನಗಳಿವೆ. ಅವುಗಳಲ್ಲಿ ವಿದ್ಯಾರಣ್ಯರು ವಿಜಯನಗರಸ್ಥಾಪಕರೆಂದು ಎಲ್ಲಿಯೂ ಹೇಳಿಲ್ಲ! ೪. ವಿಜಯನಗರವನ್ನು ಕುರಿತು ವಿದ್ಯಾನಗರ, ವಿದ್ಯಾನಗರಿ ಎಂದು ಹೇಳುವ ಪ್ರಾಮಾಣಿಕ ಶಾಸನಗಳು ಹೆಚ್ಚಾಗಿ ಮುಂದೆ ಮುಂದೆ ೧೫-೧೬ ಶತಮಾನಗಳಲ್ಲಿ ದೊರೆವುವು. ೫. ಶೃಂಗೇರಿಯ ಜಗದ್ಗುರುಗಳು ವಿಜಯನಗರಸಾಮ್ರಾಜ್ಯದ ಗೌರವವು ತಮ್ಮ ಪೀಠಕ್ಕೆ ಬರಬೇಕೆಂಬ ಹವ್ಯಾಸದಿಂದ ೧೬ನೆಯ ಶತಮಾನದ ಆರಂಭದಲ್ಲಿ ವಿದ್ಯಾರಣ್ಯರು ವಿಜಯನಗರವನ್ನು ಸ್ಥಾಪಿಸಿದರು ಎಂಬ ಸುಳ್ಳು ಕಥೆ ಯನ್ನು ತೇಲಿ ಬಿಟ್ಟರು. (Heras, pp. 15-35)

**೨. ಶೃಂಗೇರಿಯ ಪಟ್ಟಾವಳಿಯಿಂದ ವ್ಯಕ್ತವಾಗುವ ಗುರುಪರಂಪರೆ** :

ವಿದ್ಯಾಶಂಕರ ತೀರ್ಥ: ೧೨೨೮-೧೩೩೩ (೧೦೫ ವರ್ಷ)

|

ಭಾರತೀಕೃಷ್ಣತೀರ್ಥ: ೧೩೨೮-೧೩೮೦ (೫೨ ವರ್ಷ)
(ಪೂರ್ವಾಶ್ರಮದ ವಿದ್ಯಾರಣ್ಯರ ಅಣ್ಣ ಭೋಗನಾಥ)

|

ಶ್ರೀವಿದ್ಯಾರಣ್ಯ: ೧೩೩೧-೧೩೮೬ (೫೫ ವರ್ಷ)

(ಶ್ರೀ. ಸಾಲತೊರೆಯವರ ಅಭಿಪ್ರಾಯದಂತೆ) **ಶಾಸನಪ್ರಮಾಣ ದಿಂದ ತಿಳಿದು ಬರುವ ಪರಂಪರೆ** :

ವಿದ್ಯಾತೀರ್ಥ : ಸು. ೧೩೪೭—೧೩೭೫
|
ವಿದ್ಯಾರಣ್ಯ : ೧೩೭೫–೮೬

(A. H. J. April, 1935, pp. 39–42)

**೩. ವಿದ್ಯಾರಣ್ಯರು ಮತ್ತು ಮಾಧವಾಚಾರ್ಯರು**

**ಭಿನ್ನರು:** ಸಾಯಣಾಚಾರ್ಯರ ತಮ್ಮಂದಿರಾದ ಮಾಧವಾಚಾರ್ಯರು ಯತ್ಯಾಶ್ರಮವನ್ನು ಸ್ವೀಕರಿಸಿ ವಿದ್ಯಾರಣ್ಯರೆಂದು ಪ್ರಸಿದ್ಧರಾದರು ಎಂಬುದು ಪರಂಪರಾಗತವಾದ ಮತವು. ಈ ಮತವು ಸರಿಯಾದುದಾಗಿಲ್ಲ; ಮಾಧವಾಚಾರ್ಯರು ಮತ್ತು ವಿದ್ಯಾರಣ್ಯರು ಏಕವ್ಯಕ್ತಿಯಲ್ಲ ಎಂಬ ವಾದವು ಈಗೀಗ ಮುಂದೆ ಬಂದು ಬಹಳ ಪುರಸ್ಕಾರವನ್ನು ಹೊಂದುತ್ತಲಿದೆ. ಏಕಪಕ್ಷ, ಭಿನ್ನಪಕ್ಷ ಈ ಎರಡೂ ಪಕ್ಷಗಳನ್ನೆತ್ತಿ ಹಿಡಿಯಲು ಸಾಕಷ್ಟು ಪಂಡಿತರು ಪ್ರಯತ್ನಿಸಿದ್ದಾರೆ. ಆದರೆ ಆಧುನಿಕ ವಿದ್ವಾಂಸರ ಒಲವು ಭಿನ್ನಪಕ್ಷದ ಕಡೆಗೆ ಹೆಚ್ಚು ಹರಿಯುತ್ತಲಿದೆ ಎಂದು ಹೇಳಬಹುದು. ಭಿನ್ನಪಕ್ಷದ ಯುಕ್ತಿವಾದದ ಮುಖ್ಯವಾದ ಕೆಲವು ಅಂಶಗಳನ್ನು ಇಲ್ಲಿ ಕಾಣಿಸುವೆ.

೧. ಸಂಬಲರ್ಹವಾದ ಒಂದು ಶಾಸನದಲ್ಲಿಯೂ ಮಾಧವ-ವಿದ್ಯಾರಣ್ಯರು ಒಬ್ಬರೆ ಎಂದು ಹೇಳಲಾಗಿಲ್ಲ.

೨. ಶೃಂಗೇರಿಯ ಸಂಪ್ರದಾಯಗಳನ್ನು ತಿಳುಹುವ ವಿದ್ಯಾರಣ್ಯ-ಕಾಲಜ್ಞಾನ, ಗುರುವಂಶಕಾವ್ಯ ಮೊದಲಾದ ಗ್ರಂಥಗಳಿಂದ ಮಾಧವ-ವಿದ್ಯಾರಣ್ಯರು ಭಿನ್ನರೆಂದು ಪ್ರತೀತವಾಗುತ್ತದೆ.

೩. ಮಾಧವಾಚಾರ್ಯರನ್ನು ಕುರಿತು ಬರುವ ನಿರ್ದೇಶಗಳೆಲ್ಲ ಬುಕ್ಕರಾಯನ ಕಾಲದವು. ವಿದ್ಯಾರಣ್ಯರನ್ನು ಕುರಿತ ನಿರ್ದೇಶಗಳೆಲ್ಲ ಪ್ರಾಮುಖ್ಯವಾಗಿ ಇಮ್ಮಡಿ ಹರಿಹರನ ಕಾಲದವು. ೧೩೭೫ ನೆಯ ವರ್ಷಕ್ಕಿಂತ ಹಿಂದೆ ವಿದ್ಯಾರಣ್ಯರ ಹೆಸರು ಬರುವ ಪ್ರಾಮಾಣಿಕವಾದ ಒಂದು ಶಾಸನವೂ ಇದುವರೆಗೆ ದೊರೆತಿಲ್ಲ.

೪. ೧೩೩೬ರಿಂದ ೧೩೮೬ರ ವರೆಗೆ ಪರಂಪರಾಗತ ಮತದಂತೆ ವಿದ್ಯಾರಣ್ಯ ಯತಿಗಳ ಬಗೆಗೆ ಉಲ್ಲೇಖಗಳು ದೊರೆಯುತ್ತವೆ. ಈ

ನಡುವಿನ ಕಾಲದಲ್ಲಿ ರಚಿತವಾದುವೆಂದು ವಿದಿತವಾಗುವ ಮಾಧವಾ ಚಾರ್ಯರ ಗ್ರಂಥಗಳು ದೊರೆತಿವೆ ( ಉದಾ: ಕಾಲಮಾಧವ-೧೩೫೯). ಇವುಗಳಲ್ಲಿ ಗ್ರಂಥಕಾರನ ಉಲ್ಲೇಖವು ಮಾಧವಾಚಾರ್ಯನೆಂಬ ಗೃಹ ಸ್ಥಾಶ್ರಮದ ಹೆಸರಿನಿಂದ ಸ್ಪಷ್ಟವಾಗಿ ಬರುತ್ತದೆ. ಇ. ಇ.

---

## ಮೂರನೆಯ ಪರಿಶಿಷ್ಟ

# ವಿಜಯನಗರದ ನಾಣ್ಯಗಳು

ವಿಜಯನಗರದ ಆಳಿಕೆಯಲ್ಲಿ ಅನೇಕ ಪ್ರಕಾರದ ನಾಣ್ಯಗಳು ಬಳಕೆ ಯಲ್ಲಿದ್ದುವು. ಇವು ಬೆಳ್ಳಿ, ಚಿನ್ನ, ತಾಮ್ರ ಈ ಮೂರು ಧಾತುವಿನವು ಆಗಿದ್ದುವು. ಇವುಗಳಲ್ಲಿ ಬಂಗಾರದವೆ ಹೆಚ್ಚು ರೂಢಿಯಲ್ಲಿದ್ದುವು. ಚಿನ್ನದ ನಾಣ್ಯಗಳಲ್ಲಿ ವರಾಹ, ಅರ್ಧವರಾಹ, ಕಾಲುವರಾಹ, ಪಣ, ಅರ್ಧಪಣ ಮುಂತಾದ ಪ್ರಭೇದಗಳಿದ್ದುವು. ಈ ನಾಣ್ಯಗಳು ವಿಜಯ ನಗರದ ಪೂರ್ವಕಾಲದಲ್ಲಿ ಹೊಯ್ಸಳ ಆಳಿಕೆಯಲ್ಲಿಯೂ ಪ್ರಚಾರದಲ್ಲಿ ದ್ದುವು. ವಿಜಯನಗರದವರು ಅವುಗಳನ್ನೇ ಎತ್ತಿಕೊಂಡು ವಿಶೇಷ ವಾಗಿ ಬಳಕೆಗೆ ತಂದರು.

**'ವರಾಹ' ವು** ಬಾದಾಮಿ ಚಾಲುಕ್ಯರ ಸುಪ್ರಸಿದ್ಧವಾದ ರಾಜ ಮುದ್ರೆ (Crest) ಯಾಗಿದ್ದಿತು. ಇವರ ಚಿನ್ನದ ನಾಣ್ಯಗಳಲ್ಲಿ ಮುದ್ರಿ ತವಾದ ಈ ಚಿಹ್ನೆಯಿಂದ ಈ ನಾಣ್ಯಗಳಿಗೆ 'ವರಾಹ' ಎಂಬ ಹೆಸರು ಬಳಕೆಯಲ್ಲಿ ಬಂದಿತು. ಈ ವರಾಹವು ಬಹುಮಾನ್ಯತೆಯನ್ನು ಪಡೆದು ಮುಂದಿನ ಅರಸರಿಗೆ ಅನುಕರಣೀಯವಾದ ಪ್ರಮಾಣಭೂತ ನಾಣ್ಯ (standard coin) ವಾಯಿತು.

ಆ ಕಾಲದ ಪೋರ್ತುಗೀಜ ಮೊದಲಾದ ಪಾಶ್ಚಾತ್ಯ ಲೇಖಕರು ಈ ವರಾಹವನ್ನು 'ಪಗೋಡ' ಎಂದು ಕರೆದಿರುವರು. ಈ ನಾಣ್ಯಗಳ

ಮೇಲೆ ಒಮ್ಮೊಮ್ಮೆ ದೇವಾಲಯದ ಚಿಹ್ನವಿರುವದು. 'ಪಗೋಡ' ಎಂಬುದು ಸಾಮಾನ್ಯವಾಗಿ ಹಿಂದು ಗುಡಿಗಳಿಗೆ ರೂಢವಾದ ಪೋರ್ತುಗೀಜ ಶಬ್ದವು. ಆದರಿಂದ ವರಾಹ ಎಂಬುದಕ್ಕೆ 'ಪಗೋಡ' ಎಂಬ ಶಬ್ದವು ರೂಢವಾಯಿತು. 'ಪಗೋಡ' ಎಂಬುದು 'ಭಗವತಿ' ಎಂಬ ಶಬ್ದದ ಅಪಭ್ರಷ್ಟ ರೂಪವೆಂದು ವ್ಹಿನ್ಸೆಂಟ ಸ್ಮಿಥರ ಅಭಿಪ್ರಾಯವು. ಇದರಂತೆ 'ಫನಂ' ಎಂದು ಈ ಪಾಶ್ಚಾತ್ಯ ಲೇಖಕರ ಬರೆಹಗಳಲ್ಲಿ ನಿರ್ದಿಷ್ಟವಾಗುವ ನಾಣ್ಯವು 'ಪಣ' ವೆಂಬುದು. ಈ ಕಾಲದಲ್ಲಿ ದಕ್ಷಿಣಭಾರತದಲ್ಲಿ ಪ್ರಚಾರದಲ್ಲಿರುವ 'ಕಾಸು' ಎಂಬ ತಾಮ್ರದ ನಾಣ್ಯದ ಹೆಸರಿನಿಂದ ಇಂಗ್ಲಿಶಿನಲ್ಲಿ ಕ್ಯಾಶ್ (cash) ಎಂಬ ಶಬ್ದವು ರೂಢವಾಗಿದೆ ಎಂದು ಸಂಶೋಧಕರು ಮತಪಡುವರು. (Brown p. 57)

ಅರ್ಧವರಾಹಕ್ಕೆ 'ಹೊನ್' ಎಂಬ ಹೆಸರು ಇದ್ದಿತು. ಆ ಕಾಲದ ಮುಸಲ್ಮಾನ ಲೇಖಕರ ಬರೆಹಗಳಲ್ಲಿ ಈ ಹೆಸರು 'ಹೂನ್' ಎಂಬ ರೂಪದಲ್ಲಿ ಹೆಚ್ಚಾಗಿ ಬರುವುದು. ವಿಜಾಪುರ, ಮೊಗಲರ ರಾಜ್ಯಗಳಲ್ಲಿ ಚಿನ್ನದ ನಾಣ್ಯಕ್ಕೆ 'ಮೊಹರ್' ಎಂಬ ಹೆಸರು ರೂಢಿಯಲ್ಲಿ ಬಂದಿತು.

ವಿಜಯನಗರದ ಪಗೋಡ ಅಥವಾ ವರಾಹದ ತೂಕವು ಸಾಮಾನ್ಯವಾಗಿ ಕಳಂಜು ಬೀಜದ ತೂಕದಷ್ಟು ಎಂದರೆ ೫೨ ಗ್ರೇನ್ (೨೬ ಗುಂಜಿ). 'ಫನಂ' ಅಥವಾ 'ಪಣ'ದ ತೂಕವು ಮಂಜಾಡಿ ಬೀಜದ ತೂಕದಷ್ಟು, ಅಥವಾ ವರಹದ ೧/೧೦ ರಷ್ಟು, ಎಂದರೆ ೫-೬ ಗ್ರೇನ್ (ಸು. ೩ ಗುಂಜಿ). ವಿಜಯನಗರದ ನಾಣ್ಯಗಳಲ್ಲಿ ಮುಖ್ಯವಾದವುಗಳ ಈಗಿನ ಬೆಲೆಯು ಸಾಧಾರಣವಾಗಿ ಹೀಗೆ ಆಗುವುದು:

ಪಗೋಡ ಅಥವಾ ವರಾಹ = ೩½—೪ ರೂಪಾಯಿ.*
ಅರ್ಧವರಾಹ ಅಥವಾ ಹೊನ್ನು = ಸು. ೨ ರೂಪಾಯಿ
ಕಾಲುವರಾಹ = ಸು. ೧ ರೂಪಾಯಿ
(ಚಿನ್ನದ) ಫನಂ ಅಥವಾ ಪಣ = ೬½ ಆಣೆ

* ಈಗಿನ ಅಸ್ವಾಭಾವಿಕವಾದ ಬಂಗಾರದ ಬೆಲೆಯಂತೆ ೭—೮ ರೂ.






ಬುಕ್ಕರಾಯುಸ ವರಾಹ ಇಮ್ಮಡಿ ಹರಿಹರನ ಅರ್ಧವರಾಹ

೩




ಇಮ್ಮಡಿ ದೇವರಾಯನ ವರಾಹ

೪ ೫






ಇಮ್ಮಡಿ ದೇವರಾಯನ ತಾಮ್ರದ ನಾಣ್ಯಗಳು

೬ ೭






ಕೃಷ್ಣದೇವರಾಯನ ವರಾಹಗಳು

೮ ೯






ಮೈಸೂರ ವುುಮ್ಮಡಿ ಕೃಷ್ಣರಾಜನ ವರಾಹ ಪಣ ನಾಣ್ಯವು

ಈ ವರಾಹಾದಿಗಳ ಮೇಲೆ ಆ ಆ ರಾಜನ ಹೆಸರಿನ ಹಿಂದೆ 'ಪ್ರತಾಪ' ಎಂಬ ಪದವಿಯು ಸಾಮಾನ್ಯವಾಗಿ ಇರುತ್ತಿದ್ದುದರಿಂದ ಕೆಲ ಲೇಖಕರು ಇವುಗಳನ್ನು 'ಪ್ರತಾಪ' ಎಂದೂ ಕರೆದಿರುವರು.

ಈ 'ಪ್ರತಾಪ' ಎಂಬ ಪದವಿಯು ವಿಜಯನಗರದ ಅರಸರ ನಾಣ್ಯಗಳನ್ನು ಗುರುತಿಸಲು ಸಹಾಯಕವಾದ ಒಂದು ಮುಖ್ಯ ಲಕ್ಷಣವಾಗಿದೆ. ಸಾಮಾನ್ಯವಾಗಿ, 'ಪ್ರತಾಪ' ಎಂಬ ಬಿರುದಿನ ಅಕ್ಷರಗಳಿಲ್ಲದ ನಾಣ್ಯಗಳು ವಿಜಯನಗರದವು ಆಗಿರಲಿಕ್ಕಿಲ್ಲ ಎಂಬ ಸಂಶಯಕ್ಕೆ ಎಡೆಯನ್ನು ಉಂಟು ಮಾಡುತ್ತವೆ. ಉದಾಹರಣಾರ್ಥವಾಗಿ: 'ಶ್ರೀಪ್ರತಾಪ ಕೃಷ್ಣರಾಯ' (ನಾಗರಿ) ಎಂಬ ಬರೆಹವುಳ್ಳ ನಾಣ್ಯಗಳು ಕೃಷ್ಣದೇವರಾಯನವು; ಅದೇ, ಬರಿಯ 'ಶ್ರೀಕೃಷ್ಣರಾಜಾ' (ನಾಗರಿ) ಎಂಬ ಬರೆಹವುಳ್ಳವು ಮೈಸೂರ ಮುಮ್ಮಡಿ ಕೃಷ್ಣರಾಜನವು ಎಂದು ವಿದಿತವಾಗುತ್ತದೆ.

ಅಬ್ದುಲ ರಜಾಕನು ಅರ್ಧವರಾಹಗಳನ್ನು 'ಪರ್ತಾಬ' ಎಂದು ನಿರ್ದೇಶಿಸುವನು. ಇದಲ್ಲದೆ ಆತನು 'ತಾರ' ಎಂಬ ಬೆಳ್ಳಿಯ ನಾಣ್ಯದ ಹೆಸರನ್ನು, 'ಜೀತಲ' ಎಂಬ ತಾಮ್ರದ ನಾಣ್ಯದ ಹೆಸರನ್ನು ಹೇಳುವನು. ಇವುಗಳ ಮೂಲ ಹೆಸರುಗಳೇನೋ ತಿಳಿವುದಿಲ್ಲ. ಇವುಗಳ ಪರಿಮಾಣವು ಹೀಗೆ: ತಾರ = ೧/೬ ಫನಂ ; ಜೀತಲ = ೧/೩ ತಾರ.

ವಿಜಯನಗರದ ಅರಸರ ನಾಣ್ಯಗಳು ವಿಶೇಷವಾಗಿ ದೊರೆತಿವೆ. ಇನ್ನೂ ಅಲ್ಲಲ್ಲಿ ಹೆಚ್ಚಾಗಿ ದೊರೆಯುತ್ತವೆ. ಇದುವರೆಗೆ ಹನ್ನೆರಡಕ್ಕಿಂತ ಹೆಚ್ಚಾದ ಬೇರೆ ಬೇರೆ ಅರಸರ ಅನೇಕ ನಾಣ್ಯಗಳು ಉಪಲಬ್ಧವಾಗಿವೆ. ಅವುಗಳ ಸಾಮಾನ್ಯವಾದ ಚಿನ್ಹಗಳು ಹೀಗೆ :

ಮುಮ್ಮೈ — ವೃಷಭ, ಗಜ, ಗಂಡಭೇರುಂಡ, ಶಿವ–ಪಾರ್ವತಿ, ವಿಷ್ಣು–ಲಕ್ಷ್ಮಿ, ವೆಂಕಟೇಶ ಇ. ದೇವತೆಗಳು.

ಹಿಮ್ಮೈ — ಆ ಆ ರಾಯನ ಹೆಸರು, ಕನ್ನಡ ಅಥವಾ ಸಂಸ್ಕೃತ ಲಿಪಿಯಲ್ಲಿ. ರಾಯನ ಹೆಸರಿನ ಹಿಂದೆ

ಸಾಮಾನ್ಯವಾಗಿ 'ಶ್ರೀ' ಮತ್ತು 'ಪ್ರತಾಪ' ಎಂಬ ಅಂಕಿತಗಳು ಇರುತ್ತವೆ.

ವಿಜಯನಗರದ ಕೆಲವು ನಾಣ್ಯಗಳು ವಿಶಿಷ್ಟವಾದ ಸಾಂಕೇತಿಕ ಹೆಸರುಗಳಿಂದ ಜನರಲ್ಲಿ ರೂಢವಾಗಿದ್ದುವು. ಅವುಗಳು ಹೀಗೆ :

**ದುರ್ಗಿ ಪಗೋಡ** : ಇವು ಮೂಲದಲ್ಲಿ ಕೃಷ್ಣದೇವರಾಯನ ವರಾಹಗಳು. ಮುಂದೆ ಚಿತ್ರದುರ್ಗದ ನಾಯಕರು ಇವುಗಳ ಅನುಕರಣವನ್ನು ಮಾಡಿ ಚಿತ್ರದುರ್ಗದ ಟಂಕಸಾಲೆಯಿಂದ ನಾಣ್ಯಗಳನ್ನು ಹೊರಡಿಸಿದರು. ಆದುದರಿಂದ ಇವುಗಳು ಸಾಮಾನ್ಯವಾಗಿ ಆದೆ ಹೆಸರಿನಿಂದ (ದುರ್ಗ-ಚಿತ್ರದುರ್ಗ) ಗುರುತಿಸಲ್ಪಡತೊಡಗಿದುವು. ಇವುಗಳ ಚಿನ್ಹಗಳು :

ಮುಮ್ಮೈ — ವರಾಹ; ವೃಷಭಮುಖೀ ದುರ್ಗೆಯೆಂದು ಕೆಲರು.
ಹಿಮ್ಮೈ -- श्रीप्रताप कृष्णराय ( ಮೂರು ಸಾಲುಗಳಲ್ಲಿ )

**ಗಂಡೀಕೋಟೆ ಪಗೋಡ** : ಇವು ಆಳಿಯ ರಾಮರಾಯನ ವರಾಹಗಳು. ಗಂಡೀಕೋಟೆ ಟಂಕಸಾಲೆಯಿಂದ ಇವುಗಳಿಗೆ ಈ ಹೆಸರು ರೂಢವಾಯಿತು. ಇವು ತಿಮ್ಮನಾಯಕನೆಂಬ ಪಾಳೆಗಾರನು ಹೊರಡಿಸಿದುವು, ರಾಮರಾಯನವು ಅಲ್ಲ, ಎಂದು ಕೆಲರ ಅಭಿಪ್ರಾಯವು. ಇವುಗಳ ಮುಮ್ಮೈಗೆ ನಿಂತ ವಿಷ್ಣುವಿನ ಆಕೃತಿಯಿರುತ್ತದೆ.

**ಮೂರು ಸ್ವಾಮಿ ಪಗೋಡ** : ಇವು ಅರವೀಡು ತಿರುಮಲ ರಾಯನ ನಾಣ್ಯಗಳು.

ಮುಮ್ಮೈ — ಮೂರು ಆಕೃತಿಗಳು. ರಾಮ-ಲಕ್ಷ್ಮಣ-ಸೀತೆ ಎಂದು ಕೆಲವರು. ಶ್ರೀದೇವಿ-ಭೂದೇವಿ-ವೆಂಕಟೇಶ ಎಂದು ಕೆಲವರು.

ಹಿಮ್ಮೈ — ರಾಯನ ಹೆಸರು.

**ವೆಂಕಟಪತಿ ಪಗೋಡ** : ಅರವೀಡು ಒಂದನೆಯ ವೆಂಕಟಪತಿರಾಯನವು.

ಮುಮ್ಮೈ — ಛತ್ರಾಂಕಿತ ನಿಂತ ವಿಷ್ಣು.

ಹಿಮ್ಮೈ — 'ಶ್ರೀವೆಂಕಟೇಶ್ವರಾಯನಮ.' (ಮೂರು ಸಾಲುಗಳಲ್ಲಿ)
ವಿಜಯನಗರ ನಾಣ್ಯಗಳ ಕೆಲವು ಮಾದರಿಗಳನ್ನು ಇಲ್ಲಿ ಕೊಡುತ್ತೇನೆ.

೧. ಹಿರಿಯ ಬುಕ್ಕರಾಯನ ವರಾಹ :

ಮುಮ್ಮೈ — ಬಲಮೊಗದ, ಡೊಗ್ಗಾಲೂರಿದ ಗರುಡ.

ಹಿಮ್ಮೈ — ಶ್ರೀವೀ
ರ ಬುಕ
ರಾಯ (ಹಳಗನ್ನಡ ಲಿಪಿಯಲ್ಲಿ)

೨. ಇಮ್ಮಡಿ ಹರಿಹರನ ಚಿನ್ನದ ಅರ್ಧ ವರಾಹ :

ಮುಮ್ಮೈ — ಕುಳಿತ ದೇವ-ದೇವಿ.

ಹಿಮ್ಮೈ — श्रीप्र
ताप हरि
हर

೩. ಇದೇ ರಾಯನ ತಾಮ್ರದ ನಾಣ್ಯ :

ಮುಮ್ಮೈ — ಬಲಮೊಗದ ವೃಷಭ; ಮೇಲೆ ಚಂದ್ರ.

ಹಿಮ್ಮೈ — प्रताप
हरिहर

೪. ಇಮ್ಮಡಿ ದೇವರಾಯನ ವರಾಹ :

ಮುಮ್ಮೈ — ಶಿವ-ಪಾರ್ವತಿ; ಅಥವಾ ವಿಷ್ಣು-ಲಕ್ಷ್ಮಿ.

ಹಿಮ್ಮೈ — श्रीप्र
ताप देव
राय

೫. ಇದೇ ರಾಯನ ತಾಮ್ರದ ನಾಣ್ಯ, ಮಾದರಿ, ೧ :

ಮುಮ್ಮೈ — ಬಲಮೊಗದ ಆನೆ, ಮೇಲೆ ಕನ್ನಡ 'ಅ' ಅಕ್ಷರ.

ಹಿಮ್ಮೈ — ಪ್ರತಾ
ಪದೇವ (ಹಳಗನ್ನಡ ಲಿಪಿಯಲ್ಲಿ)
ರಾಯ

೬. ಇದೇ ರಾಯನ ತಾಮ್ರದ ನಾಣ್ಯ, ಮಾದರಿ ೨ :

ಮುಮ್ಮೈ — ಬಲಮೊಗದ ಆನೆ; ಮೇಲೆ ಸೂರ್ಯ-ಚಂದ್ರರು, ಕನ್ನಡ 'ದೇ' ಅಕ್ಷರ.

ಹಿಮ್ಮೈ — राय
गजगंड
भेरुंड

೭. ಕೃಷ್ಣದೇವರಾಯನ ವರಾಹ :

ಮುಮ್ಮೈ — ಶಂಖಚಕ್ರಧರ ಕುಳಿತ ವಿಷ್ಣು.

ಹಿಮ್ಮೈ — श्रीप्र
ताप कृष्ण
राय

೮. ಸದಾಶಿವರಾಯನ ವರಾಹ :

ಮುಮ್ಮೈ — ಕುಳಿತ ವಿಷ್ಣು-ಲಕ್ಷ್ಮಿ.

ಹಿಮ್ಮೈ — श्री प्रता
पसदाशि
वराय

ವಿಜಯನಗರದ ನಾಣ್ಯಗಳು ಆಕರ್ಷಕವೂ ಬಹಳ ಲೋಕಪ್ರಿಯವೂ ಆದುವು. ಇವುಗಳ ಅನುಕರಣವನ್ನು ಮುಂದೆ ವಿಜಯನಗರದ ಅನೇಕ ಮಾಂಡಲಿಕರು ಮಾಡಿದರು. ವಿಜಯನಗರ ಸಾಮ್ರಾಜ್ಯವು ನಷ್ಟವಾದ ಮೇಲೆಯೂ ಅನೇಕ ಅರಸರು, ನಾಯಕರು, ಮೈಸೂರ ಅರಸರು, ಹೈದರ, ಟೀಪು ಮುಂತಾದವರು ತಮ್ಮ ನಾಣ್ಯಗಳಲ್ಲಿ ವಿಜಯನಗರದ ಪದ್ಧತಿಯನ್ನು ಅನುಸರಿಸಿದರು. ವಿಜಯನಗರ ನಾಣ್ಯದ

ಅನುಕರಣ ಮಾಡಿದವರು : ೧. ಮದುರೆಯ ನಾಯಕರು, ೨. ತಂಜಾ ವೂರ ನಾಯಕರು, ೩. ತಿನವೆಲ್ಲಿಯ ನಾಯಕರು, ೪. ರಾಮನಾಡಿನ ಸೇತು ಪತಿ, ೫. ಚಿತ್ರದುರ್ಗದ ನಾಯಕರು ( ದುರ್ಗಿಪಗೋಡ ), ೬. ಇಕ್ಕೇರಿಯ ನಾಯಕರು, ೭. ಮೈಸೂರ ಒಡೆಯರು, ೮. ಹೈದರ ಆಲಿ, ೯. 'ಕರ್ನಾಟಕ' ದ ನವಾಬರು, ೧೦. ಹೈದರಾಬಾದದ ನಿಜಾಮರು, ೧೧. ಮದ್ರಾಸ ಈಸ್ಟ ಇಂಡಿಯಾ ಕಂಪನಿ ( ಮೂರು ಸ್ವಾಮಿ ಪಗೋಡ ), ೧೨. ಡಚ ಕಂಪನಿ, ೧೩. ಛತ್ರ ಪತಿ ಶಿವಾಜಿ.

+ + + +

ಧಾರವಾಡದ ನಾಗರಿಕರಾದ ಶ್ರೀ. ಜೋಗ ಶ್ರೀನಿವಾಸರಾಯರ ಬಳಿಯಲ್ಲಿ ವಿಜಯನಗರದ ಅರಸರ ಹಾಗೂ ಇತರರ ಚಿನ್ನದ ಮತ್ತು ಬೆಳ್ಳಿಯ ನಾಣ್ಯಗಳಿವೆ. ಅವುಗಳಲ್ಲಿ ಒಂದು ಕೃಷ್ಣದೇವರಾಯನ ವರಾ ಹವಾಗಿದೆ. ಅದರ ತೂಕವು: ೨೬-೨೭ ಗುಂಜಿ ( ಸು. ೫೩ ಗ್ರೇನ್ ). ಅದರ ಮುಮ್ಮೈಗೆ — ದೇವನ ಆಕೃತಿ (ವಿಷ್ಣು ?);

ಹಿಮ್ಮೈಗೆ — श्रीप्र
ताप कृष्ण -

ಇನ್ನೆರಡು ಮೈಸೂರ ಮುಮ್ಮಡಿ ಕೃಷ್ಣರಾಜನ ನಾಣ್ಯಗಳಿವೆ. ಅವುಗಳ ತೂಕವು : ೨೮ ಗುಂಜಿ (ಒಂದೊಂದು). ಮುಮ್ಮೈಗೆ — ಶಿವ–ಪಾರ್ವತಿ; ಹಿಮ್ಮೈಗೆ — श्री
कृष्णरा
जा

ಇದೇ ಮಾದರಿಯಲ್ಲಿ ಇನ್ನೊಂದು ನಾಣ್ಯವಿದೆ. ಇದು ಹೈದರ ಅಲಿಯ 'ಬಹಾದುರಿ ಹೊನ್ನು'. ತೂಕ : ೨೮ ಗುಂಜಿ. ಮುಮ್ಮೈಗೆ — ಶಿವ–ಪಾರ್ವತಿ;, ಹಿಮ್ಮೈಗೆ — ಫಾರಸಿ ಲಿಪಿಯ 'ಹೈ' (ಹ) ಎಂಬ ಅಕ್ಷರ; ಇದರ ಸುತ್ತಲು ಬಿಂದುಗಳ ವರ್ತುಳವು. ಇದಲ್ಲದೆ ೩ ಗುಂಜಿಯ ತೂಕವುಳ್ಳ ಚಿನ್ನದ 'ಪಣ' ಎಂಬ ನಾಣ್ಯಗಳು ಇವೆ.

———

## ನಾಲ್ಕನೆಯ ಪರಿಶಿಷ್ಟ

# ವಿಜಯನಗರದ ಧ್ವಜ.

ವಿಜಯನಗರದ ಧ್ವಜವು ಹೇಗೆ ಇದ್ದಿತು ಎಂಬುದನ್ನು ಕುರಿತು ಹೇಳುವ ಸ್ಪಷ್ಟವಾದ ಪ್ರಮಾಣಗಳಾವುವೂ ದೊರೆತಿಲ್ಲ. ಆದುದರಿಂದ ಈ ವಿಷಯವನ್ನು ಊಹೆಯಿಂದಲೇ ನಿರ್ಧರಿಸಬೇಕಾಗಿದೆ.



ನಮ್ಮ ರಾಜವಂಶಗಳಿಗೆ ಸಾಮಾನ್ಯವಾಗಿ ಎರಡು ಪ್ರಕಾರದ ಸಾಂಕೇತಿಕವಾದ ರಾಜಚಿನ್ಹಗಳು ಇರುತ್ತಿದ್ದುವು : ೧. ರಾಜಮುದ್ರೆ, ನಾಣ್ಯ, ಶಾಸನ ಮುಂತಾದುವುಗಳ ಮೇಲಿನ ಲಾಂಛನವು (crest); ೨. ಧ್ವಜಸ್ತಂಭದ ಮೇಲಿನ ಧ್ವಜಚಿನ್ಹವು (banner). ಉದಾಹರಣಾರ್ಥವಾಗಿ, ಕದಂಬರ ಲಾಂಛನವು ಸಿಂಹ; ಧ್ವಜವು ವಾನರ.

ಈಚೀಚೆಯವರಾದ ದೇವಗಿರಿಯ ಯಾದವ, ಹೊಯ್ಸಳ ಮುಂತಾದ ಅರಸರಿಗೆ ಈ ಎರಡೂ ಚಿನ್ಹಗಳು ಒಂದೇ ವಿಧವಾಗಿ ಇರುತ್ತಿದ್ದುವು. ಉದಾ : ದೇವಗಿರಿಯ ಯಾದವರಿಗೆ ಗರುಡ; ಹೊಯ್ಸಳರಿಗೆ ಹುಲಿ. ವಿಜಯನಗರದ ಅರಸರು ಈಚಿನ ಕಾಲದವರೂ ಯಾದವ ವಂಶೀಯರೂ ಆಗಿದ್ದುದರಿಂದ ಈ ಪರಂಪರೆಯನ್ನು ಅನುಸರಿಸಿ ಅವರ ಧ್ವಜ--ಲಾಂಛನ ಚಿನ್ಹಗಳಾದರೂ ಒಂದೇ ಇರಬಹುದಾಗಿ ತೋರುತ್ತದೆ. ವಿಜಯನಗರದ ಲಾಂಛನವು — ಶಾಸನಗಳ ಮೇಲಿನ ಮುದ್ರೆಯು — ವರಾಹವಾಗಿತ್ತು. ಆದುದರಿಂದ ಅವರ ಧ್ವಜ ಚಿಹ್ನೆಯಾದರೂ ವರಾಹವಾಗಿರಬೇಕು. ವಿಜಯನಗರದ ಅರಸರಿಗೆ ವರಾಹದ ಅಭಿಮಾನವು ಹೆಚ್ಚು. ಸಾಳುವ ನರಸಿಂಹ, ಅರವೀಡು ತಿರುಮಲರಾಯ ಇವರು **ಧರಣೀವರಾಹ** ಎಂಬ ಬಿರುದನ್ನು ಧರಿಸಿರುವರು.

ಈ ಚಿಹ್ನೆಯ ಸಾಮಾನ್ಯ ಸ್ವರೂಪವು ಹೀಗೆ: ಮೇಲೆ ಸೂರ್ಯ-ಚಂದ್ರರು. ಕೆಳಗೆ ಎಡಮೊಗವಾದ, ಕೋರೆದಾಡೆಯನ್ನು ಮೇಲಕ್ಕೆತ್ತಿ ನಿಂತ ಭವ್ಯವಾದ ವರಾಹವು. ಈ ವರಾಹದ ಮುಂದೆ ನಮ್ಮ ಎಡಗಡೆಗೆ ಅಲಗಿನ ತುದಿಯು ಕೆಳಗೆ, ಹಿಡಿಕೆಯು ಮೇಲೆ ಮಾಡಿದ, ನೀಟಾದ ಖಡ್ಗವು.

---

## ಐದನೆಯ ಪರಿಶಿಷ್ಟ

## ಅರಸರ ಮೂರ್ತಿಗಳು

ವಿಜಯನಗರದ ಕೆಲವು ಅರಸರ ಮೂರ್ತಿಗಳು ತಿರುಪತಿಯಲ್ಲಿ ದೊರೆತಿವೆ. ಅವುಗಳ ವಿವರವು ಹೀಗೆ :

೧. ಕೃಷ್ಣದೇವರಾಯನ ಹಾಗೂ ಆತನ ರಾಜ್ಞಿಯರ ತಾಮ್ರದ (ಕಂಚಿನ ?) ಮೂರ್ತಿಗಳು ತಿರುಪತಿ ಬೆಟ್ಟದ ಮೇಲೆ ವೆಂಕಟೇಶ್ವರ ಗುಡಿಯ ಮೊದಲನೆಯ ಗೋಪುರದ ಬಳಿಯಲ್ಲಿ ಇವೆ. ರಾಯನ ಎಡಕ್ಕೆ ಚಿನ್ನಾದೇವಿ, ಬಲಕ್ಕೆ ತಿರುಮಲಾದೇವಿ. ಈ ಮೂರ್ತಿಗಳ ಮೇಲೆ ಅವರವರ ಹೆಸರುಗಳು ಕೊರೆದಿವೆ.

೨. ಅರವೀಡು ತಿರುಮಲರಾಯನ ( ೧೫೭೦-೭೮ ) ಹಾಗೂ ಆತನ ಅರ್ಧಾಂಗಿಯಾದ ವೆಂಗಲಾಂಬೆಯ ಕಲ್ಲು ಮೂರ್ತಿಗಳು ತಿರುಪತಿ ಬೆಟ್ಟದ ಮೇಲೆ ಮೊದಲನೆಯ ಗೋಪುರದ ಬಳಿಯಲ್ಲಿ ಇವೆ. ಇವುಗಳ ಮೇಲೆ ಹೆಸರುಗಳು ಇಲ್ಲ.

೩. ತಿರುಪತಿ ಬೆಟ್ಟದ ಮೇಲೆ ವೆಂಕಟೇಶ್ವರ ಗುಡಿಯ ಗೋಪುರದ ಎಡ ಮಗ್ಗಲಿಗೆ ಅರವೀಡು ( ಒಂದನೆಯ ) ವೆಂಕಟಪತಿದೇವರಾಯನ ಮೂರ್ತಿಯು ಇದೆ.

### ಆರನೆಯ ಪರಿಶಿಷ್ಟ

## ಮುಸಲ್ಮಾನೀ ಇತಿಹಾಸಕಾರನಾದ ಫಿರಿಷ್ತ್ರ

ಮಧ್ಯಕಾಲದ ದಕ್ಷಿಣ ಭಾರತದ ಇತಿಹಾಸವನ್ನು ಅರಿತುಕೊಳ್ಳ ಲಿಕ್ಕೆ ಫಿರಿಷ್ತ್ರನ 'ಮಹಮ್ಮದೀಯ ಪ್ರಭುತ್ವದ ಉದಯಕಾಲ' ಎಂಬ ಪ್ರಚಂಡ ಇತಿಹಾಸವು ಉಪಯುಕ್ತವಾಗಿದೆ. ಈ ಇತಿಹಾಸವು ಬಹು ಸವಿಸ್ತರವೂ ಅನೇಕ ಸೂಕ್ಷ್ಮ ಸಂನಿವೇಶಗಳನ್ನು ವಿವೇಚಿಸು ವಂತಹದೂ ಆಗಿದೆ. ಆದುದರಿಂದ ಆಧುನಿಕ ಚರಿತ್ರಕಾರರೆಲ್ಲರೂ ತಮ್ಮ ಚರಿತ್ರೆಗಳಲ್ಲಿ ಈತನನ್ನು ಧಾರಾಳವಾಗಿ ಅನುಸರಿಸುವರು.

ಆದರೆ ನಿಜವಾದ ಇತಿಹಾಸದ ಒರೆಗೆ ಹಚ್ಚಿದರೆ,ಈತನ ಇತಿಹಾಸವು ತಾಳಿ ನಿಲ್ಲುವುದು ದುಸ್ತರವಾಗಿದೆ. ಅತಿಶಯೋಕ್ತಿ, ಅವಾಸ್ತವ ಕಲ್ಪನೆ, ಏಕದೇಶೀಯತ್ವ,ಪಕ್ಷಪಾತ,ಕೈಗಂಟು,ಮುಂತಾದ ಅನೇಕ ದೋಷಗಳು ಈತನಲ್ಲಿ ಒಡೆದು ಕಾಣುವುವು. ಈತನು ಮಹಮ್ಮದೀಯ ಪಕ್ಷವನ್ನು ಮನಬಂದಂತೆ ಬಣ್ಣಬಳೆದು ಚಿತ್ರಿಸುವನು. ಅನ್ಯರ ಪಕ್ಷವನ್ನು ಕೀಳುಗೊಳಿಸುವನು. ಈತನ ಗ್ರಂಥದಲ್ಲಿ ವಿಜಯನಗರದ ಅನೇಕ ವಿಷ ಯಗಳು ವರ್ಣಿತವಾಗಿವೆ. ಆದರೆ ಅವುಗಳು ನಂಬುಗೆಗೆ ಯೋಗ್ಯ ವಾಗಿಲ್ಲ. ಈತನು ೧೫೮೯ರಲಿ ವಿಜಾಪುರಕ್ಕೆ ಬಂದು ಇಮ್ಮಡಿ ಇಬ್ರಾ ಹಿಮ ಆದಿಲಶಹನ ಸೇವೆಯಲ್ಲಿದ್ದು, ೧೬೧೨ ರಲ್ಲಿ ತನ್ನ ಇತಿಹಾಸವನ್ನು ಮುಗಿಸಿದನು. ಈತನು ವಿಜಯನಗರವನ್ನು ಕಣ್ಣಿನಿಂದ ನೋಡಿರಲಿಲ್ಲ.

ಈತನ ಅವಿಶ್ವಸನೀಯತೆಯನ್ನು ಕುರಿತು ಅನೇಕ ಪ್ರಮಾಣ ಗಳನ್ನು ತೋರಿಸಬಹುದು. ಈತನು ವಿಜಯನಗರದ ಮೊದಲನೆಯ ಮನೆತನವು ೭೦೦ ವರ್ಷ ಆಳಿತು ಎಂದು ಹೇಳುವನು. ವಿಜಯನಗರದ ಅರಸರ ಹೆಸರನ್ನಂತೂ ಬೇಕಾದ ಹಾಗೆ ಉಸುರುವನು. ಬುಕ್ಕನ ಆಳಿಕೆಯನ್ನು ಹೇಳುವಾಗ ಕೃಷ್ಣದೇವರಾಯನನ್ನು ತರುವನು. ಇಮ್ಮಡಿ ಹರಿಹರನಿಗೆ 'ದೇವಲರಾಯ' ನೆಂದು ಕರೆವನು. ಇ. ಇ. ಈತನ ಪಕ್ಷಪಾತದ ಕೆಲವು ಉದಾಹರಣೆಗಳನ್ನು ಟಿಪ್ಪಣಿಗಳಲ್ಲಿ ಅಲ್ಲಲ್ಲಿ ಕಾಣಿಸಿದೆ. ನಾನು ಸಾಮಾನ್ಯವಾಗಿ ಈತನನ್ನು ಅನುಸರಿಸಿಲ್ಲ.

---

# ವಂಶಾವಳಿಗಳು

**(ಇವುಗಳಲ್ಲಿ ಮುಖ್ಯವಾದ ಹೆಸರುಗಳನ್ನಷ್ಟೆ ಕೊಟ್ಟಿದೆ)**



## ೧. ಸಂಗಮ ಮನೆತನ

ಬುಕ್ಕ

ಸಂಗಮ: ಕಾಮಾಂಬಿಕೆ (ಮಾನಾಂಬಿಕೆ ಇ.)

- **೧. ಹರಿಹರ** ೧೩೩೬-೫೬
  - ಮಗಳು: ಮುಮ್ಮಡಿ ಬಲ್ಲಾಳನ ಮಗ ಬಲ್ಲಪ್ಪ ದಂಡನಾಯಕನನ್ನು ಮದುವೆಯಾದಳು.
- ಕಂಪಣ್ಣ
  - (ಇಮ್ಮಡಿ) ಸಂಗಮ
  - ಸೋವಣ್ಣ
    - ಸಿಂಗಣ್ಣ
- **೨. ಬುಕ್ಕರಾಯ** ೧೩೫೬-೭೭
- ಮಾರಪ್ಪ
  - ಸೋವಣ್ಣ
  - ಹರಿಯಪ್ಪ
- ಮುದ್ದಪ್ಪ

**೨. ಬುಕ್ಕರಾಯ**ನ ಮಕ್ಕಳು:

- ಹೊನ್ನಾಯಿಯಿಂದ **೩. ಇಮ್ಮಡಿ ಹರಿಹರ** ೧೩೭೭-೧೪೦೪
- ಮಲ್ಲಾದೇವಿಯಿಂದ ವಿರೂಪಾಕ್ಷ ೧
  - ನಾರಾಯಣ
  - ಚಾಮಪ್ಪ
  - ತಿಮ್ಮಣ್ಣ
- ಮಲ್ಲಿನಾಥ
- ಹಿರಿಯಕಂಪಣ್ಣ
  - ಕನ್ನಯ್ಯ
  - ಕತ್ತ್ರಿಯನಾಯಕ
  - ಜೊಮ್ಮಣ್ಣ
- ಚಿಕ್ಕಕಂಪಣ್ಣ
- ಸಂಗಮ
- ಭಾಸ್ಕರ ಭವದೂರ
- ರಾಜೇಂದ್ರ
- ಸಾಯಣ್ಣ
- ಜನ್ನಾಂಬಿಕೆ
  - ವಿರೂಪದೇ
    - ಜೊಮ್ಮದೇ

**೩. ಇಮ್ಮಡಿ ಹರಿಹರ**ನ ಮಕ್ಕಳು:

- ಪಂಪಾದೇವಿಯಿಂದ **೪. (ಇಮ್ಮಡಿ) ಬುಕ್ಕರಾಯ** ೧೪೦೪-೧೪೦೬
  - ವೀರಭೂಪತಿ
    - ನಾರಾಯಣ
  - ಓಬಲದೇವ
- ಮಲ್ಲಾದೇವಿಯಿಂದ
  - **೬. ದೇವರಾಯ ೧** ೧೪೦೬-೧೪೨೨
    - ಮಲ್ಲಣ್ಣ
    - ಹೇಮಾಂಬಿಕೆಯಿಂದ **೭. ವೀರವಿಜಯರಾಯ**: ನಾರಾಯಣಾಂಬಿಕೆ ೧೪೨೨-೧೪೨೪
    - ಹರಿಹರ ೩
    - ರಾಮಚಂದ್ರ
  - **೫. ವಿರೂಪಾಕ್ಷ ೨** ೧೪೦೪-೧೪೦೫
  - ಚಿಕ್ಕರಾಯ
- ಕಂಪಣ್ಣ

**೭. ವೀರವಿಜಯರಾಯ**ನ ಮಕ್ಕಳು:

- **೮. ಇಮ್ಮಡಿ ದೇವರಾಯ**: ಪೊನ್ನಲದೇವಿ ೧೪೨೪-೪೬
  - **೯. ಮಲ್ಲಿಕಾರ್ಜುನ** ೧೪೪೬-೧೪೬೬
    - ವಿರೂಪಾಕ್ಷ ೪
      - ಪ್ರೌಢದೇವರಾಯ
        - ವಿರೂಪಾಜಿ ಅಮ್ಮ: ಅರವೀಡು ವಂಶದ ತಿಮ್ಮರಾಯ
    - ದೇವರಾಯ
    - ರಾಜಶೇಖರ
    - ನಂಜರಾಜ
    - ಪರ್ವತಯ್ಯ
    - ದೇಪಣ್ಣ
- ಪಾರ್ವತಿರಾಯ
- ಪ್ರತಾಪದೇವ: ಸಿದ್ದಲದೇವಿ
  - **೧೦. ಮುಮ್ಮಡಿ ವಿರೂಪಾಕ್ಷ** ೧೪೬೬-೧೪೮೫
- ಹರಿಯಮ್ಮ: ಸಾಳುವ ತಿಪ್ಪರಾಜ



## ೨. ಸಾಳುವ ಮನೆತನ

ವಂಕಿದೇವ

ಗುಂಡ ೧.

ಮಂಗಿ (ಆರನೆಯ ಮಗ)

ಗೌತ (ಮೂರನೆಯ ಮಗ)

- ಗುಂಡ ೪
  - **೧. ನರಸಿಂಹರಾಯ** (೨ನೆಯ ಮಗ) ೧೪೮೫-೧೪೯೬
    - **೨. ಇಮ್ಮಡಿ ನರಸಿಂಹ** (೨ನೆಯ ಮಗ) ೧೪೯೬-೧೫೦೬
      - ನರಸಿಂಹ
      - ದೇವಪ್ಪ
      - ಚಿಕ್ಕರಾಯ
- ತಿಪ್ಪರಾಜ (೪ನೆಯ ಮಗ) ಹೆಂಡತಿ: ಸಂಗಮ ವಿಜಯರಾಯನ ಮಗಳು ಹರಿಯಮ್ಮ

# ೩. ತುಳು ಮನೆತನ

- ತಿಮ್ಮ : ದೇವಕಿ
  - ಈಶ್ವರ : ಬುಕ್ಕಮ್ಮ
    - **೧. ನರಸನಾಯಕ** ೧೪೯೬–೧೫೦೩
      - ತಿಪ್ಪಾಂಬೆಯಿಂದ
        - **೨. ವೀರನರಸಿಂಹ** ೧೫೦೩–೧೫೦೯
          - ಮಗ
      - ನಾಗಲದೇವಿಯಿಂದ
        - **೩. ಕೃಷ್ಣದೇವರಾಯ** ೧೫೦೯–೧೫೩೦
          - ತಿರುಮಲ (೬ ವರ್ಷ) ಯುವರಾಜ **೧೫೨೪**
          - ಮಗು (೧೮ ತಿಂಗಳು)
          - ತಿರುಮಲಾಂಬೆ : ಅಳಿಯ ರಾಮರಾಯ
            - ಕೃಷ್ಣ
            - ತಿಮ್ಮ
          - ವೆಂಗಲಾಂಬೆ : ತಿರುಮಲ (ಅರವೀಡು)
      - ಓಬಾಂಬೆಯಿಂದ
        - **೪. ಅಚ್ಯುತದೇವರಾಯ** ೧೫೩೦–೧೫೪೨
          - ವೆಂಕಟಾದ್ರಿ (೧೫೪೨)
        - ರಂಗ
          - **೫. ಸದಾಶಿವರಾಯ** ೧೫೪೨–೧೫೭೦
            - ವಿಠ್ಠಲ
            - ಮಗಳು

---

# ೪. ಅರವೀಡು ಮನೆತನ

- ತಾತ ಪಿನ್ನಮ
  - ಸೋಮದೇವ
    - (ಮರಿಮಗ) ಅರವೀಟಿ ಬುಕ್ಕ
      - ರಾಮರಾಜ ೧
        - ಶ್ರೀರಂಗ ೧ (೩ನೆಯ ಮಗ)
          - (೩ನೆಯ ಮಗ) **ಅಳಿಯ ರಾಮರಾಯ** ೧೫೪೨–೧೫೬೫
            - (೫ನೆಯಮಗ) ಶ್ರೀರಂಗ ೪
              - **೬. ಇಮ್ಮಡಿ ವೆಂಕಟಪತಿ** ೧೬೩೦–೧೬೪೨
                - (೨ನೆಯ ಮಗ) ವೆಂಕಟ ೪
                  - ಕೋದಂಡರಾಮ
                    - ಪೆದ್ದವೆಂಕಟ ೬
                    - ಚಿನ್ನವೆಂಕಟ ೮
                    - ಕೋದಂಡರಾಮ ೨
                    - ವೆಂಕಟ ೯
                  - ತಿರುಮಲ ೩
                    - ಶ್ರೀರಂಗ ೭
                    - ಚಿನ್ನವೆಂಕಟ ೭
                  - ವೆಂಕಟ ೫
                - **೭. ಅರ್ವಿಡಿ ಶ್ರೀರಂಗ** ಗೋಪಾಲನಿಗೆ ದತ್ತಕ ೧೬೪೨–೧೬೭೮
              - ಚಿನ್ನವೆಂಕಟ ೩
          - (೪ನೆಯ ಮಗ) **೧. ತಿರುಮಲ** ೧೫೭೦–೧೫೭೨
            - ರಘುನಾಥ
            - **೨. ಇಮ್ಮಡಿ ಶ್ರೀರಂಗ** ೧೫೭೨–೧೫೮೫
              - ತಿರುಮಲ
              - **೪. ಮುಮ್ಮಡಿ ಶ್ರೀರಂಗ** ೧೬೧೪
                - (೨ನೆಯ ಮಗ) **೫. ರಾಮದೇವ** ೧೬೧೪–೧೬೩೦
                - ನಾಲ್ವರು ಮಕ್ಕಳು (೨ ಹೆಣ್ಣು, ೨ ಗಂಡು)
            - ರಾಮದೇವ
            - **೩. ವೆಂಕಟಪತಿ** ೧೫೮೫–೧೬೧೪
          - (೫ನೆಯ ಮಗ) ವೆಂಕಟಾದ್ರಿ
            - ರಾಮರಾಜ
            - ಶ್ರೀರಂಗ ೫
              - ವೆಂಕಟ
              - ಗೋಪಾಲ
                - (ದತ್ತಕಪುತ್ರ) **೭. ಅರ್ವಿಡಿ ಶ್ರೀರಂಗ** ೧೬೪೨–೧೬೭೮
                  - ದೇವದೇವ
          - ನಾಲ್ವರು ಹೆಣ್ಣುಮಕ್ಕಳು

## ೫. ಮದುರೆಯ ನಾಯಕರು


ನಾಗಮನಾಯಕ
೧. ವಿಶ್ವನಾಥ ೧೫೨೯–೬೪
೨. ಕೃಷ್ಣಪ್ಪ ೧೫೬೪–೭೨
೩. ವೀರಪ್ಪ ೧೫೭೨–೯೫
೪. ಇಮ್ಮಡಿ ಕೃಷ್ಣಪ್ಪ ೧೫೯೫–೧೬೦೧
ವಿಶ್ವಪ್ಪ
೫. ಮುತ್ತುಕೃಷ್ಣಪ್ಪ ೧೬೦೧–೧೬೦೯
೬. ಮುತ್ತುವೀರಪ್ಪ ೧ ೧೬೦೯–೨೩
೭. ತಿರುಮಲ ೧೬೨೩–೫೯
೮. ಇಮ್ಮಡಿ ಮುತ್ತುವೀರಪ್ಪ ೧ ೧೬೫೯
೯. ಚೊಕ್ಕನಾಥ ೧೬೫೯–೮೨
೧೦. ಮುಮ್ಮಡಿ ಮುತ್ತುವೀರಪ್ಪ ೧೬೮೨–೮೯
೧೧. ಮಂಗಮ್ಮಾಳ್ (೯–ರ ಪತ್ನಿ) ೧೬೮೯–೧೭೦೬
೧೨. ವಿಜಯರಂಗ (೧೦–ರ ಮಗ) ೧೭೦೬–೩೨
೧೩. ಮೀನಾಕ್ಷಿ (೧೨–ರ ಪತ್ನಿ) ೧೭೩೨–೩೬.

# ೬. ಕೆಳದಿಯ ಅರಸರು

ಪ್ರತಿಯೊಂದು ಹೆಸರಿನ ಮುಂದೆ (ಇಲ್ಲದೆಡೆಯಲ್ಲಿ) ನಾಯಕ ಎಂಬ ಪದವನ್ನು ಜೋಡಿಸಿಕೊಳ್ಳಬೇಕು.

೧. ಚೌಡಪ್ಪನಾಯಕ (ಹುಲಿಬೈಲು ಬಸಪ್ಪನ ಮಗ) ೧೪೯೯-೧೫೧೩
೨. ಸದಾಶಿವನಾಯಕ (೧ನೆಯವರ ಮಗ) ೧೫೧೩-೪೫
೩. ಸಂಕಣ್ಣ ೧ (೨ನೆಯವರ ಮಗ) ೧೫೪೫-೫೮
೪. ಸಂಕಣ್ಣ ೨ (೩-ರ ತಮ್ಮ) ೧೫೫೮-೭೦
೫. ರಾಮರಾಜ (೩-ರ ಮಗ) ೧೫೭೦-೮೨
೬. ವೆಂಕಟಪ್ಪ ೧ (೫-ರ ತಮ್ಮ) ೧೫೮೨-೧೬೨೯
೭ ವೀರಭದ್ರ (ಭದ್ರಪ್ಪನ ಮಗ, ೬-ರ ಮೊಮ್ಮಗ) ೧೬೨೯-೪೫
೮. ಶಿವಪ್ಪ (ಸಿದ್ದಪ್ಪನ ಮಗ, ೪-ರ ಮೊಮ್ಮಗ) ೧೬೪೫-೬೦
೯. ವೆಂಕಟಪ್ಪ ೨ (೮-ರ ತಮ್ಮ) ೧೬೬೦-೬೧
೧೦. ಭದ್ರಪ್ಪ (೮-ರ ಮಗ) ೧೬೬೧-೬೩
೧೧. ಸೋಮಶೇಖರ ೧ (೧೦-ರ ತಮ್ಮ) ೧೬೬೩-೭೧
೧೨. ಚನ್ನಮ್ಮಾಜಿ (೧೧-ರ ಪತ್ನಿ) ೧೬೭೧-೯೭
೧೩. ಬಸಪ್ಪ ೧ (೧೨-ರ ದತ್ತಕ ಮಗ) ೧೬೯೭-೧೭೧೪
೧೪ ಸೋಮಶೇಖರ ೨ (೧೩-ರ ಮಗ) ೧೭೧೪-೩೯
೧೫. ಬಸಪ್ಪ ೨ (ವೀರಭದ್ರಪ್ಪನ ಮಗ, ೧೪-ರ ಅಣ್ಣನ ಮಗ) ೧೭೩೯-೫೪
೧೬. ಚನ್ನಬಸಪ್ಪ (೧೫-ರ ದತ್ತಕ ಮಗ) ೧೭೫೪-೫೭
೧೭. ವೀರಮ್ಮಾಜಿ (೧೫-ರ ಪತ್ನಿ) ೧೭೫೭-೬೩
೧೮. ಸೋಮಶೇಖರ ೩ (೧೭-ರ ದತ್ತಕ ಮಗ) .. ..

**ಒಟ್ಟು ಆಳಿಕೆಯ ಕಾಲ: ೨೬೫ ವರ್ಷ, ೧ ತಿಂಗಳು, ೨೫ ದಿನಗಳು**

# ೭. ಮೈಸೂರ ಒಡೆಯರು

( ಅರಮನೆಯ ವಂಶಾವಳಿಯಂತೆ )

| | | |
|---|---|---|
| ೧. | ಯದುರಾಯ (ವಿಜಯ) | ೧೩೯೯–೧೪೨೩ |
| ೨. | ಹಿರಿಯ ಬೆಟ್ಟದ ಚಾಮರಾಜ ೧ | ೧೪೨೩–೫೮ |
| ೩. | ತಿಮ್ಮರಾಜ ೧ | ೧೪೫೮–೭೮ |
| ೪. | ಹಿರಿಯ ಚಾಮರಾಜ ೨ | ೧೪೭೮–೧೫೧೩ |
| ೫. | ಬೆಟ್ಟದ ಚಾಮರಾಜ ೩ | ೧೫೧೩–೫೨ |
| ೬. | ತಿಮ್ಮರಾಜ ೨ | ೧೫೫೨–೭೧ |
| ೭. | ಬೋಳ ಚಾಮರಾಜ ೪ | ೧೫೭೧–೭೬ |
| ೮. | ಬೆಟ್ಟದ ಚಾಮರಾಜ ೫ | ೧೫೭೬–೭೮ |
| ೯. | ರಾಜ ಒಡೆಯರ್ ೧ | ೧೫೭೮–೧೬೧೭ |
| ೧೦. | ಚಾಮರಾಜ ೬ | ೧೬೧೭–೩೭ |
| ೧೧. | ರಾಜ ಒಡೆಯರ್ ೨ | ೧೬೩೭–೩೮ |
| ೧೨. | ಕಂಠೀರವ ನರಸರಾಜ | ೧೬೩೮–೫೯ |
| ೧೩. | ದೊಡ್ಡ ದೇವರಾಜ | ೧೬೫೯–೭೨ |
| ೧೪. | ಚಿಕ್ಕ ದೇವರಾಜ | ೧೬೭೨–೧೭೦೪ |
| ೧೫. | ಕಂಠೀರವ ಒಡೆಯರ್ | ೧೭೦೪–೧೩ |
| ೧೬. | ದೊಡ್ಡ ಕೃಷ್ಣರಾಜ ೧ | ೧೭೧೩–೩೧ |
| ೧೭ | ಚಾಮರಾಜ ೭ | ೧೭೩೧–೩೪ |
| ೧೮. | ಕೃಷ್ಣರಾಜ ೨ | ೧೭೩೪–೬೬ |
| ೧೯. | ನಂಜರಾಜ | ೧೭೬೬–೭೦ |
| ೨೦. | ಬೆಟ್ಟದ ಚಾಮರಾಜ ೮ | ೧೭೭೦–೭೬ |
| ೨೧. | ಖಾಸ ಚಾಮರಾಜ ೯ | ೧೭೭೬–೯೬ |
| ೨೨. | ಕೃಷ್ಣರಾಜ ೩ | ೧೭೯೯–೧೮೬೮ |
| ೨೩. | ಚಾಮರಾಜೇಂದ್ರ ಒಡೆಯರು ೧೦ | ೧೮೬೮–೯೪ |
| ೨೪. | ನಾಲ್ವಡಿ ಶ್ರೀಕೃಷ್ಣರಾಜ ಒಡೆಯರು | ೧೮೯೫— |

# ೮. ಕಲಬುರ್ಗಿಯ ಬಹಮನೀ ಸುಲ್ತಾನರು

(ಫಿರಿಷ್ತನು ಹೇಳಿರುವಂತೆ)

ಪ್ರತಿಯೊಂದು ಹೆಸರಿನ ಮುಂದೆ ಶಹ ಎಂಬ ಪದವನ್ನು ಜೋಡಿಸಿಕೊಳ್ಳಬೇಕು.

| | | | |
|---|---|---|---|
| ೧. | ಅಲಾವುದ್ದೀನ ಹಸನ ೧. | ೧೩೪೭–೫೮ | |
| ೨. | ಮುಹಮ್ಮದ ೧ | ೧೩೫೮–೭೫ | |
| ೩. | ಮುಜಾಹಿದ | ೧೩೭೫–೭೮ | |
| ೪. | ದಾವೂದ | ೧೩೭೮ | |
| ೫. | ಮಹಮೂದ ೧ | ೧೩೭೮-೯೭ | |
| ೬. | ಘಿಯಾಸುದ್ದೀನ | ೧೩೯೭ | |
| ೭. | ಶಮ್ಸುದ್ದೀನ | ೧೩೯೭ | |
| ೮ | ಫಿರೋಜ | ೧೩೯೭–೧೪೨೨ | |
| ೯. | ಅಹಮದ ೧ | ೧೪೨೨–೩೫ | |
| ೧೦. | ಅಲಾವುದ್ದೀನ ೨ | ೧೪೩೫–೫೮ | |
| ೧೧. | ಹುಮಾಯೂನ | ೧೪೫೮–೬೧ | |
| ೧೨. | ನಿಜಾಮು | ೧೪೬೧–೬೩ | |
| ೧೩. | ಮುಹಮ್ಮದ ೨ | ೧೪೬೩–೮೨ | |
| ೧೪. | ಮಹಮೂದ ೨ | ೧೪೮೨–೧೫೧೮ | |
| ೧೫. | ಅಹಮದ ೨ | ೧೫೧೮–೨೧ ? | ಹೆಸರಿಗೆ ಅರಸರು |
| ೧೬. | ಅಲಾವುದ್ದೀನ ೩ | ೧೫೨೧ ? | |
| ೧೭. | ವಲೀ–ಉಲ್ಲಾ | ೧೫೨೧– ೨೩ ? | |
| ೧೮. | ಕಲೀಮ ಉಲ್ಲಾ | ೧೫೨೩–೨೮ ? | |

# ೯. ವಿಜಾಪುರದ ಆದಿಲಶಹರು

ಪ್ರತಿಯೊಂದು ಹೆಸರಿನ ಮುಂದೆ ಶಹ ಎಂದು ಜೋಡಿಸಿಕೊಳ್ಳಬೇಕು.

| | |
|---|---|
| ೧ ಯುಸೂಫ | ೧೪೮೯–೧೫೧೦ |
| ೨. ಇಸ್ಮಾಯಿಲ | ೧೫೧೦ - ೩೪ |
| ೩ ಮಲ್ಲೂ | ೧೫೩೪ - ೩೫ |
| ೪. ಇಬ್ರಾಹಿಮ ೧ | ೧೫೩೫ - ೫೭ |
| ೫. ಅಲೀ ೧ | ೧೫೫೭ - ೮೦ |
| ೬. ಇಬ್ರಾಹಿಮ ೨ | ೧೫೮೦–೧೬೨೬ |
| ೭. ಮುಹಮ್ಮದ | ೧೬೨೬ - ೫೬ |
| ೮ ಅಲೀ ೨ | ೧೬೫೬ - ೫೯ |
| ೯. ಸಿಕಂದರ | ೧೬೫೯ - ೮೬ |

# ೧೦. ಅಹಮದನಗರದ ನಿಜಾಮಶಹರು

ಪ್ರತಿಯೊಂದು ಹೆಸರಿನ ಮುಂದೆ ಶಹ ಎಂದು ಜೋಡಿಸಿಕೊಳ್ಳಬೇಕು

| | |
|---|---|
| ೧. ಅಹಮದ | ೧೪೯೦-೧೫೦೮ |
| ೨. ಬುರ್ಹಾಣ ೧ | ೧೫೦೮ - ೫೩ |
| ೩. ಹುಸೇನ | ೧೫೫೩ - ೬೫ |
| ೪. ಮುರ್ತಜಾ | ೧೫೬೫ - ೮೭ |
| ೫. ಮೀರಾನ್ | ೧೫೮೭ - ೮೮ |
| ೬ ಇಸ್ಮಾಯಿಲ | ೧೫೮೮ - ೯೦ |
| ೭. ಬುರ್ಹಾಣ ೨ | ೧೫೯೦ - ೯೫ |
| ೮. ಇಬ್ರಾಹಿಮ | ೧೫೯೫ |
| ೮. ಅಹಮದ ಇಬ್ನ ಶಾಹ ತಹೀರ್ | ೧೫೯೫ - ೯೬ |
| ೧೦. ಬಹಾದೂರ್ | ೧೫೯೬ - ೯೯ |

## ೧೧. ಗೋವಳಕೊಂಡದ ಕುತುಬ ಶಹರು

ಪ್ರತಿಯೊಂದು ಹೆಸರಿನ ಮುಂದೆ ಶಹ ಎಂದು ಜೋಡಿಸಿಕೊಳ್ಳಬೇಕು.

| | | |
|---|---|---|
| ೧. | ಕುಲೀ | ೧೫೧೨–೪೩ |
| ೨. | ಜಮುಶೀದ | ೧೫೪೩–೫೦ |
| ೩. | ಇಬ್ರಾಹಿಮು | ೧೫೫೦–೮೧ |
| ೪. | ಮಹಮ್ಮದ | ೧೫೮೧–೧೬೧೧ |
| ೫. | ಅಬ್ದುಲ್ಲಾ | ೧೬೧೧–೭೨ |
| ೬. | ಅಬೂಹಸನ | ೧೬೭೨–೮೭ |

## ೧೨. ಮರಾಟರು—ಛತ್ರಪತಿ

ಪ್ರತಿಯೊಂದು ಹೆಸರಿನ ಹಿಂದೆ ಛತ್ರಪತಿ ಎಂದು ಜೋಡಿಸಿಕೊಳ್ಳಬೇಕು.

| | | |
|---|---|---|
| ೧. | ಶಿವಾಜಿ | (ಜನ್ಮ) ೧೬೨೭-೧೬೮೦ |
| ೨. | ಸಂಭಾಜಿ | ೧೬೮೦–೧೬೮೯ |
| ೩. | ರಾಜಾರಾಮ | ೧೬೮೯–೧೭೦೦ |
| ೪. | ಶಿವಾಜಿ ೨<br>ರಾಜಮಾತಾ ತಾರಾಬಾಯಿ | ೧೭೦೦–೧೭೦೮ |
| ೫. | ಶಾಹು | ೧೭೦೮–೧೭೪೮ |

# ಸೂಚಿ (Index)

**ಇದರಲ್ಲಿ ಮುಖ್ಯವಾದ ವಿಷಯ ಮತ್ತು ಹೆಸರುಗಳನ್ನಷ್ಟೇ ಎತ್ತಿಕೊಂಡಿದೆ. ಅಂಕೆಗಳು ಪುಟಗಳ ಸಂಖ್ಯೆಯನ್ನು ಹೇಳುವವು.**

ಖ



ಗ



ಚ



ಜ



ಟ



ತ



ಥ

ಮುದ್ದ ದಂಡನಾಥ : ೪೩, ೪೯

ಮುಹಮ್ಮದ ಶಹ ೧ (ಕಲಬುರ್ಗಿ): ೩೬, ೩೮.

ಮುಹಮ್ಮದಶಹ ೨ (ಕಲಬುರ್ಗಿ): ೭೧, ೭೩, ೭೬, ೮೪.

ಮೂರು ರಾಯರ ಗಂಡ: ೫೮.

ಮೂವರು ರಾಯರ ಗಂಡಭೇರುಂಡ ೮೯.

ಮೇದಿನೀ ಮೀಸರ ಗಂಡ ೮೯.

**ಯ**



**ರ**

## ಲ



## ವ

ಶ

# ತಿದ್ದುಪಡೆ

ಮುದ್ರಣ ಮುಂತಾದುವುಗಳ ಮುಖ್ಯವಾದ ತಪ್ಪುಗಳನ್ನು ಇಲ್ಲಿ ಕಾಣಿಸಿದೆ.

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೮ | ಕಡೆಯಂದು | 'ವೀರಕಂಪಣರಾಯಚರಿತಂ' | 'ವೀರಕಂಪರಾಯಚರಿತಂ |
| ೧೧ | ಕೆಳಗಿನಿಂದ ೮ | (೧೯೨೩) | (೧೩೨೩) |
| ೧೭ | ೬ | **ವೈತಾಖ** | **ವೈಶಾಖ** |
| ೧೮ | ೧೫ | (೧೩೩೬—೧೩೩೬) | (೧೩೩೬—೧೩೪೬) |
| ೨೦ | ೧೨ | ಏಕತ್ರಿತ | ಏಕತ್ರ |

೬೪ ಕೆಳಗಿನಿಂದ ೪ ಮತ್ತು ೧, ಇವುಗಳಲ್ಲಿಯ ಗುಬ್ಬಿಯ ಮಲ್ಲಣಾರ್ಯ ಮತ್ತು ವೀರಶೈವಾಮೃತಪುರಾಣ ಈ ಶಬ್ದಗಳು ಇಲ್ಲವೆಂದು ತಿಳಿಯಬೇಕು.

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೩೪ | ೧೫ | ಆಮುಕ್ತಮಾಲ್ಯದ | ಆಮುಕ್ತಮಾಲ್ಯದಾ |
| ೧೩೬ | ಕೆಳಗಿನಿಂದ ೭ | ಹೆಬ್ಬಾಗಿಲವೂ | ಹೆಬ್ಬಾಗಿಲೂ |
| ,, | ,, ೬ | ಹೆಬ್ಬಾಗಿಲದ | ಹೆಜ್ಬಾಗಿಲಿನ |
| ,, | ,, ೩ | ಬಾಗಿಲವೂ | ಬಾಗಿಲೂ |
| ೧೪೫ | ,, ೩ | ಎಳೆಹರೆಯ | ಎಳಹರೆಯದ |
| ೧೬೦ | ೭ | ಎಳೆಹರೆಯದ | ಎಳಹರಯದ |
| ೧೭೦ | ೫ | ಇವುಗಳ ಮಾರ್ಗವಾಗಿ | ಇವುಗಳ ನಡುವಿನ ಮಾರ್ಗವಾಗಿ |
| ೧೮೯ | ಕೆಳಗಿನಿಂದ ೭ | ಸನ್ನಿವೇಶನಗಳಲ್ಲಿ | ಸನ್ನಿವೇಶಗಳಲ್ಲಿ |
| ೨೦೫ | ೧ | ಚಾರಾಸಿ | 'ಚೌರಾಸಿ' |
| ೨೨೩ | ೧೦ | ಕಕುತ್ಸ್ಥವಿಜಯಂ | ಕಾಕುತ್ಸ್ಥವಿಜಯಮು |

